# ಹೊಸತು




ನೆಮ್ಮದಿಯ ನಾಳೆ ನಮ್ಮದು

ಆಗಸ್ಟ್ ೨೦೦೪
ಬೆಲೆ : ರೂ. ೧೦

ಬರಗೂರರ ಹೊಸ ಚಲನಚಿತ್ರ 'ಶಾಂತಿ'

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...


ಗೋಕಾಕ್ ವರದಿ, ಭಾಷಾ ಯಜಮಾನಿಕೆ ಮತ್ತು... — *ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ* ... ೪೬

ತಮಿಳಿಗೆ ಕ್ಲಾಸಿಕಲ್ ಭಾಷೆಯ ಪಟ್ಟ ಕಟ್ಟಿದ ಯು.ಪಿ.ಎ. ! — *ಡಾ॥ ಕೆ. ಮರುಳಸಿದ್ದಪ್ಪ* ... ೧೨

ಹಿಂಸೆ - ಪ್ರತಿಹಿಂಸೆ - ಶೋಷಕ - ಸೃಜನಶೀಲ — *ಕೆ. ಎಸ್. ಪಾರ್ಥಸಾರಥಿ* ... ೮

ಜೇಡನ ಬಲೆ — *ಸಿಪ್ರಿಯನ್ ಎಕ್‌ವೆನ್ಸಿ* ... ೧೮

ರಾತ್ರಿ — *ವಿಜಯಾ ಶ್ರೀಧರ್* ... ೨೫

ಅರ್ಥವೃತ್ತ — *ರೇಣುಕಾ ಮಂಜುನಾಥ್* ... ೨೩

ಗೆದ್ದಲು ಮನುಜ — *ವೆಂಕಟಾಚಲ* ... ೨೬

ಗುಟಕಾ ಗುಲಾಮನಾಗದ ತನಕ ದೊರೆಯದಣ್ಣ ಮುಕುತಿ — *ಭಾಲಚಂದ್ರ ಜಯಶೆಟ್ಟಿ* ... ೩೦

ಕಾವ್ಯಧಾರೆ ... ೨೦, ೨೯, ೩೯, ೫೪, ೫೮

ಒಂದು ಬಾಂಬು ಮಾಡುವ ವಿಧ್ವಂಸಕ ಕೆಲಸ — *ಅಬ್ದುಲ್ ಮಜೀದ್ ಖಾನ್* ... ೧೪

ಹೊಸ್ತಿಲಲ್ಲಿ ಹುಲ್ಲು ಹುಟ್ಟಿ... — *ಡಾ॥ ಅನಿಲ ಕಮತಿ* ... ೨೮

ಸಾಂಸ್ಕೃತಿಕ ಪರ್ಯಾಯವೆಂಬ ಹಿಮ್ಮುಖ ಚಲನೆಯ ಧೋರಣೆ — *ಅರವಿಂದ ಚೊಕ್ಕಾಡಿ* ... ೩೨

'ಶಾಂತಿ'ಯ ಸಂಕಟ ಪಾರಿವಾಳ ಮತ್ತು ಪಿಸ್ತೂಲು — *ಡಾ॥ ರಂಗರಾಜ ವನದುರ್ಗ* ... ೩೫

ಅನನ್ಯ ಪ್ರತಿಭೆ ಮಾನವೀಯ ಕಾಳಜಿಗಳ ಅಪೂರ್ವ ಸಂಗಮ - ಬ್ರಾಂಡೊ — *ಎಸ್. ಸುರೇಂದ್ರ* ... ೩೮

ಕಿಂದರಿ ಜೋಗಿ — *ಎಚ್. ಎಸ್. ಮಂಜುನಾಥ* ... ೪೦

ಪುಟ್ಟಮ್ಮಣ್ಣಿಯ ಪತ್ತೆ ತರದೂದು — *ಬೀರಣ್ಣ, ಗೊಂದಲಪುರ* ... ೪೨

ಶ್ರೀ ಗುರುವೇ ಅರಿವೇ... — *ಭಾರತೀ ಕಾಸರಗೋಡು* ... ೧೧

ಬಾಯಾರಿವೆ ಬಾವಿ, ಕೆರೆಗಳು, ಕಟ್ಟೆ ಹೊಂಡಗಳು — *ಶಿವಶಕ್ತಿ ಪ್ರಸನ್ನಕುಮಾರ್* ... ೪೩

ಚಿತ್ರದುರ್ಗ ಕುರಿತ 'ತ್ರಿವಳಿ' — *ಡಾ॥ ಎಸ್. ಪ್ರಸಾದಸ್ವಾಮಿ* ... ೫೩

ಆತ್ಮಹತ್ಯೆಯನ್ನು ತಡೆಯಬಹುದೇ ? — *ಡಾ॥ ಸಿ. ಆರ್. ಚಂದ್ರಶೇಖರ್* ... ೪೯

ಇರಾಕ್ : ಅಮೆರಿಕಾದ ಮುಗಿಯದ ಯುದ್ಧ — *ಸೀಯಾರ್ಕೆ* ... ೫೨

ಸ್ತ್ರೀ ಸ್ವಾತಂತ್ರ್ಯದಲ್ಲಿ ನೈತಿಕತೆಯ ಪ್ರಶ್ನೆಗಳು — *ಡಾ॥ ಮಾಧವಿ ಭಂಡಾರಿ* ... ೫೭

ಕೆ. ಬಿ. ಸಿದ್ದಯ್ಯನವರ ಅನಾತ್ಮದ ಹಾದಿಯಲ್ಲಿ ಒಂದಷ್ಟು ದೂರ — *ಎಸ್. ನಟರಾಜ ಬೂದಾಳು* ... ೬೦

ಆಕಾಶಗಂಗೆಯ ಸೊಬಗು — *ಡಾ॥ ಬಿ. ಎಸ್. ಶೈಲಜಾ* ... ೫೬

ಹೊಸ ಓದು — *ಇಂದಿರಾ ಕುಮಾರಿ* ... ೪೧

ಸ್ನೇಹಕ್ಕೆ ಸ್ನೇಹ ಪ್ರೀತಿಗೆ ಪ್ರೀತಿ — *ಜಯದೇವಪ್ಪ ಜೈನಕೇರಿ* ... ೬೧



**ಚಿತ್ರಗಳು** : ಕಮಲಂ ಅರಸು, ಶ್ರೀಹರಿ, ಸ್ಯಾಮ್, ಎನ್. ಆರ್. ಬೊಮ್ಮಳ್ಳಿ, ಜಿ. ಎಂ. ಬೊಮ್ಮಳ್ಳಿ, ರವಿಕುಮಾರ್ ಅಜ್ಜೀಪುರ

**ಛಾಯಾಚಿತ್ರ** : ಬರಗೂರರ 'ಶಾಂತಿ' ಚಲನಚಿತ್ರದ ದೃಶ್ಯ

**ವಿನ್ಯಾಸ** : ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ** : ಜಿ. ವಿ. ತೇಜೋವತಿ


## ಈ ತಿಂಗಳು

**ನಾ**ಲ್ಕು ವರ್ಷಗಳ ಹಿಂದೆ ಮಾನ್ಯ ರಾಜಕುಮಾರ್ ಅವರನ್ನು ವೀರಪ್ಪನು ಕಾಡಿಗೆ ತರುಬಿಕೊಂಡು ಹೋದದ್ದು ಕೇವಲ ಕಲಾವಿದನೊಬ್ಬನ ಸಖ್ಯದ ಸುಖವನ್ನು ಅನುಭವಿಸಲು ಅಲ್ಲ, ಇದು ರಾಜ್ಯದ ಎಲ್ಲ ರಾಜಕೀಯ ಪಕ್ಷಗಳಿಗೂ ಗೊತ್ತಿದೆ. ವೀರಪ್ಪನ ಆತಿಥ್ಯವನ್ನು ತೊರೆದು ಬರಲು ಸಿನಿಮಾ ಶೈಲಿಯ ಢಿಶುಂ ಢಿಶುಂ ಸಮರ್ಥವಾಗುವಂತಿರಲಿಲ್ಲ. ಬೆಂಗಳೂರಿನ ಉರುಳು ಸೇವೆ ಮತ್ತು ಮರುಳು ಸೇವೆಗಳೂ ನಿಷ್ಪ್ರಯೋಜಕವಾಗಿದ್ದುವು. ವರನಟರನ್ನು ವೀರಪ್ಪನಿಂದ ಬಿಡಿಸಿ ತರಲು ಇದ್ದುದು ಒಂದೇ ತಂತ್ರ: ಅವನ ಬಾಯಿಗೆ ಒಂದಷ್ಟು ಕೋಟಿ ಹಣ ಸುರಿಯುವುದು. ಅದನ್ನೆಲ್ಲಿಂದ ತರುವುದು ? ರಾಜ್ಯದ ಬೊಕ್ಕಸದಿಂದಲೇ ಕೊಡುವಂತಿದ್ದರೆ ಯಾವ ತಾಪತ್ರಯವೂ ಉದ್ಭವಿಸುತ್ತಿರಲಿಲ್ಲ. ಅದು ಸಾಧ್ಯವಿಲ್ಲದಾಗ ಬಹುಶಃ ಸಿನಿಮಾ ಜನ ಇಲ್ಲವೆ ರಾಜಕುಮಾರ್ ಕುಟುಂಬ ನೀಡಬಹುದಾಗಿತ್ತು. ಆದರೆ ಹಾಗಾಗಲಿಲ್ಲ. ಆದ್ದರಿಂದ ಹೆಂಡದ ದೊರೆಗಳಂತಹವರನ್ನು ಆಶ್ರಯಿಸುವುದು ಅನಿವಾರ್ಯವಾಯಿತೆಂದು ತೋರುತ್ತದೆ. ಈ ಬೆಳವಣಿಗೆಗಳು ಸನ್ಮಾನ್ಯ ಯಡಿಯೂರಪ್ಪನವರಾದಿಯಾಗಿ ಎಲ್ಲರಿಗೂ ತಿಳಿದಿರಬಹುದಾದ ಸಂಗತಿ. ಹೀಗಿರುವಾಗ, ಏನೋ ಹೊಸ ಬೆಳಕು ಚೆಲ್ಲಿತೆಂಬಂತೆ ಈಗ ರಾಜಕೀಯ ನಟನೆ ನಡೆಯುತ್ತಿದೆ. ಖೋಟಾ ಸ್ಟಾಂಪ್ ಕಾಗದ ಮಾಡಿ ಮಾರಿದ್ದನೆನ್ನಲಾದ ತೇಲ್ಗಿಯೂ ಅಂದು ಹಣ ಕೊಟ್ಟಿದ್ದಿರಬಹುದು. ಅದೆಲ್ಲವನ್ನೂ ಪತ್ತೆಹಚ್ಚಿ ತೇಲ್ಗಿಯನ್ನು ಶೂಲಕ್ಕೇರಿಸಲು ಅಭ್ಯಂತರವಿದೆಯೆ ? ಆದರೆ ಸಂಗ್ರಾಮ ಸಿಂಹನ ಅರ್ಭಟವು ಏನೋ ಗಹನವಾದ ಗುಟ್ಟನ್ನು ಬಹಿರಂಗಗೊಳಿಸಿದೆಯೆಂಬಂತೆ ಕೆಲವು ರಾಜಕೀಯ ಶಿರೋಮಣಿಗಳು ಮಾತನಾಡುತ್ತಿರುವುದು ಅರ್ಥರಹಿತವಾಗಿದೆ. ಜೊತೆಗೆ, ನಮ್ಮಲ್ಲಿ ಮೂಟೆಗಟ್ಟಲೆ ತುಂಬಿರುವ ಹಗರಣಗಳಲ್ಲಿ ಸಿಕ್ಕಿಬಿದ್ದವರೆಲ್ಲಾ ದಸ್ತಗಿರಿಯಾಗುವ ಸಂದರ್ಭಗಳಲ್ಲಿ ಅಬ್ಬರಿಸುವುದೆಲ್ಲಾ ಅಂತಿಮ ಸಾಕ್ಷಿ ಎನಿಸುತ್ತದೆಯೆ ? ಅಂದು ವೀರಪ್ಪನಿಗೆ ಹಣ ಎಸೆಯದೆ ಡಾ॥ ರಾಜಕುಮಾರರನ್ನು ಬಿಡಿಸಿಕೊಂಡುಬಂದಿದ್ದೆಂಬ ಐತಿಹ್ಯವನ್ನು ಒಪ್ಪುವುದಾದರೆ ಅವನು ಇವರನ್ನು ಕಾಡಿಗೆ ಕೊಂಡುಯ್ದುದಕ್ಕೆ ಬೇರೆ ಯಾವ ಅಂಗೀಕಾರಾರ್ಹ ಕಾರಣವನ್ನು ಕೊಡಲು ಶಕ್ಯ ?

* * *

ಬರೋಡದ ವೀರ ಜಾರ್ಜ್ ಫರ್ನಾಂಡೀಸರು ನಾಟಕಗಳಲ್ಲಿ ಅದ್ಭುತ ಪಾತ್ರ ವಹಿಸು ತ್ತಾರೆಂದು ಇತ್ತೀಚಿನ ಅವರ ಒಂದು ಹೇಳಿಕೆ ಸ್ಪಷ್ಟಪಡಿಸಿದೆ. ಅಮೆರಿಕದಲ್ಲಿ ಇವರ ಬಟ್ಟೆ ಬಿಚ್ಚಿಸಿ ತಪಾಸಣೆ ಮಾಡಿದ್ದುದನ್ನು ವಿವರಿಸುತ್ತಾ "ಬಟ್ಟೆ ತೆಗಿ, ಕೈಗಳನ್ನೆತ್ತು, ಇತ್ಯಾದಿ ಹೇಳಿದರು. ಅಷ್ಟೆ, ಅಲ್ಲಿಗೆ ನಾಟಕ ಮುಗಿಯಿತು," ಎಂದಿದ್ದಾರೆ ಫರ್ನಾಂಡೀಸ್. ಇವರನ್ನು ಎಷ್ಟು ಬೆತ್ತಲೆ ಮಾಡಲಾಗಿತ್ತೆಂಬುದನ್ನು ಜಾರ್ಜ್ ಬಹುಶಃ ಅವರ ಪಕ್ಷದ ಅಂದಿನ ಅಧ್ಯಕ್ಷರಾಗಿದ್ದ ಜಯಾ ಜೇಟ್ಲಿಯವರಿಗೂ ತಿಳಿಸಲಿಲ್ಲವೆಂದು ತೋರುತ್ತದೆ; ಇನ್ನು ಅಂದಿನ ಪ್ರಧಾನಿಗೆ, ವಿದೇಶಾಂಗ ಸಚಿವರಿಗೆ ತಿಳಿಸುವ ಮಾತು ದೂರವೇ ಉಳಿಯಿತು ! ನಮ್ಮ ದೇಶದ ಸಂಪುಟ ಸಚಿವನೊಬ್ಬ ಇಂತಹ ನಾಚಿಕೇಗೇಡಿನ ಪ್ರಸಂಗದಲ್ಲಿ ಸಿಲುಕಿದ್ದು ಎಲ್ಲರಿಗೂ ಕೋಪ ತರಿಸುವುದಾದರೆ, ಅದನ್ನು ದೇಶದಿಂದ ಮುಚ್ಚಿಟ್ಟ ವೀರ ಮಂತ್ರಿಯ ನಡತೆ ಅಸಹ್ಯಕರವಾದದ್ದೆಂದು ಇನ್ನೂ ಹೆಚ್ಚಿನ ಕೋಪ ಬರುತ್ತದೆ. ಸುಮ್ಮನೆ ಅಮೆರಿಕಾದ ವರ್ತನೆಯನ್ನು ಖಂಡಿಸುವುದಾಗಲಿ, ಡೊಳ್ಳು ಹೊಟ್ಟೆಯ ಆರ್ಮಿಟೇಜ್ ಕೇಳಿದನೆನ್ನಲಾದ ಕ್ಷಮೆಯಿಂದ ತೃಪ್ತರಾಗುವುದಾಗಲಿ ಖಂಡಿತ ಇದಕ್ಕೆ ಸರಿಯಾದ ಪ್ರತಿಕ್ರಿಯೆಯಲ್ಲ. ವಾಜಪೇಯಿ ಸರ್ಕಾರ ನಮ್ಮ ದೇಶವನ್ನು ಅಮೆರಿಕಾದೆದುರು ಶಿರಸಾಷ್ಟಾಂಗ ನಮಸ್ಕಾರ ಮಾಡುವಂತೆ ಮಾಡಿದ್ದಿತಲ್ಲ, ಅದು ನಮಗೆ ನಾಚಿಕೆ ಮತ್ತು ವ್ಯಗ್ರತೆ ಉಂಟುಮಾಡುತ್ತದೆ. ದೇಶದ ಸಾರ್ವಭೌಮತ್ವವನ್ನು ಹೀಗೆ ಹರಾಜು ಹಾಕಿದ್ದ "ರಾಷ್ಟ್ರೀಯ ವಾದಿಗಳು" ವಾಜಪೇಯಿ ಬಣದವರು. ಈಗಲೂ ಒಂದು ಕ್ರೂರ ವ್ಯಂಗ್ಯವನ್ನು ಗಮನಿಸಬೇಕು : ಈ ಕಹಿ ಪ್ರಸಂಗ ನಮಗೆ ತಿಳಿದುಬಂದಿದ್ದು ಫರ್ನಾಂಡೀಸರಿಂದಾಗಲಿ ನಮ್ಮ ಆಗಿನ ರಾಯಭಾರಿಯಿಂದಾಗಲಿ ಅಲ್ಲ; ಅವರು ತುಟಿ ಬಿಚ್ಚದೆ ಎಲ್ಲವನ್ನೂ ನುಂಗಿಕೊಂಡಿದ್ದರು. ಹೇಗೂ ಬೆತ್ತಲೆಯಾದ ಮೇಲೆ ಮತ್ತೆ ಬಟ್ಟೆ ತೊಟ್ಟುಕೊಂಡಿದ್ದರಲ್ಲ! ಯಾವನೋ ಅಮೆರಿಕಾದ ರಾಜತಂತ್ರದ ಊಳಿಗದವನು ತನ್ನ ಪುಸ್ತಕದಲ್ಲಿ ಜನ್ಮ ಜಾಲಾಡಿದಮೇಲೆ ನಮ್ಮ ದೇಶಕ್ಕೆ ವಿಷಯ ತಿಳಿದುಬಂದಿದೆ. ನಮ್ಮ ಬರೋಡ ವೀರ ಕನಿಷ್ಠ ನಮ್ಮ ದೇಶದ ಮೇಲೆ ಕನಿಕರವಿಟ್ಟು ಇಷ್ಟು ಮಾಡಬಹುದಿತ್ತು: (ಅ) ನೀವು ಮತ್ತು ನಿಮ್ಮ ಸುರಕ್ಷತೆ ಎಲ್ಲಾ ಹಾಳಾಗಲಿ; ನಾನು ನಮ್ಮ ದೇಶದ ಮಂತ್ರಿ. ನಾನು ಬಟ್ಟೆ ಬಿಚ್ಚುವುದಿಲ್ಲ. ಈಗಿಂದೀಗ ನನ್ನ ದೇಶಕ್ಕೆ ಹಿಂದಿರುಗುತ್ತೇನೆ, ಎನ್ನಬಹುದಿತ್ತು. ಇಲ್ಲವೆ, (ಆ) ಒಮ್ಮೆ ನಗ್ನಗೊಂಡ ಮಂತ್ರಿ ಮತ್ತೆ ಆ ದೇಶದ ನೆಲದ ಮೇಲೆ ಮಂತ್ರಿಯಾಗಿ ಕಾಲಿಡುವುದಿಲ್ಲ, ಎನ್ನಬಹುದಿತ್ತು. ಆದರೆ ಜಾರ್ಜ್ ಎರಡೂ ಮಾಡಲಿಲ್ಲ. ಎರಡನೆಯ ಬಾರಿಯೂ ಬಟ್ಟೆ ಬಿಚ್ಚಿಸಿಕೊಂಡರು ! ನಮ್ಮ ದೇಶವನ್ನು ಹೀಗೆ ಅಮೆರಿಕಾದ ಕೈಂಕರ್ಯಕ್ಕೆ ತಳ್ಳಿದ ಅವರಿಗೆ ಮತ್ತು ಅಂದಿನ ವಾಜಪೇಯಿ ಸರ್ಕಾರಕ್ಕೆ ಧಿಕ್ಕಾರವಿರಲಿ.

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೬ ಸಂಚಿಕೆ - ೧ ಆಗಸ್ಟ್ ೨೦೦೪

**ಸಂಪಾದಕ**
ಜಿ. ರಾಮಕೃಷ್ಣ

**ಸಹಸಂಪಾದಕರು**
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**
ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**
**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**
ನವಕರ್ನಾಟಕ ಪ್ರಕಾಶನ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೨೦೩೫೮೦ / ೮೧ / ೮೨
e-mail : nkp@bgl.vsnl.net.in
website : www.navakarnatakabooks.com

ಸಂಪಾದಕೀಯ

# ಖಾಸಗೀಕರಣ, ಜಾಗತೀಕರಣಗಳ ಪಾಪಪ್ರಜ್ಞೆ ತಟ್ಟಿದ ಕೇಂದ್ರ ಬಜೆಟ್-೨೦೦೪

ಕೇಂದ್ರದ ಬಜೆಟ್‌ನ ಅಂಕಿ-ಅಂಶ-ಅಂದಾಜು, ಷೇರು ಪೇಟೆಯ ಸೆಡ್ಡು, ಕೈಗಾರಿಕೆ-ವಾಣಿಜ್ಯ-ಉದ್ಯಮ ಅಧಿಪತಿಗಳು "ಹೌದು - ಹೌದು ಬಜೆಟ್ ತುಂಬ ಚೆನ್ನಾಗಿದೆ, ಇದೀಗ ಕೃಷಿಯ, ಗ್ರಾಮಾಂತರ ಪ್ರದೇಶದ, ಅಸಂಘಟಿತ ಕಾರ್ಮಿಕರ, ಮುದುಕರ ಸರದಿ" ಎಂದು ಬಹಳ ಉದಾರಭಾವ ತಳೆದಿರುವುದು, ಇವೆಲ್ಲದರ ನಡುವೆ ಈ ವ್ಯವಸ್ಥೆಯಲ್ಲಿ, ಈ ಬಜೆಟ್ ಪ್ರಕ್ರಿಯೆಯಲ್ಲಿ, ಈ ಸಲವಾದರೂ ಏನಾದರೂ ಶೋಷಿತರ ಕ್ಷೇಮಸಾಧನೆಗೆ ಒಂದಿಷ್ಟು ಅವಕಾಶ ತೆರೆದುಕೊಂಡಿದೆಯೇ ಎಂದು ಹುಡುಕುವುದು ನಮ್ಮ ಪಾಲಿನ ಆಸಕ್ತಿ.

ಬಜೆಟ್ಟನ್ನು ಗಹನವಾದ ಸೂತ್ರಗಳ ಅನ್ವಯದಿಂದ ಅರ್ಥಶಾಸ್ತ್ರಿಗಳು ಎಷ್ಟೇ ಕ್ಲಿಷ್ಟಗೊಳಿಸಲಿ, ಸಾಧಾರಣ ಜನತೆಗೆ ಅದನ್ನು ತಮ್ಮ ಜೀವನದ ವಾಸ್ತವದಲ್ಲಿ ಗ್ರಹಿಸುವ ಶಕ್ತಿ ಇದೆ. ಅವರು ಚುನಾವಣೆಯಲ್ಲಿ ತಾವೇನನ್ನು ವಿರೋಧಿಸಿದ್ದೇವೆ ಎಂದು ಈಗಷ್ಟೆ ಹೇಳಿದ್ದಾರೆ. ಅದನ್ನು ಲಘುವ ಆಗಿಸುವ ಪ್ರಯತ್ನಗಳು ನಡೆದಿವೆ. ಕಳೆದ ಚುನಾವಣೆಯಲ್ಲಿ ಅವರು 'ಹಿಂದುತ್ವ' ಕೋಮುವಾದಿಯಾಗಿ ಮತ ನೀಡಿದರಂತೆ. ಅವರು ಈಗ 'ಕೋಮುವಾದ ವಿರೋಧಿ'ಯಾಗಿ ಮತ ಚಲಾಯಿಸಿದ್ದಾರೆ! ವಾಸ್ತವದಲ್ಲಿ ಆರ್ಥಿಕ ಉದಾರೀಕರಣ, ಖಾಸಗೀಕರಣ, ಜಾಗತೀಕರಣ ಪ್ರಕ್ರಿಯೆ ಪ್ರಾರಂಭವಾದಂದಿನಿಂದ ಶ್ರೀಸಾಮಾನ್ಯ ತನ್ನ ಜೀವನದ ಆಧಾರ ಕಳೆದುಕೊಂಡು ಸಂಕಷ್ಟಗಳಿಗೆ ಒಳಗಾಗಿದ್ದಾನೆ. ಅವನು ಸ್ಪಷ್ಟತೆಯಿಲ್ಲದೆ ತನ್ನಲ್ಲಿ ತಾನೇ ಗೊಣಗಿಕೊಳ್ಳುತ್ತಾನೆ. ಆ ಮನಃಸ್ಥಿತಿಯಲ್ಲಿ ಯಾವುದೇ ಸರ್ಕಾರವನ್ನು ಶಾಶ್ವತವಾಗಿ ಬೇರೂರಲು ಬಿಟ್ಟಿಲ್ಲ. ಈಗ ಅಧಿಕಾರದಲ್ಲಿರುವ ಸರ್ಕಾರವಾದರೂ ಶ್ರೀಸಾಮಾನ್ಯನ ಸಮಸ್ಯೆಗಳಿಗೆ ಸ್ವಲ್ಪವಾದರೂ ಪರಿಹಾರ ಒಂದಿಷ್ಟು ದೊರಕಿಸದಿದ್ದರೆ, ಉದಾರೀಕರಣೇತ್ಯಾದಿ ನೀತಿಗಳ ವಿರುದ್ಧದ ಅವನ ಛಲವನ್ನು ಗುರುತಿಸದೇ ಇದ್ದರೆ, ಮರುಚುನಾವಣೆಯಲ್ಲಿ ಈ ಪಕ್ಷಗಳೂ ಅಧಿಕಾರವನ್ನು ಉಳಿಸಿಕೊಳ್ಳಲು ಸಾಧ್ಯವಾಗದು. ಭರವಸೆ ನೀಡುವ ಒಂದು ಉಪಾಯವಾಗಿ ಎಡಪಕ್ಷಗಳ ಒತ್ತಡಕ್ಕೆ ವಿಧಿಯಿಲ್ಲದೆ ಮಣಿದು ಒಂದು ಕನಿಷ್ಠ ಕಾರ್ಯಕ್ರಮವನ್ನೇನೋ ಅಳವಡಿಸಿಕೊಂಡಿದ್ದಾರೆ. ಈ ರಾಜಕೀಯ ಒಡಂಬಡಿಕೆಯ ಸೂತ್ರವನ್ನು ಎಷ್ಟರಮಟ್ಟಿಗೆ ಈ ಬಜೆಟ್ ಪ್ರತಿಬಿಂಬಿಸುತ್ತದೆ ಎನ್ನುವುದೊಂದೇ ನಮಗಿರುವ ಆಸಕ್ತಿ. ಹೀಗೆ ಅನಿವಾರ್ಯವಾಗಿ ಹಣಕಾಸಿನ ಅಂದಾಜು ಪಟ್ಟಿಯಾಗಿ ಮಾತ್ರ ಉಳಿಯದೆ, ಬಜೆಟ್, ರಾಜಕೀಯ ಪ್ರಕ್ರಿಯೆಯ ಕೈಸಣಿಕೆಯೂ ಆಗುತ್ತದೆ. ಅದು ಸಾಮಾಜಿಕ ಪರಿವರ್ತನೆಯ ಉಪಕರಣವೂ ಆದೀತೆ ಎನ್ನುವುದೇ ಈಗಿನ ಜಿಜ್ಞಾಸೆ.

ಕನಿಷ್ಠ ಸಾಮಾನ್ಯ ಕಾರ್ಯಕ್ರಮದಲ್ಲಿ ಜನತೆಯ ದುರ್ಭರತೆಯ ಚಿತ್ರ ಒಂದಿಷ್ಟು ವ್ಯಕ್ತವಾಗಿತ್ತಾದರೂ, ಬಜೆಟ್ಟಿಗೆ ಮೊದಲ ದಿನ ಪ್ರಕಟಿಸಿದ ಆರ್ಥಿಕ ಸರ್ವೇಕ್ಷಣವಾಗಲೀ, ಬಜೆಟ್ಟಿನ ಅಂತರ್ಗತ ವ್ಯಾಖ್ಯೆಗಳಲ್ಲಾಗಲೀ, ಸುಧಾರಣಾ ಕ್ರಮಗಳಿಂದಾಗಿ ಬಡತನ ಹೆಚ್ಚಳದ, ನಿರುದ್ಯೋಗದ, ಅನಾರೋಗ್ಯದ, ಮುಖ್ಯವಾಗಿ ಆ ಖಾತೆಗಳ ನಿರ್ಲಕ್ಷ್ಯದಿಂದಾಗಿ ಆಗಿರುವ ಗಂಭೀರ ಪರಿಣಾಮಗಳ ಬಗ್ಗೆ ಯಾವ ಅಂಗೀಕಾರವೂ ಇರಲಿಲ್ಲ. ಸುಧಾರಣಾ ನೀತಿಯಲ್ಲೇನೂ ತಪ್ಪಿಲ್ಲ, ಅದರಿಂದ ಆರ್ಥಿಕ ವಿಕಾಸ ತುಂಬಾ ಆಗಿದೆ, ಬಹುಶಃ ಆದ ಪ್ರಗತಿಯ ಲಾಭ ಜನಕ್ಕೆ ಇನ್ನೂ ವ್ಯಾಪಕವಾಗಿ ತಲುಪಿಲ್ಲ; ಹಂಚಿಕೆಯಲ್ಲೇನೋ ದೋಷ ಇದೆ, ಎಂದು ಸಬೂಬು ಕೊಡಲಾಗುತ್ತಿದೆ. ನಿಜಕ್ಕೂ ಸುಧಾರಣಾ ನೀತಿಯೇ, ಅದರ ಸಂರಚನೆಯ ದೋಷವೇ, ಈ ಎಲ್ಲ ಅಹಿತಕರ ಅಸಮಾನತೆಗೆ ಎಡೆಮಾಡಿಕೊಟ್ಟಿದೆ, ಆದ್ದರಿಂದ ಆ ಮಾರ್ಗವನ್ನೇ ಕೈಬಿಡಬೇಕು ಅಥವಾ ರೂಢಮೂಲವಾಗಿ ಆದ್ಯತೆಗಳ ಆಧಾರದ ಮೇಲೆ ಪರಿಷ್ಕರಿಸಬೇಕು ಎಂದು ಒಪ್ಪಿಕೊಳ್ಳಲಾಗಿಲ್ಲ. ಹೀಗಾಗಿ ಈ ಸರ್ಕಾರದ ಆರ್ಥಿಕ ನೀತಿಗಳು ಎನ್.ಡಿ.ಎ ಸರ್ಕಾರದ ಅಥವಾ ಅದರ ಹಿಂದಿನ ಕಾಂಗ್ರೆಸ್ಸಿನ ನೀತಿಗಳಿಗಿಂತ ಬೇರೆಯಲ್ಲ. ನಿರುದ್ಯೋಗ, ಗ್ರಾಮೀಣ ಸಮಸ್ಯೆಗಳು, ನೀರು, ವಿದ್ಯುತ್, ಕೃಷಿ ಇವುಗಳಿಗೆ ಆದ್ಯತೆ ಕೊಡುವುದು ಈ ಘಟ್ಟದ ಬಂಡವಾಳ ವರ್ಗದ ಬೆಳವಣಿಗೆಯಲ್ಲೂ ಅಗತ್ಯ, ಆದ್ದರಿಂದ ಅವುಗಳತ್ತ ಈಗ ಗಮನಕೊಡಲು ಸಮಯ ಬಂದಿದೆ ಎಂಬುದು ಚಿದಂಬರಂ ಅವರ ಧೋರಣೆ. ಪ್ರಾಸಂಗಿಕವಾಗಿ ಈ ಕ್ಷೇತ್ರಗಳಲ್ಲಿ ಶೋಷಿತರಿಗೂ ಒಂದಷ್ಟು ಪರಿಹಾರ ದೊರೆಯುತ್ತದೆ ಎಂಬುದಷ್ಟೇ ನಿಜ. ಬಜೆಟ್‌ನಲ್ಲಿ ಆಧಾರವಿಲ್ಲದ ಆದಾಯದ ಅಂದಾಜುಗಳಿವೆ. ಆದ್ದರಿಂದ ಅವರು ಉದ್ದೇಶಿಸಿರುವ ಎಲ್ಲ ವೆಚ್ಚಗಳೂ ಆಗುವುದಿಲ್ಲ. ಅಂಥ ಸಂದರ್ಭದಲ್ಲೆಲ್ಲಾ ಕಡಿತ ಮಾಡುವುದು ಕೃಷಿ, ಸಾರ್ವಜನಿಕ ಕ್ಷೇಮ, ಶಿಕ್ಷಣ, ಆರೋಗ್ಯ ಮುಂತಾದುವುಗಳಲ್ಲಿ. ಎನ್‌ಡಿಎ ಸರ್ಕಾರ ಮಂಡಿಸಿದ ವಿಷಯಗಳನ್ನು ಅನೇಕ ವೇಳೆ ಸ್ವಲ್ಪವೂ ಸರಿಪಡಿಸದೇ ಹಾಗೆಯೇ ಮಂಡಿಸಲಾಗಿರುವುದು ಸೂಚಿಸುವ ವಿಷಯವೆಂದರೆ ಈ ಎರಡೂ ಸರ್ಕಾರಗಳ ಆರ್ಥಿಕ ನೀತಿ ಮೂಲತಃ ಒಂದೇ ಎಂಬುದು. ಸೆನ್ಸಿಟಿವ್ ಎನಿಸಿಕೊಳ್ಳುವ ವಿಮೆ, ಟೆಲಿಕಾಂ, ನಾಗರಿಕ ವಿಮಾನಯಾನ ಕ್ಷೇತ್ರಗಳಲ್ಲಿ ವಿದೇಶೀ ಬಂಡವಾಳಕ್ಕೆ ಮುಕ್ತ ಬಾಗಿಲು ತೆರೆಯುವ ನೀತಿಯೇ ಇದನ್ನು ಸ್ಪಷ್ಟಪಡಿಸುತ್ತದೆ. ಬೆಲೆ ಏರಿಕೆ, ಹಣದುಬ್ಬರ ಈ ಬಜೆಟ್‌ನಿಂದ ಆಗುವ ಪರಿಣಾಮ ಮಾತ್ರ ಆಗದೆ, ಅವು ಕಳೆದ ಐದು ವರ್ಷಗಳ ದುಂದುವೆಚ್ಚದ ಸರ್ಕಾರದ ನೀತಿಯಿಂದಾಗಿ ಆಗಿದ್ದು, ಈಗ ತೀವ್ರವಾಗಿ ತಲೆಹಾಕಲಾರಂಭಿಸುತ್ತಿವೆ. ಅದು ಕಾರಣ ಬಡ್ಡಿಯ ದರ ಏರುತ್ತದೆ. ಎಡಪಕ್ಷಗಳು ಭವಿಷ್ಯ ನಿಧಿ ಠೇವಣಿಗಳಿಗೆ ಹೆಚ್ಚಿನ ಬಡ್ಡಿ ದರ ಕೇಳುತ್ತಿದ್ದು, ಈ ಬಗ್ಗೆ ಸರ್ಕಾರ ಸ್ವಲ್ಪ ರಿಯಾಯಿತಿ ತೋರಬಹುದಾದರೂ, ಅದು ಈಗ ಸರ್ಕಾರ ಕೃತಕವಾಗಿ ಏರದಂತೆ ತಡೆಹಿಡಿದಿರುವ ಬಡ್ಡಿ ದರ ಮಾರುಕಟ್ಟೆಯಲ್ಲಿ ಬರುವ ದಿನಗಳಲ್ಲಿ ಹೇಗೂ ಏರುವುದರಲ್ಲಿದೆ ಎಂಬ ಕಾರಣದಿಂದ. ಇದಕ್ಕೆ ಪ್ರತಿಯಾಗಿ ತಮ್ಮ ಇತರ ಕ್ಷೇತ್ರಗಳ ನೀತಿಗೆ ಎಡಪಕ್ಷದವರು ಒಪ್ಪಬೇಕು ಎಂಬ ಒತ್ತಡವೂ ಇರುತ್ತದೆ. ಟೆಲಿಕಾಂ ಕ್ಷೇತ್ರದಲ್ಲಿ ಈಗಾಗಲೇ ಪರೋಕ್ಷವಾಗಿ ವಿದೇಶೀ ಹೂಡಿಕೆ ಅಪಾರವಾಗಿ ಬಂದಿದ್ದು ಶೇ. ೭೪ಕ್ಕೆ ಈಗ ಅದನ್ನು ಹೆಚ್ಚಿಸುವುದು ಹೊಸ ನೀತಿಯೇನೂ ಆಗುವುದಿಲ್ಲ. ವಿಮೆಯನ್ನು ಈಗಾಗಲೇ ಮೊದಲ ಹಂತದಲ್ಲಿ ವಿದೇಶೀ ಹೂಡಿಕೆಗೆ ತೆರೆದಾಗಿದೆ. ಇವೆರಡೂ ಕ್ಷೇತ್ರಗಳಲ್ಲಿ ಅನೀತಿಯುತ ಪೈಪೋಟಿ ಸರ್ಕಾರಿ ಕ್ಷೇತ್ರವನ್ನು ಹಾಳುಗೆಡವುತ್ತಿರುವ ಅನೇಕ ವರದಿಗಳು ಲಭ್ಯವಿದ್ದು ಇದರ ಪರಿಣಾಮ ಜನತೆಯ ಮೇಲೆ ಆಗುತ್ತದೆ. ನಾಗರಿಕ ವಿಮಾನಯಾನವನ್ನು ವಿದೇಶೀ ಹೂಡಿಕೆಗೆ ತೆಗೆದಿಟ್ಟರೆ ಈಗಾಗಲೇ ಸ್ಥಳೀಯವಾಗಿ ನಡೆಯುತ್ತಿರುವ ಖಾಸಗಿ

ಪ್ರಯತ್ನಗಳನ್ನು ಅದು ಏರುಪೇರು ಮಾಡುವುದು ಸ್ಪಷ್ಟ. ಈ ಮೂರೂ ಕ್ಷೇತ್ರಗಳೂ ಸಾರ್ವಜನಿಕ ಹಿತದ ರಾಷ್ಟ್ರೀಯ ಕ್ಷೇತ್ರಗಳಾಗಿವೆ. ಆದರೂ ಸರ್ಕಾರ ಈ ಮಾರ್ಗದಲ್ಲಿ ಮುಂದುವರಿಯಲು ಶಕ್ತವಾಗಬಹುದು, ಭಾಜಪದ ಸಹಾಯದಿಂದ. ಈ ಸಲದ ಜನತೆಯ ಮತ ಚಲಾವಣೆಯ ಪ್ರಕ್ರಿಯೆ ದಿಶಾಸೂಚಕವಾಗಿದ್ದರೂ, ನಿರ್ಣಾಯಕವಾಗಿಲ್ಲದಿರುವುದರಿಂದ ಹೀಗೆಲ್ಲಾ ಆಗುತ್ತಿದೆ ಎನ್ನಬಹುದು. ಭಾಜಪದ ಕೋಮುವಾದದ ರಾಜಕೀಯದ ಹುಸಿಮುಸುಕು ತೆರೆದುಬಿದ್ದಿದೆ. ಅದನ್ನು ಮತ್ತೆ ಪ್ರಯೋಗಿಸಲು ಅವರಿಗೆ ಆಗಲಾರದು. ಬಹುಶಃ ಪ್ರಗತಿಪರ ಶಕ್ತಿಗಳಿಗೆ ಇನ್ನೂ ಪರಿಣಾಮಕಾರಿಯಾಗಿ ಅರ್ಥನೀತಿಯ ರೂಢಮೂಲ ಬದಲಾವಣೆಗೆ ಹೋರಾಡಲು ಹೊಸ ಅವಕಾಶಗಳು ತೆರೆದುಕೊಳ್ಳುತ್ತವೆ. ಪ್ರಧಾನಿಯವರು ಜಗಮೆಚ್ಚುವ ಹೊಸ ಆರ್ಥಿಕ ವಿಕಾಸದ ಮಾನವೀಯ ಹೃದಯ ಹೊತ್ತ ಮಾದರಿಯನ್ನು ನೀಡುತ್ತೇನೆಂದಿದ್ದರು. ಈ ಬಜೆಟ್ ಅಂಥದೇನನ್ನೂ ನೀಡಿಲ್ಲ. ಮುಂದಿನ ಬಜೆಟ್‌ಗೆ ಕಾಯುವಷ್ಟರಲ್ಲಿ ನಮ್ಮ ಪ್ರಜಾಪ್ರಭುತ್ವದಲ್ಲಿ ಏನೆಲ್ಲಾ ಬದಲಾವಣೆ ಸಂಭವಿಸಿ ದೊರಕಿದ ಅವಕಾಶಗಳು ಕೈಬಿಟ್ಟು ಹೊದಾವೇ ಎಂದು ಸಂಬಂಧಪಟ್ಟವರಿಗೆ ಅನ್ನಿಸಿದರೆ!

# ಕುಂಭಕೋಣ

ಸರಸ್ವತಿಯ ಹೆಸರಿಟ್ಟುಕೊಂಡ ಶಾಲೆಯಲ್ಲಿ ಅತಿದಾರುಣವಾಗಿ ಭಸ್ಮವಾಗಿಹೋದ ಪುಟ್ಟ ಮಕ್ಕಳನ್ನು ಗೌರವದಿಂದ ನೆನೆಯುತ್ತಾ 'ಹೊಸತು' ತನ್ನ ವ್ಯಥೆಯನ್ನು ವ್ಯಕ್ತಪಡಿಸುತ್ತದೆ. ಶಿಕ್ಷಣ ಕ್ಷೇತ್ರದಲ್ಲಿ ಖಾಸಗಿತನವು ಎಸಗುತ್ತಿರುವ ನಿಜವಾದ 'ಕುಂಭಕೋಣ' ಕೇವಲ ಕುಂಭಕೋಣವೆಂಬ ಊರಿಗೆ ಸೀಮಿತವಾಗಿಲ್ಲ. ಜಾಲಪ್ಪ-ಶಿವಶಂಕರಪ್ಪ ನೇತೃತ್ವದ ವೃತ್ತಿ ಶಿಕ್ಷಣ ಸಂಸ್ಥೆಗಳೂ ಕರ್ನಾಟಕದಲ್ಲಿ ಕುಂಭಕೋಣದ ಸರಸ್ವತಿ ಶಾಲೆಗೆ ಸಮಾನವಾದುವೇ. ಕುಂಭಕೋಣದವರು ಕೋಪಿಸಿಕೊಳ್ಳಬಹುದಾದಂತಹ ಬೇರೊಂದು ಅರ್ಥದಲ್ಲಿ (=ಮೋಸ) ಸಹ 'ಕುಂಭಕೋಣ' ಎಂಬ ಪದದ ಬಳಕೆ ಇದೆ. ಅಲ್ಲಿ ಮಕ್ಕಳನ್ನು ಜೀವಂತ ಸುಡಲಾಯಿತು; ಇಲ್ಲಿ ಅಭ್ಯರ್ಥಿಗಳನ್ನು ಮಾನಸಿಕವಾಗಿ ಕೊಂದು ಹಿಂಸಿಸಲಾಗುತ್ತಿದೆ. ಖಾಸಗಿಯೆಂದರೆ ಶ್ರೇಷ್ಠವೆಂದು ವಾದ ಮಾಡುವವರೆಲ್ಲರೂ ಈ ಎರಡೂ ಬಗೆಯ ಶಿಕ್ಷಣ ಸಂಸ್ಥೆಗಳನ್ನು ಗಂಭೀರವಾಗಿ ಪರಿಗಣಿಸಬೇಕು. ಖಾಸಗಿ ಕ್ರೂರದೊರೆಗಳನ್ನು, ಹೊಲಸು ದಂಧೆ ನಡೆಸುವವರನ್ನು, ಗಮನಿಸದೆ ಕೇವಲ ಸರ್ಕಾರವನ್ನೇ ದೂರುವ ಕೆಲವು ವಿದ್ಯಾರ್ಥಿ ಪರಿಷತ್ತುಗಳನ್ನು ಪೋಷಿಸುವವರು ಈ ಖಾಸಗಿ ಮಂದಿ ಮತ್ತು ಅಂತಹ ಪರಿಷತ್ತುಗಳ ರಾಜಕೀಯ ಪಕ್ಷಗಳು ಖಾಸಗಿತನವನ್ನೇ ನೀತಿಯನ್ನಾಗಿ ಮಾಡಿಕೊಂಡಿರುವುದು ಸರ್ವವೇದ್ಯ. ಕರ್ನಾಟಕದ ಸಂದರ್ಭದಲ್ಲಿ ಸರ್ವೋಚ್ಚ ನ್ಯಾಯಾಲಯ ಕೂಡ ಅಮೋಘವಾದ ತೀರ್ಪೊಂದನ್ನು ನೀಡಿ ವಿದ್ಯಾರ್ಥಿಗಳನ್ನು ಉರಿಯುವ ಬೆಂಕಿಗೆ ನೂಕಿದೆ. ಖಾಸಗಿ ಶಿಕ್ಷಣದ ಕ್ಷುದ್ರ ಮಾಲಿಕರನ್ನು ಮೂರು ದಶಕಗಳಿಂದ ಬೆಳೆಸಿಕೊಂಡು ಬಂದ ರಾಜಕೀಯ ಪಕ್ಷಗಳು ಮತ್ತು ನಾಯಕರು ಈಗಲೂ ಖಾಸಗಿತನವನ್ನೇ ಪುರಸ್ಕರಿಸುತ್ತಿರುವುದು ಜನರಿಗೊಂದು ಸವಾಲಾಗಿದೆ. ಸೋನಿಯಾ ಗಾಂಧಿ ಪಕ್ಷದ ಸಾಮಾನ್ಯ ಕನಿಷ್ಠ ಕಾರ್ಯಕ್ರಮಕ್ಕೂ ಸರ್ವೋಚ್ಚ ನ್ಯಾಯಾಲಯ ತೀರ್ಪಿಗೂ ತಾಳೆಯೇ ಇಲ್ಲ. ವಾಜಪೇಯಿ ಸರ್ಕಾರ ಸಹ ಇಂತಹ ತೀರ್ಪಿನ ಆಶಯವನ್ನೇ ಕಾರ್ಯಗತಗೊಳಿಸುತ್ತಿದ್ದಿತು.

ಶಿಕ್ಷಣ ಸಂಸ್ಥೆಗಳನ್ನು "ಸಮಾಜದ ಒಳಿತಿಗಾಗಿ" ನಡೆಸಲು ಸಂಘಗಳನ್ನು ಅಥವಾ ಟ್ರಸ್ಟ್‌ಗಳನ್ನು ಸ್ಥಾಪಿಸಿಕೊಳ್ಳುವ ಮಂದಿ ತಮ್ಮ ಉದ್ದೇಶಗಳ ಹೇಳಿಕೆಯಲ್ಲಿ "ಸೇವೆಯೇ ತಮ್ಮ ಪರಮೋದ್ದೇಶ"ವೆಂದು ಹೇಳಿಯೇ ನೋಂದಾಯಿಸಿಕೊಳ್ಳುತ್ತಾರೆ. ಆಮೇಲೆ ಪ್ರಾರಂಭವಾಗುತ್ತದೆ ಅವರ ಕೊಯ್ಲು. ವೃತ್ತಿಶಿಕ್ಷಣ ವಿದ್ಯಾಲಯಗಳಲ್ಲಿ ಶುಲ್ಕವನ್ನು ನಿರ್ಧರಿಸುವ ಸಮಿತಿಯ ಮುಂದೆ ಇಂತಹ ಸಂಸ್ಥೆಗಳು ಮಂಡಿಸುವ ಯಾದಿ ವ್ಯಂಗ್ಯಗಳ ಆಗರವಾಗಿರುತ್ತದೆ. ಸಂಸ್ಥೆಯ ಅಧ್ಯಕ್ಷ ದೆಹಲಿಯಲ್ಲಿ ಪಂಚತಾರಾ ಹೋಟೆಲಿನಲ್ಲಿ ಹತ್ತು ದಿನ ತಂಗಿದ್ದು, ಸಂಸ್ಥೆಯ ಹೆಸರಿನಲ್ಲಿ ಎಲ್ಲೋ ಈಜುಕೊಳ ನಿರ್ಮಿಸಿದ್ದು, ತನ್ನವರಿಗಾಗಿ ಟೆನಿಸ್ ಆಟದ ಮೈದಾನ ರಚಿಸಿದ್ದು, ಇಂತಹ ಬಾಬ್ತುಗಳೆಲ್ಲ ಸೇರಿರುತ್ತವೆ. ಶುಲ್ಕ ನಿರ್ಧಾರಕ ಸಮಿತಿಯ ಮೇಧಾವಿಗಳಿಗೆ ಇವೆಲ್ಲಾ ಅಂಗೀಕಾರಾರ್ಹ ಮತ್ತು ವಿದ್ಯಾರ್ಥಿಗಳು ಇವಕ್ಕೆಲ್ಲಾ ಸೇರಿ ಶುಲ್ಕವನ್ನು ತೆರಬೇಕು. "ಕ್ಯಾಪಿಟೇಶನ್ ಶುಲ್ಕ"ವನ್ನು ರದ್ದುಗೊಳಿಸಿದ್ದ ನ್ಯಾಯಾಲಯ ಹಿಂದೆ ಆ ಶುಲ್ಕಕ್ಕಿಂತಲೂ ಹೆಚ್ಚಿನ ಮೊತ್ತ ಖಾಸಗಿಯವರಿಗೆ ಸೇರುವಂತಹ ಒಂದು ಕ್ರಮವನ್ನು ಜಾರಿಗೊಳಿಸಿತ್ತು. ಎಷ್ಟೋ ವರ್ಷಗಳ ನಂತರ ಅದೇ ನ್ಯಾಯಾಲಯವು ಆ ಕ್ರಮವು ಸಂವಿಧಾನದ ದೃಷ್ಟಿಯಲ್ಲಿ ಅಕ್ರಮವೆಂದು ಘೋಷಿಸಿ ಹೊಸ ಸೂತ್ರವೊಂದನ್ನು ದೇಶಕ್ಕೆ ಬಳುವಳಿಯಾಗಿ ನೀಡಿತು. ಅದು ಸಾಮಾಜಿಕ ನ್ಯಾಯವನ್ನು ಬುಡಮೇಲು ಮಾಡಿ ಖಾಸಗಿಯವರಿಗೆ ಶೇ. ೫೦ರಷ್ಟು ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುವ ಹಕ್ಕನ್ನು ದೊರಕಿಸಿಕೊಟ್ಟಿತು. ಕರ್ನಾಟಕದ ವೃತ್ತಿಶಿಕ್ಷಣ ಕ್ಷೇತ್ರದ ಗೊಂದಲ ಮತ್ತು ವಿದ್ಯಾರ್ಥಿಗಳಿಗೆ ಕುತ್ತು ತಂದಿದ್ದು ಈ ಹೊಸ "ಸಂವಿಧಾನಬದ್ಧವಾದ" ತೀರ್ಪು. ಅದರ ಸಹಾಯದಿಂದ ಈಗ ಜಾಲಪ್ಪಾದಿ ಶಿಕ್ಷಣ ದಾನಿಗಳು ರಾಜ್ಯಕ್ಕೆ ವಿಶಿಷ್ಟ "ಸೇವೆ" ಸಲ್ಲಿಸುತ್ತಿದ್ದಾರೆ. ಅವರ ಈ ಸೇವೆಗಾಗಿ ವಿದ್ಯಾರ್ಥಿಗಳು ಇಡುಗಂಟನ್ನು ನೀಡಬೇಕು; ಹಾಗೆ ನೀಡಲು ಅಸಮರ್ಥರಾದರೆ ಅವರು ಶಿಕ್ಷಣದ ಆಕಾಂಕ್ಷೆಯನ್ನು ತ್ಯಜಿಸಬೇಕು.

ಸರ್ಕಾರ ಈ ಸಂಸ್ಥೆಗಳಿಗೆ ಹೇರಳವಾಗಿ ಸಹಾಯ ಮಾಡಿವೆಯಾದರೂ ಈಗ ಸರ್ಕಾರದ ಮಾತು ಇವರಿಗೆ ಹಿಡಿಸುವುದಿಲ್ಲ. ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ ಶಿಕ್ಷಣದ ವ್ಯಾಪಾರೀಕರಣವನ್ನು ನಿರೋಧಿಸುವುದಾಗಿ ಹೇಳಲಾಗಿದೆ. ಜನತೆಗೆ ಪ್ರತಿಕೂಲವಾಗದಂತೆ ಸರ್ಕಾರವು ವ್ಯಾಪಾರೀ ಶಿಕ್ಷಣ ಸಂಸ್ಥೆಗಳನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕಾದರೆ ಸರ್ವೋಚ್ಚ ನ್ಯಾಯಾಲಯದ ನಿಷ್ಠುರ ೫೦:೫೦ ಎಂಬ ಸೂತ್ರವನ್ನು ಕಾನೂನುರೀತ್ಯಾ ಪ್ರತಿಬಂಧಿಸಬೇಕು; ವಿದ್ಯಾರ್ಥಿಗಳ ಆರ್ಥಿಕ ಸಂದರ್ಭವನ್ನು ಪರಿಗಣಿಸದೆ ಶುಲ್ಕವನ್ನು ವಿಧಿಸಕೂಡದು; ಮತ್ತು, ಅಂತಹ ತೀವ್ರ ಅಗತ್ಯ ಕಂಡುಬಂದರೆ ಸರ್ಕಾರದ ಸೂತ್ರವನ್ನು ಒಪ್ಪಿಕೊಳ್ಳದ ಖಾಸಗಿ ವೃತ್ತಿಶಿಕ್ಷಣ ಸಂಸ್ಥೆಗಳಿಗೆ ಸರ್ಕಾರವು ವಿದ್ಯಾರ್ಥಿಗಳನ್ನು ಆಯ್ಕೆಯೇ ಮಾಡುವುದಿಲ್ಲವೆಂದು ಆಗ್ರಹಿಸಬೇಕು. ಸಾಮಾನ್ಯ ಪ್ರವೇಶ ಪರೀಕ್ಷೆಯ ಮುಖಾಂತರ ಸರ್ಕಾರವು ಒಬ್ಬ ವಿದ್ಯಾರ್ಥಿಯನ್ನೂ ಇಂತಹ ಕಾಲೇಜುಗಳಿಗೆ ಆಯ್ಕೆ ಮಾಡದಿದ್ದರೆ ಇವರಿಗೆ ಪೂರ್ಣಪ್ರಮಾಣದ ವಿದ್ಯಾರ್ಥಿ ಸಂಖ್ಯೆ ಹೇಗೆ ಕೂಡಿಬರುತ್ತದೆ? ಹಾಗಾದಾಗ ಅವರು ಕಾಲೇಜುಗಳನ್ನು ಮುಚ್ಚಬೇಕು ಇಲ್ಲವೇ ಅವನ್ನು ಕಲ್ಯಾಣಮಂಟಪಗಳನ್ನಾಗಿ ಪರಿವರ್ತಿಸಬೇಕು. ಅಂತಹ ಸಂದರ್ಭ ಬಂದರೆ ಸರ್ಕಾರವೇ ಆ ಕಾಲೇಜುಗಳನ್ನು ತನ್ನ ವಶಕ್ಕೆ ತೆಗೆದುಕೊಂಡು ವಿದ್ಯಾರ್ಥಿಗಳಿಗೆ ಸಾಮಾಜಿಕ ನ್ಯಾಯವನ್ನು ದೊರಕಿಸಿಕೊಡಬೇಕು.


ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೪೨೪೩೦೨




'**ಹೊ**ಸತು' ಹೊಸ ಚೈತನ್ಯ ನೀಡುವ ಪತ್ರಿಕೆ ಎಂಬುದರಲ್ಲಿ ಸಂಶಯವಿಲ್ಲ. ಸಂಪಾದಕೀಯವಂತೂ ಅರ್ಥಗರ್ಭಿತ. ಜುಲೈ ಹೊಸತು ಬಹಳ ಚೆನ್ನಾಗಿದೆ. ಜೋಕೋತ್ಸವ ನೋಡಿ ಅಯ್ಯೋ ಎನಿಸಿತು. ವಿಭಾ ಮತ್ತು ಗವಿಸಿದ್ಧ ಎನ್. ಬಳ್ಳಾರಿಯವರ ಕವನಗಳು ಗಮನ ಸೆಳೆದವು. 'ಛಲಬೇಕು ಮನುಜಂಗೆ' ವಿಚಾರ ತಿಳಿದು ಆಶ್ಚರ್ಯವಾಯಿತು. ಎಲ್ಲಾ ವಿಷಯಗಳು ಸಹ ಉತ್ತಮವಾಗಿ ಮೂಡಿಬರುತ್ತಿರುವುದು ತಿಂಗಳು ಕಾಯುವಂತೆ ಮಾಡುತ್ತಿದೆ.

ಪಾಂಡವಪುರ — *ಅ. ಮೃತ್ಯುಂಜಯ*

ಡಾ|| ಮ. ಸಕಲೇಶ್ ಅವರ ಗೋವಿನ ಹಾಡು ಭಾಗ ೨ (ಹೊಸತು ಜೂನ್ ೨೦೦೪) ಸ್ಥಾಪಿತ ಮೌಲ್ಯಗಳ ಪುನರ್‌ಪರಿಶೀಲನೆ ಕಡೆ ಒತ್ತುಕೊಟ್ಟು ರಚಿತವಾದ ಒಂದು ಉತ್ತಮ ಕವನ. ಹಸು ಎಂದರೆ ಎಲ್ಲವೂ ಒಳ್ಳೆಯದೇ ಅಲ್ಲ ಅಂದ ಹಾಗೆ ಹುಲಿ ಎಂದರೆ ಎಲ್ಲವೂ ಕೆಟ್ಟದ್ದೇ ಅಲ್ಲ ಎನ್ನುವುದನ್ನು ಕವನ ತುಂಬಾ ಸೂಕ್ಷ್ಮವಾಗಿ ಪ್ರತಿಪಾದಿಸಿದೆ. ಲೇಖಕರಿಗೆ ತಮಗೆ ಧನ್ಯವಾದಗಳು.

ತೀರ್ಥಹಳ್ಳಿ — *ರಾಜೇಂದ್ರ ಬುರಡೀಕಟ್ಟಿ*

### ಗ್ರಹಗಳ ಪಲಾಯನ

ಮಾನವರು ಅಂತರಿಕ್ಷದ ಭಾಗವಾದರೂ ತಮ್ಮ ಸೀಮಿತ ಜ್ಞಾನದಿಂದಾಗಿ ವಿಶ್ವದ ವಿಸ್ಮಯದಿಂದ ವಂಚಿತರಾಗಿರುವುದನ್ನು ಮನಗಂಡು 'ಹೊಸತು' ಪತ್ರಿಕೆ ಡಾ|| ಬಿ. ಎಸ್. ಶೈಲಜಾರವರಿಂದ ಅತ್ಯಂತ ಉಪಯುಕ್ತ ಹಾಗೂ ಕ್ಲಿಷ್ಟ ವಿಚಾರಗಳನ್ನು ಸರಳವಾಗಿ ನೀಡುತ್ತಿರುವುದು ಅಭಿನಂದನೀಯ. ತನ್ನ ಮನೆ, ನಿವೇಶನ, ಗದ್ದೆ, ತೋಟ ಮತ್ತು ಅವುಗಳ ಮೇಲೆ ಹಿಡಿತ ಸಾಧಿಸುವಲ್ಲಿ ತಮ್ಮ ಜೀವನವನ್ನು ಕಳೆಯುವ ಇಂದಿನ ಜನತೆಗೆ ಜಗತ್ತಿನ ನಿಗೂಢಗಳಿಂದ ಹಾಗೂ ಅವುಗಳ ರೋಚಕ ಅನುಭವಗಳಿಂದಾದ ತಿಳುವಳಿಕೆಗಳು ಇಲ್ಲದಾಗಿವೆ. ಭೂಮಿ ಎಷ್ಟು ಚಿಕ್ಕದು ಹಾಗೂ ಎಷ್ಟೊಂದು ಸುಂದರ ಎಂದಿರುವ ಕಲ್ಪನಾ ಚಾವ್ಲರ ಮಾತುಗಳಿಗೆ ನಾವು ಸ್ಪಂದಿಸಲು ಪತ್ರಿಕೆಯಲ್ಲಿ ಮೂಡಿಬರುತ್ತಿರುವ ಈ ಅಪರೂಪದ ಅಂಕಣ ಅತ್ಯಂತ ಸಹಕಾರಿಯಾಗಿದೆ.

ಬೆಂಗಳೂರು — *ನರೇಂದ್ರ ಸಿರಕಜೆ*

ಜುಲೈ ೨೦೦೪ರ 'ಹೊಸತು'ನಲ್ಲಿ ಪ್ರಕಟವಾದ ಬರಗೂರು ರಾಮಚಂದ್ರಪ್ಪನವರ ಲೇಖನ ''ಚುನಾವಣೆಯ: ಹಿಂದು-ಮುಂದು'' (೨೦೦೪) ಅತ್ಯಂತ ಸಮರ್ಥ ರೀತಿಯಲ್ಲಿ (ಸಮಕಾಲೀನ) ಬೆಳವಣಿಗೆ ಚಿತ್ರಿಸಿದೆ. ಈ ಚುನಾವಣೆಗಳ ಇತ್ತೀಚಿನ ಮಹತ್ವದ ಬೆಳವಣಿಗೆಯೆಂದರೆ ಕೋಮುವಾದಿಗಳಿಗೆ ಮತದಾರನಿಂದ ಎರಗಿದ ದೊಡ್ಡ ಹೊಡೆತ. ಜಾತ್ಯತೀತ ಶಕ್ತಿಗಳು ಸಣ್ಣಪುಟ್ಟ ವಿಷಯಗಳನ್ನು ಕಂದರಗಳಾಗಿ ನೋಡದೆ ಪರಸ್ಪರ ಚರ್ಚಿಸಿ ತೀರ್ಮಾನಿಸಬೇಕು. ಕೊಡು-ತೊಗೊಳ್ಳುವಿಕೆಗೆ ಹಿಂದೇಟು ಹಾಕದೆ ನಿರ್ಣಯಿಸಬೇಕು.

ಸಂವಿಧಾನ ಸರ್ವಸಮಾನತೆ ಒದಗಿಸಿದ್ದರೆ ಹುಟ್ಟಿದ ಸ್ಥಳದ ಮೇಲೆ ತಾರತಮ್ಯ ಮಾಡಲು ಹೊರಟ ಅಂಶಗಳು ಈ ದೇಶದ ಮೂಲಭೂತವಾದಿಗಳಲ್ಲಿ ಪ್ರಥಮರು ತಮ್ಮ ಸಾಂಪ್ರದಾಯಿಕ ಬುನಾದಿ ಭದ್ರಪಡಿಸಲು ಸಿದ್ಧವಾಗಿರುವ ಇವುಗಳನ್ನು ಸಮೂಲ ಕಿತ್ತೊಗೆಯಬೇಕು. ಅಪಾಯ ತಪ್ಪಿದ್ದಲ್ಲ.

ಸೇಡಂ — *ಅಣ್ಣಾಸಾಗರ್ ಬಿ. ಆರ್.*




ಜುಲೈ ೨೦೦೪ರ ಹೊಸತಿನಲ್ಲಿ ಪ್ರಕಟವಾದ ಇಂಗ್ಲಿಷ್ ಪ್ರಾಧ್ಯಾಪಕ ಬಿದರಹಳ್ಳಿ ನರಸಿಂಹಮೂರ್ತಿಯವರ 'ಷೇಕ್ಸ್‌ಪಿಯರ್‌ನ ಪರಿಚಯ ಇದೆಯಾ' – ಲೇಖನ ಮಾಹಿತಿದಾಯಕವಾಗಿತ್ತು. ಇಂಥಾ ಶ್ರೇಷ್ಠ ಕವಿ ಹೆಸರು ಯಾರು ಕೇಳಿಲ್ಲ! ಆದರೆ ವಿವರಗಳು ಅಷ್ಟಾಗಿ ತಿಳಿದಿರಲಿಲ್ಲ. ತಿಳಿಸಿದಿರಿ, ಥ್ಯಾಂಕ್ಸ್!

ಕಣಿವೆಬಿಳಚಿ — *ಸಂತೇಬೆನ್ನೂರು ಫೈಜ್ನಟ್ರಾಜ್*

ನೀವು ನನ್ನ ಕವಿತೆ 'ಗೋವಿನ ಹಾಡು - ಭಾಗ ಎರಡನ್ನು' ಪ್ರಕಟಿಸಿರುವಿರಿ. ಗೌರವಧನವೂ ತಲುಪಿತು. ಬಹಳ ಸಂತೋಷವಾಯಿತು. ಆದರೆ ಅಸಮಾಧಾನವೂ ಆಯಿತು. ಕಾರಣ :

೧) ಒಂದು ಕಡೆ ಅಕ್ಷರ ತಪ್ಪಿದೆ.
'ಹರಿವ ನದಿಯಲಿ ಹರಿಯ ನೆನೆದು' ಎನ್ನುವುದು
'ಹರಿಯ ನದಿಯಲಿ ಹರಿಯ ನೆನೆದು' ಎಂದಾಗಿದೆ.

೨) ಗೋವಿನ ಹಾಡಿನ ಕೊನೆಯ ಭಾಗವನ್ನೇ ಪ್ರಕಟಿಸದೆ ಪ್ರಮಾದ ಮಾಡಿದ್ದೀರಿ. ಒಟ್ಟೂ ಕವನದ ಅಂತರಾಳವೇ ಇಲ್ಲದಂತಾಗಿದೆ. ಆ ಭಾಗ

'ಸಿಡಿದ ತಾರೆಗಳ ಈ ವಿಶ್ವದಂದದಿ
ನಾಸಿಕ ನ್ಯಾಯದ ಕೂಟ ದ್ವಂದ್ವದಿ
ಗೋವಿನ್ಹಾಡಿನ ಅರ್ಥ ಪೇಳಿರಿ.'

ಶಿವಮೊಗ್ಗ — *ಡಾ|| ಮ. ಸಕಲೇಶ್*

ಕಳೆದ ಸಂಚಿಕೆಯಲ್ಲಿ ಡಾ|| ರಹಮತ್ ತರಿಕೆರೆಯವರ ''ಲಖನೋದ ಮುದುಕಿಯರು ಹಾಗೂ ಮಹಾಚುನಾವಣೆ'' ಲೇಖನ ತುಂಬ ಅರ್ಥಪೂರ್ಣವಾಗಿ ಹಾಗೂ ಚಿಂತನಾಶೀಲತೆಯಿಂದ ಮೂಡಿಬಂದಿದೆ. ಇಂತಹ ಅಧ್ಯಯನಾರ್ಹ ಲೇಖನ ಬರೆದ ಡಾ|| ರಹಮತ್ ತರಿಕೆರೆಯವರಿಗೆ ಹಾಗೂ ಈ ರೀತಿಯ ಉತ್ತಮ ಲೇಖನ ಪ್ರಕಟಿಸಿದ 'ಹೊಸತು' ಪತ್ರಿಕೆಯ ಸಂಪಾದಕರಿಗೆ ನನ್ನ ಧನ್ಯವಾದಗಳು.

ಬಹಳ ಮುಖ್ಯವಾಗಿ ಲೇಖಕರು ಲಖನೋದ ಘಟನೆಗೂ ಕರ್ನಾಟಕದ ಮಾನವಿ ತಾಲೂಕಿನ ಚಿತ್ರಣಕ್ಕೂ ವ್ಯತ್ಯಾಸ ಇಲ್ಲವೆಂಬಂತೆ ೨೦೦೪ರ ಸಾರ್ವತ್ರಿಕ ಮಹಾಚುನಾವಣೆಯನ್ನು ವಿಶ್ಲೇಷಿಸಿರುವುದು ಸ್ವಾಗತಾರ್ಹ. ಯಾಕೆಂದರೆ ಇವತ್ತಿನ ಇಂಡಿಯಾದ ರಾಜಕೀಯವೇ ಹಾಗೆ. ಹಣಬಲ, ತೋಳ್ಬಲ ಹಾಗೂ ಜಾತಿ ಪ್ರಾಬಲ್ಯ ಇರುವವರೇ ಈ ದೇಶದ ಇಂದಿನ ನಾಯಕರಾಗುತ್ತಿದ್ದಾರೆಂಬುದು ಡಾ|| ರಹಮತ್ ತರಿಕೆರೆಯವರ ಲೇಖನದ ಸಾರಾಂಶ ಇದು. ವಾಸ್ತವಕ್ಕೆ ಹಿಡಿದಂಥ ಕನ್ನಡಿಯಾಗಿದೆ.

ಶಿವಮೊಗ್ಗ — *ಕವಿರಂ. ಕೇಶವಮೂರ್ತಿ*

ಬೆಂಗಳೂರು ಮಹಾನಗರ ಪಾಲಿಕೆಯು ನಮ್ಮ ಸಮಾಲೋಚಕ ಮಂಡಲಿಯ ಡಾ|| ಕೆ. ಮರುಳಸಿದ್ದಪ್ಪನವರಿಗೆ ಕೆಂಪೇಗೌಡ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಸಾಹಿತ್ಯ ಕ್ಷೇತ್ರಕ್ಕೆ ಅವರು ಸಲ್ಲಿಸಿರುವ ಮಹತ್ವದ ಕಾಣಿಕೆಯನ್ನು ಗಮನಿಸಿ ಈ ಪ್ರಶಸ್ತಿಯನ್ನು ನೀಡಲಾಗಿದೆ. ಡಾ|| ಮರುಳಸಿದ್ದಪ್ಪನವರಿಗೆ 'ಹೊಸತು' ಅಭಿನಂದನೆಗಳನ್ನು ಸಲ್ಲಿಸುತ್ತಾ ತನ್ನ ಹರ್ಷವನ್ನು ವ್ಯಕ್ತಪಡಿಸುತ್ತದೆ.

- ಸಂ

ಜುಲೈ ೨೦೦೪ರ ಸಂಚಿಕೆಯಲ್ಲಿ ರಾಜಕಾರಣದಲ್ಲೆ ರುಚಿ ಇಟ್ಟುಕೊಂಡ ಸುಮಾರು ಏಳು ಲೇಖನಗಳು ಪ್ರಕಟವಾಗಿವೆ. ಅವೆಂದರೆ 'ಈ ತಿಂಗಳು', ಸಂಪಾದಕೀಯ, ಚುನಾವಣೆಯ ಹಿಂದು-ಮುಂದೆ, ಲಖನೋದ ಮುದುಕಿಯರು ಹಾಗೂ ಮಹಾ ಚುನಾವಣೆ, ಭಾರತದ ವಿದೇಶಾಂಗ ನೀತಿಯ ಮುಂದಿರುವ ಸವಾಲುಗಳು, ವಾಜಪೇಯಿ ಭಾಜಪ ಮತ್ತು ಮುಸ್ಲಿಂ ಜನತೆ. ರಾಜಕಾರಣದ ರುಚಿ ಇಟ್ಟುಕೊಂಡಲ್ಲಿ ಸಾಹಿತ್ಯದ ಸೇವೆ ಮಾಡಲು ಸಾಧ್ಯವಿಲ್ಲ. ಹೊಸತು ಸಂಚಿಕೆ ಯಾವಾಗಲೂ ಹೊಸ ಸಾಹಿತ್ಯದ ದರ್ಶನ ಓದುಗರಿಗೆ ಒದಗಿಸಿಕೊಡಬೇಕು.

ದಯಮಾಡಿ ರಾಜಕಾರಣ ಬಿಟ್ಟು, ಸಾಹಿತ್ಯದ ಕಡೆಗೆ ಹೆಚ್ಚು ಗಮನ ಸೆಳೆಯುವಿರೆಂದು ನಂಬುವೆ.

ಬೆಳಗಾವಿ — *ಮಲ್ಲಿಕಾರ್ಜುನ ಶೆಟ್ಟಿ*

**ಚುನಾವಣೆಯ ನಂತರದ ಸಂಚಿಕೆಯಲ್ಲಿ ಅಂತಹ ಲೇಖನಗಳು ಇರಬೇಕು. ನಮ್ಮದು ಕೇವಲ ಸಾಹಿತ್ಯಕ್ಕೆ ಸೀಮಿತವಾದ ಪತ್ರಿಕೆಯಲ್ಲ. ಸಾಹಿತ್ಯದಂತೆ ರಾಜಕಾರಣವೂ ದೇಶದ ಜೀವನದ ಭಾಗ.**

–ಸಂಪಾದಕ

ತಿಂಗಳ ಪತ್ರಿಕೆ 'ಹೊಸತು' ಪತ್ರಿಕೆಯ ಎರಡನೆ ಸಂಚಿಕೆ ತಲುಪಿದೆ. ಪತ್ರಿಕೆಯು ಕನ್ನಡದ ಎಲ್ಲ

ಪತ್ರಿಕೆಗಳಿಗಿಂತ ವಿಭಿನ್ನವಾಗಿದ್ದು ಒಳ್ಳೆ ಅಭಿರುಚಿಯಿಂದ ಕೂಡಿದೆ. ಅಲ್ಲದೇ ಅತ್ಯಂತ ಉಪಯುಕ್ತ ವಿಷಯಗಳನ್ನು ಒಳಗೊಂಡಿದ್ದು ಇದೇ ರೀತಿ ಪತ್ರಿಕೆ ಇನ್ನೂ ಹೆಚ್ಚಿನ ಉಪಯುಕ್ತ ವಿಷಯಗಳನ್ನು ನೀಡುತ್ತ ಬರಲಿ ಎಂದು ಹಾರೈಸುತ್ತೇನೆ.

ಈ ಸಂಚಿಕೆಯಲ್ಲಿ ಬಂದ ಹಂಝು ಮಲಾರ್‌ರವರ ''ನವ ಮುಸ್ಲಿಮನ ಪುರಾಣಗಳು'' ಈಗಿನ ವಾಸ್ತವಕ್ಕೆ ಹಿಡಿದ ಕನ್ನಡಿಯಂತಿದೆ. ಪ್ರಸ್ತುತ ನಡೆಯುತ್ತಿರುವ ವಿದ್ಯಮಾನಗಳನ್ನೇ ಕಥೆಯ ರೂಪದಲ್ಲಿ ಬಿಂಬಿಸಿರುವುದಕ್ಕೆ ಅಭಿನಂದನೆಗಳು.

ಧಾರವಾಡ — ಬ. ಸಂ. ಕುಪ್ಪಸ್ತ್

ಜುಲೈ ತಿಂಗಳ ''ಹೊಸತು'' ಮಾಸಪತ್ರಿಕೆಯನ್ನು ಓದಿ ತುಂಬಾ ಸಂತೋಷವಾಯಿತು. ಅದರಲ್ಲೂ ಶ್ರೀ ಕೆ. ಎಸ್. ನವೀನರ ''ಛಲಬೇಕು ಮನುಜಂಗೆ'' ಲೇಖನದಲ್ಲಿ ಹೆಸರಿಸಿರುವ ತಿವಾರಿಯವರ ಶ್ರಮ ನಿಜಕ್ಕೂ ಮೆಚ್ಚುವಂಥಾದ್ದಾಗಿದೆ. ನಿಜಕ್ಕೂ ಈತ – ಇಂಥ ಪೋಲಿಯೋ ಪೀಡಿತರಾಗಿರುವ, ತನ್ನಂತೆ ಇರುವ ಸಹಸ್ರಾರು ಜನರಿಗೆ ಆದರ್ಶವಾಗುವಂಥ ವಿಚಾರ ಎಲ್ಲ ಅಂಗವಿಕಲರೂ ಓದಿ ತಿಳಿದುಕೊಳ್ಳಬೇಕಾದ ವಿಚಾರ.

ಬೆಂಗಳೂರು — ಬಿ. ಎಸ್. ಶೇಷಾದ್ರಿ

ಶ್ರೀಮತಿ ವತ್ಸಲಾ ಅವರ ಲೇಖನ 'ಅನುಪಮ ಒಂದು ನೆನಪು' ತುಂಬಾ ಉತ್ತಮವಾದ ಲೇಖನ. ನೆನಪಿನಲ್ಲಿ ಉಳಿದಿರುವ ಕೆಲವೇ ಮಾತುಗಳನ್ನು ದಾಖಲಿಸಿದರೂ ಅನುಪಮ ಅವರ ವ್ಯಕ್ತಿತ್ವ ಮತ್ತು ಬರಹಕ್ಕೆ ಕನ್ನಡಿಯಂತಿರುವ ಆ ಲೇಖನವನ್ನು ಪ್ರಕಟಿಸಿದ ನಿಮಗೆ ಧನ್ಯವಾದಗಳು. ಸಂದರ್ಶನ ಎಂದರೆ ಕೇವಲ ವೈಯಕ್ತಿಕ ವಿಚಾರಗಳಿಗೇ ಹೆಚ್ಚು ಒತ್ತುಕೊಡುತ್ತಿರುವ ಇಂದಿನ ದಿನಗಳಲ್ಲಿ, ಸಾಹಿತ್ಯ, ಬರವಣಿಗೆ ಬಗ್ಗೆ, ಕೆಲವೇ ಮಾತುಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ನಿರ್ಭಿಡೆಯಿಂದ ಮಂಡಿಸಿದ್ದಾರೆ ಅನುಪಮಾ ಅವರು. ಇಂತಹ ಸಂದರ್ಶನಗಳು ಹೆಚ್ಚಾಗಿ ನಿಮ್ಮ ಪತ್ರಿಕೆಯಲ್ಲಿ ಮೂಡಿಬರಲಿ.

ಬೆಂಗಳೂರು — ವೆಂಕಟಲಕ್ಷ್ಮಿ

### ಲೇಖಕರ ಗಮನಕ್ಕೆ

'ಹೊಸತು' ತಿಂಗಳ ಪತ್ರಿಕೆಯಾದ್ದರಿಂದ ನೀವು ಕಳಿಸಿದ ಲೇಖನ ಮುಂದಿನ ಸಂಚಿಕೆಯಲ್ಲೇ ಪ್ರಕಟವಾಗುತ್ತದೆಂದು ನಿರೀಕ್ಷಿಸಬೇಡಿ. ಅಕ್ಷರಗಳು ಸ್ಪಷ್ಟವಾಗಿಲ್ಲದ, ಜೆರಾಕ್ಸ್ ಮಾಡಿಸಿದ ಲೇಖನಗಳ ಬಗ್ಗೆ ಕೂಡಲೆ ಗಮನ ನೀಡಲಾಗುವುದಿಲ್ಲ. ಬೇರೆ ಪತ್ರಿಕೆಗಳಿಗೆ ಕಳಿಸಿದ ಲೇಖನವನ್ನೇ 'ಹೊಸತು'ವಿಗೆ ದಯವಿಟ್ಟು ಕಳಿಸಬೇಡಿ. ಲೇಖನದಲ್ಲಿ ನಿಮ್ಮ ಪೂರ್ಣ ವಿಳಾಸ ಇರಲಿ. ಅಪ್ರಕಟಿತ ಲೇಖನಗಳನ್ನು ಹಿಂದಕ್ಕೆ ಪಡೆಯಲಿಚ್ಛಿಸುವವರು ಅಂಚೆ ಚೀಟಿ ಅಂಟಿಸಿದ ಲಕೋಟೆ ಲಗತ್ತಿಸಿರಿ.

ದಯವಿಟ್ಟು ಸಹಕರಿಸಿ.

-ಸಂಪಾದಕ

ಸಂಪಾದಕೀಯ

# ಇದೂ ಪ್ರಜಾಪ್ರಭುತ್ವ

ಸರಿಯಾಗಿ ಐವತ್ತು ವರ್ಷಗಳ ಹಿಂದೆ (ಜುಲೈ ೯, ೧೯೫೪) ಅಮೆರಿಕಾದ ಅಂದಿನ ವಿದೇಶಾಂಗ ಸಚಿವ ಜಾನ್ ಫಾಸ್ಟರ್ ಡಲೆಸ್ ಎಂಬ ತೀವ್ರ ಆತಂಕಕಾರಿ ಮುತ್ಸದ್ದಿ ಚೀನಾ ದೇಶವನ್ನು ಫಾರ್ಮೋಸಾ ಬದಲಿಗೆ ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ಸದಸ್ಯ ರಾಷ್ಟ್ರವನ್ನಾಗಿ ಮಾಡಿಕೊಳ್ಳುವ ವಿರುದ್ಧವಾಗಿ ಅಬ್ಬರಿಸಿದ್ದುದು ಹೀಗೆ: ''ನಾವು ವೀಟೋ ಪ್ರಯೋಗಿಸಿಯಾದರೂ ಚೀನಾ ದೇಶವನ್ನು ಹೊರಗಿಡುತ್ತೇವೆ. ವಿಶ್ವಸಂಸ್ಥೆ ಇರುವುದು ತಪ್ಪು ಮಾಡಿ ಶಿಕ್ಷೆಗೆ ಗುರಿಯಾದವರನ್ನು ಸುಧಾರಣೆಯ ಹಾದಿಯಲ್ಲಿ ಕೊಂಡೊಯ್ಯಲು ಅಲ್ಲ; ತಮ್ಮ ಅಂತರರಾಷ್ಟ್ರೀಯ ಜವಾಬ್ದಾರಿಗಳನ್ನು ನೇಮವಾಗಿ ನಿರ್ವಹಿಸಲು ಸಿದ್ಧವೆಂದು ಸಾಬೀತು ಮಾಡಿ ತೋರಿಸಿದವರಿಗೆ ಮಾತ್ರವೇ ವಿಶ್ವಸಂಸ್ಥೆಯಲ್ಲಿ ಸ್ಥಾನ. ವಿಶ್ವಸಂಸ್ಥೆ ಸೇರಿದ ಮೇಲೆ ತಮ್ಮನ್ನು ತಿದ್ದಿಕೊಳ್ಳುತ್ತೇವೆನ್ನುವವರಿಗೆ ಸ್ಥಾನವಿಲ್ಲ.'' ಅಮೆರಿಕಾದ ಇಂದಿನ ವಿದೇಶಾಂಗ ಕಾರ್ಯದರ್ಶಿಯು ಅಯೋಗ್ಯ ಅಧ್ಯಕ್ಷನೊಬ್ಬನ ಅಣತಿಯಂತೆ ನಡೆಯುತ್ತಾ ಡಲೆಸ್ ಎಂಬ ಅಂತರರಾಷ್ಟ್ರೀಯ ಪುಂಡನನ್ನು ಮೀರಿಸುವ ದುಷ್ಕೃತ್ಯಗಳಲ್ಲಿ ತೊಡಗಿದ್ದಾನೆ ಮತ್ತು ಮಹಾಪಾತಕಗಳಿಗೆ ಬೆಂಬಲವಾಗಿ ನಿಂತಿದ್ದಾನೆ. ಅಂದಿನ ಚೀನಾ ಯಾವ ರೀತಿಯಲ್ಲೂ ಬೇರೆ ರಾಷ್ಟ್ರಗಳ ಆಂತರಿಕ ವ್ಯವಹಾರಗಳಲ್ಲಿ ಕೈಹಾಕಿ ಜನರನ್ನು ಮರ್ದಿಸುವ ಹೇಯ ಕೃತ್ಯದಲ್ಲಿ ತೊಡಗಿರಲಿಲ್ಲವಾದರೂ ಡಲೆಸ್ ಆ ದೇಶದ ವಿರುದ್ಧ ವಿಷ ಕಾರಿದ್ದ. ಆದರೆ ಇಂದು ಇಸ್ರೇಲಿನಂತಹ ದೌರ್ಜನ್ಯ ಮೂರ್ತಿಯನ್ನು ಅಮೆರಿಕಾ ಸಂಪೂರ್ಣವಾಗಿ ಬೆಂಬಲಿಸುತ್ತದೆ ಮತ್ತು ಆ ದೇಶವು ಅಂತರರಾಷ್ಟ್ರೀಯ ಕಾನೂನಿನ ಉಲ್ಲಂಘನೆ ಮಾಡಲು ಪುಷ್ಟಿ ನೀಡುತ್ತದೆ. ಪ್ಯಾಲಿಸ್ಟೈನ್‌ಗೆ ಸೇರಿದ ಪ್ರದೇಶದಲ್ಲಿ ಕೋಟೆಯೊಂದನ್ನು ಕಟ್ಟುವ ಏಕಪಕ್ಷೀಯ ನಿರ್ಧಾರವನ್ನು ಇಸ್ರೇಲ್ ಕೈಗೊಂಡು ಅದನ್ನು ಕಾರ್ಯಗತಗೊಳಿಸುತ್ತಿದೆ. ತನ್ನ ಸುಭದ್ರತೆಗೆ ಇದು ಅವಶ್ಯಕವೆಂದು ಹೇಳುತ್ತಾ ಇಸ್ರೇಲ್ ತನ್ನದಲ್ಲದ ಪ್ರದೇಶಕ್ಕೆ ನುಗ್ಗಿ ಅಲ್ಲಿ ಕೋಟೆ ಕಟ್ಟಿದೆ. ಪ್ಯಾಲಿಸ್ಟೈನ್ ಜನರ ಊರುಗಳು, ಮನೆಗಳು, ಕೃಷಿ ಭೂಮಿ, ಎಲ್ಲ ಛಿದ್ರಗೊಂಡು ಅವರಿಗೆ ನೆಲೆಯಿಲ್ಲವಾಗುವಂಥ ಈ ಕ್ರಮವು ದೊಡ್ಡ ದುಂಡಾವೃತ್ತಿಯಾಗಿದೆ. ಅಂತರರಾಷ್ಟ್ರೀಯ ನ್ಯಾಯಾಲಯವು ಆ ಪ್ರಕ್ರಿಯೆಯನ್ನು ಖಂಡಿಸಿ ಅದು ನ್ಯಾಯಯುತವಲ್ಲವೆಂದು ಸಾರಿದೆ. ಹದಿನಾಲ್ಕು ಮಂದಿಯ ಪೀಠದಲ್ಲಿ ಆ ತೀರ್ಮಾನವನ್ನು ವಿರೋಧಿಸಿದವನು ಒಬ್ಬನೇ ಒಬ್ಬ; ಅವನು ಅಮೆರಿಕಾದವನು. ಡಲೆಸ್ ಐವತ್ತು ವರ್ಷಗಳ ಹಿಂದೆ ಚೀನಾ ಬಗ್ಗೆ ಹೇಳಿದ್ದುದನ್ನು ಪವೆಲ್ ಇಂದು ಇಸ್ರೇಲ್ ಬಗ್ಗೆ ನುಡಿಯದಂತಹ ಧೂರ್ತ. ಅಂತರರಾಷ್ಟ್ರೀಯ ನ್ಯಾಯಾಲಯ ಈ ತೀರ್ಮಾನ ಕೊಡಲು ಯಾವ ದಾಸಯ್ಯನೆಂದು ಇಸ್ರೇಲ್‌ನ ಶರೋನ್ ಹೇಳಿದರೆ ಪವೆಲ್ ಚಪ್ಪಾಳೆ ತಟ್ಟುತ್ತಾನೆ. ಅಂತರರಾಷ್ಟ್ರೀಯ ಕಾನೂನು ವ್ಯವಸ್ಥೆಗೆ ಇಸ್ರೇಲ್ – ಅಮೆರಿಕಾ ಕೊಡುವ ಬೆಲೆ ಇದು. ತಮಗೆ ಬೇಕಾದಾಗ ಅದನ್ನು ಮಾನ್ಯ ಮಾಡುವುದು, ಬೇಡದಾದಾಗ ಧಿಕ್ಕರಿಸುವುದು ಆ ದೇಶಗಳ ಉದ್ಧಟತನದ ಅನೀತಿಯಾಗಿದೆ.

ಅದೆಂತಹ ಪ್ರಜಾಪ್ರಭುತ್ವ ಆ ದೇಶಗಳಲ್ಲಿ ಜಾರಿಯಲ್ಲಿದೆಯೆಂಬ ಪ್ರಶ್ನೆಯನ್ನು ಗಂಭಿರವಾಗಿ ಹಾಕಿಕೊಳ್ಳಬೇಕಾದ ಸನ್ನಿವೇಶ ನಮ್ಮದಾಗಿದೆ. ಆ ದೇಶದ ಜನರಿಗೆ ತಮ್ಮ ಪುಂಡು-ಮೊಂಡು ಸರ್ಕಾರಗಳನ್ನು ನಿರ್ಬಂಧಿಸುವ ಸಾಮರ್ಥ್ಯ ಎಂದಾದರೂ ಬರಬಹುದೆ ? ಆ ದೇಶಗಳ, ವಿಶೇಷತಃ ಅಮೆರಿಕಾದ, ಮಾಧ್ಯಮಗಳು ಪ್ರಮುಖ ವಿಷಯಗಳನ್ನು ಚರ್ಚಿಸುವ ಪರಿಯೇ ಭಾರಿ ಮೋಸದ್ದು. ಅಷ್ಟು ಪತ್ರಿಕೆಗಳು, ರೇಡಿಯೋ, ಟಿ.ವಿ., ಇಂಟರ್‌ನೆಟ್ ಎಲ್ಲಾ ಇದ್ದರೂ ಅವರ ದೃಷ್ಟಿ ತೀರಾ ಸೀಮಿತವಾದ್ದು, ಬೇಜವಾಬ್ದಾರಿತನದ್ದು, ವಿಶ್ವದ್ರೋಹಕ್ಕೆ ಸಮಾನವಾದ್ದು. ಇರಾಕನ್ನು ಆಕ್ರಮಿಸಿ ಸಂಪತ್ತನ್ನು ಇನ್ನಿಲ್ಲದಂತೆ ಲೂಟಿ ಮಾಡುತ್ತಿರುವ ಅಮೆರಿಕಾ ಅಲ್ಲಿನ ಜನರನ್ನು ಹಿಂಸಿಸಿ ಕೊಲ್ಲುತ್ತಿದೆ, ನಗರಗಳನ್ನು ನಾಶ ಮಾಡುತ್ತಿದೆ; ಆದರೆ ಅದು ಅಮೆರಿಕಾ ಮತ್ತು ಬ್ರಿಟನ್‌ಗಳ ಮಾಧ್ಯಮಗಳಿಗೆ ಗೌಣವಾದ ವಿಚಾರ. ಯುದ್ಧ ಹೂಡುವ ಮುನ್ನ ಈ ಎರಡೂ ದೇಶಗಳ ಗೂಢಚಾರ ಸಂಸ್ಥೆಗಳು ಇರಾಕಿನ ಬಗ್ಗೆ ಮಾಹಿತಿ ನೀಡಿದ್ದುವು; ಅದನ್ನು ಕಡೆಗಾಣಿಸಿ ಆಕ್ರಮಣ ಮಾಡಿದ್ದು ಘೋರ ಅಪರಾಧ. ತಮ್ಮ ರಾಜಕೀಯ ಹುನ್ನಾರಗಳಿಗೆ ಅನುಕೂಲವಾಗುವಂತೆ ಗೂಢಚಾರ ವರದಿಗಳನ್ನು ತಿದ್ದಿಕೊಂಡ ಶ್ವಪಚರು ಬುಷ್ ಮತ್ತು ಬ್ಲೇರ್. ಪ್ರಜಾಪ್ರಭುತ್ವದಲ್ಲಿ ಇಂತಹ ಸಂದರ್ಭದಲ್ಲಿ ಮೊಟ್ಟಮೊದಲ ಕ್ರಿಯೆ ಏನಾಗಿರಬೇಕು ? ಇರಾಕಿನಿಂದ ತಕ್ಷಣವೇ ಕಾಲ್ತೆಗೆಯುವುದು, ಅಲ್ಲಿ ನಡೆಸಲಾದ ಲೂಟಿ ಮತ್ತು ಧ್ವಂಸಕೃತ್ಯಗಳಿಗಾಗಿ ಕ್ಷಮೆ ಕೇಳುವುದು ಮತ್ತು ಕೋಟಿಗಟ್ಟಲೆ ಡಾಲರುಗಳ ಪರಿಹಾರ ನೀಡುವುದು. ನಂತರ ಇರಾಕಿನ ಜನ ಸದ್ದಾಂ ಹುಸೇನನನ್ನು ಅಧ್ಯಕ್ಷನನ್ನಾಗಿ ಇರಿಸಿಕೊಳ್ಳಲಿ ಇಲ್ಲವೇ ಶಿಕ್ಷಿಸಲಿ, ಅದು ಅವರಿಗೆ ಬಿಟ್ಟ ವಿಚಾರ. ಆದರೆ ಬುಷ್-ಬ್ಲೇರ್ ಅಂತೂ ತಮ್ಮ ಸ್ಥಾನಗಳಲ್ಲಿ ಮುಂದುವರಿಯಕೂಡದು.

ಪ್ರಜಾಪ್ರಭುತ್ವವು ಕೇವಲ ಸ್ವರೂಪ ಮಾತ್ರದ್ದಾಗಿ ಅದು ಹೂರಣವಿಲ್ಲದ ಹೋಳಿಗೆಯಾದರೆ ಅದನ್ನು ತೊಟ್ಟಿಗೆ ಒಗೆಯಬೇಕಷ್ಟೆ. ಅಮೆರಿಕಾ ಮತ್ತು ಬ್ರಿಟನ್‌ಗಳಲ್ಲಿ ಚರ್ಚೆಯಾಗುವುದು ಗೂಢಚಾರ ಸಂಸ್ಥೆಗಳ ಪ್ರಾಕೃತ ತಿಳಿವಳಿಕೆ ಮತ್ತು ಅದನ್ನು ಶುದ್ಧಿಗೊಳಿಸಬೇಕಾದ ಪ್ರಕ್ರಿಯೆ. ಗೂಢಚಾರ ವರದಿಗಳನ್ನು ಉತ್ಪ್ರೇಕ್ಷಿಸಿಕೊಂಡು ಆಕ್ರಮಣ ನಡೆಸಿದವರನ್ನು ರಾಜಕೀಯ ಪರಯ್ಯಾಗಳನ್ನಾಗಿ ಮಾಡಬೇಕೆಂಬುದು ಮುಚ್ಚಿಹಾಕಲ್ಪಡುತ್ತದೆ. ಆದರೂ ಸೆನೆಟ್ ಮತ್ತು ಹೌಸ್ ಆಫ್ ಕಾಮನ್ಸ್ ಅಮೆರಿಕಾ ಮತ್ತು ಬ್ರಿಟನ್ನಿನಲ್ಲಿ ಚರ್ಚಿಸಿದ್ದೇ ಚರ್ಚಿಸಿದ್ದು! ಬುಷ್ ಮತ್ತು ಬ್ಲೇರ್ ನಡೆಸಿದ ಹೀನಾಯ ಕೃತ್ಯಗಳಿಗಾಗಿ ಅವರಿಗೆ ದೂಷಣೆ-ಶಿಕ್ಷೆಗಳಿಲ್ಲ, ಇರಾಕಿನಿಂದ ಹೊರಬರಬೇಕೆಂಬ ನಿರ್ಣಯವಿಲ್ಲ, ಒಂದು ಕಡೆ ಅಂತರರಾಷ್ಟ್ರೀಯ ನ್ಯಾಯಾಲಯದ ಮುಖಕ್ಕೆ ಮಂಗಳಾರತಿ, ಮತ್ತೊಂದೆಡೆ ಮೂಲಭೂತ ಪ್ರಶ್ನೆಗಳನ್ನು ರಾಜಕೀಯ ವರ್ತುಲದಿಂದ ಹೊರಗಿರಿಸುವುದು; ಇದು ಪ್ರಜಾಪ್ರಭುತ್ವವಲ್ಲ, ಕೇವಲ ಅದರ ಕೊಳಕು ಅಣಕು.

ಸರ್ಕಾರವು ಪಿಡಬ್ಲ್ಯೂಜಿ, ನಕ್ಸಲೀಯ ಮುಂತಾಗಿ ತೀವ್ರಗಾಮಿಗಳೆಂದು ಕರೆಯಲಾಗಿರುವವರ ಜೊತೆ ಸಂಧಾನದ ಮಾತುಕತೆಗೆ ಪ್ರಯತ್ನ ನಡೆಸುತ್ತಿರುವ ಈ ಸಂದರ್ಭದಲ್ಲಿ ಈ ಚರ್ಚೆ ಪ್ರಸ್ತುತವೆನಿಸಬಹುದು.

— ಸಂಪಾದಕ

# ಹಿಂಸೆ-ಪ್ರತಿಹಿಂಸೆ-ಶೋಷಕ-ಸೃಜನಶೀಲ

ಕೆ. ಎಸ್. ಪಾರ್ಥಸಾರಥಿ

"ಪ್ರಭುತ್ವ" ಮೀಮಾಂಸೆ ಇಲ್ಲದೆ ಹಿಂಸೆಯ ಬಗ್ಗೆ ಚರ್ಚಿಸಲಾಗುವುದಿಲ್ಲ. ಪ್ರಭುತ್ವವೆಂದರೆ ಪ್ರಬಲವರ್ಗದ ಆಳ್ವಿಕೆ, ವರ್ಗಹಿಂಸೆಯ ಸಂಘಟಿತ ಸ್ವರೂಪ. ಸಂಘಟನೆಗೆ ಪೂರ್ವದಲ್ಲಿ ಪ್ರಭುತ್ವದ ಸ್ವರೂಪ ಅರಾಜಕತೆ. ಟಾಲ್‌ಸ್ಟಾಯ್‌ನ "ರಿಸರೆಕ್ಷನ್" ಕಾದಂಬರಿಯಲ್ಲಿ ಒಂದು ಸಂದರ್ಭ : ಪಾದ್ರಿ ಜೈಲಿಗೆ ಬಂದು, ಖೈದಿಗಳಿಗೆ ಕಾನೂನು ಪಾಲಿಸುವ, ಕಳ್ಳತನ, ಕೊಲೆ, ಸುಲಿಗೆ ಮಾಡದಿರುವ ಆಗತ್ಯ ತಿಳಿಸುತ್ತಾನೆ. ಒಳ್ಳೆಯವರಾಗಿರೆಂದು ಉಪದೇಶಿಸಿ ಅವರಿಗೆ ಬೈಬಲ್ ನೀಡುತ್ತಾನೆ. ಒಬ್ಬ ಖೈದಿ ಅದನ್ನು ನಿರಾಕರಿಸುತ್ತಾ ಉದ್ಗರಿಸುತ್ತಾನೆ: "ದೊರೆಯೇ ಮೊದಲು ಕಳ್ಳನಾಗಿದ್ದ. ಎಲ್ಲರ ಸಂಪತ್ತನ್ನು ದೋಚಿ ನಂತರ ತಾನೇ ದೊರೆಯಾಗಿ, ಕಳ್ಳತನದ ವಿರುದ್ಧ ಕಾನೂನು ಮಾಡಿದ. ಅವನು ಅಂತಹ ಕಾನೂನನ್ನು ಮೊದಲೇ ಮಾಡಬೇಕಿತ್ತು." ಪ್ರಭುತ್ವದ ಸ್ವರೂಪದ ಬಗೆಗಿನ ಚರ್ಚೆಯೇ ಎಲ್ಲ ರಾಜಕೀಯ ಸಿದ್ಧಾಂತಗಳಿಗೂ, ಸಾಮಾಜಿಕ ಪರಿಕರಗಳಾದ ನೀತಿಶಾಸ್ತ್ರ, ತತ್ವಶಾಸ್ತ್ರ, ಕಲೆ, ಅರ್ಥಶಾಸ್ತ್ರ ಮುಂತಾದವುಗಳು ಪ್ರಕ್ರಿಯಿಸುವ ರೀತಿಗೂ ಆಧಾರ. 'ಜನರಿಗಾಗಿ, ಜನರಿಂದ' ಎಂದು ಸಾರುವ ಇಂದಿನ ಪ್ರಜಾಪ್ರಭುತ್ವದಲ್ಲೂ ಬಯಸಿದವರೆಲ್ಲಾ ಚುನಾವಣೆಗೆ ನಿಲ್ಲುವುದು, ಆರಿಸಿಬರುವುದು, ಅನೇಕ ವ್ಯವಸ್ಥಾಂತರ್ಗತ ಅಡಚಣೆಗಳಿಂದಾಗಿ ಸಾಧ್ಯವಾಗುವುದಿಲ್ಲ. ಯಾರು ಪ್ರಭುತ್ವವನ್ನು ಹಿಡಿಯಲು ಸಮರ್ಥರಾಗುತ್ತಾರೋ ಅವರದೇ ಒಂದು ವರ್ಗವಿರುತ್ತದೆ. ಅದು ಆಳುವ ವರ್ಗ. ಇಂದಿನ ಪ್ರಜಾಪ್ರಭುತ್ವ ಪ್ರಕ್ರಿಯೆಯಲ್ಲಿ ಈ ವರ್ಗದ ಬಿಡಿಬಿಡಿ ಸದಸ್ಯರು ಬದಲಾಯಿಸುತ್ತಾ ಹೋಗುತ್ತಾರೆಯೇ ವಿನಃ, ಚುಕ್ಕಾಣಿ ಹಿಡಿದ ವರ್ಗದ ಬದಲಾವಣೆ ನಿರ್ಣಾಯಕವಾಗಿ ಆಗುವುದಿಲ್ಲ. ಅವರ ಹಿಡಿತದಲ್ಲಿರುವ ಪ್ರಭುತ್ವ ಅವರದೇ ವರ್ಗ ಹಿತಾಸಕ್ತಿಗಳನ್ನು ಪ್ರತಿನಿಧಿಸುತ್ತಾ, ವರ್ಧಿಸುತ್ತಾ ಅವುಗಳನ್ನು ರಕ್ಷಿಸುತ್ತದೆ.

ಪ್ರಭುತ್ವ, ತಾನು ಜಾರಿಗೊಳಿಸುವ ರೀತಿನೀತಿಗಳನ್ನು ಸಮಾಜದ ಎಲ್ಲ ಸದಸ್ಯರೂ, ಅಂದರೆ, ಅಂದಂದಿನ ಆಳುವ ವರ್ಗಕ್ಕೆ ಸೇರದವರೂ ಒಳಗೊಂಡಂತೆ ಎಲ್ಲರೂ ಕಟ್ಟುನಿಟ್ಟಾಗಿ ಪಾಲಿಸಬೇಕೆಂದು ಬಯಸುತ್ತದೆ. ಇದನ್ನು ಖಾತರಿಗೊಳಿಸಲು, ಅಗತ್ಯ ಬಿದ್ದರೆ ಅವಶ್ಯವಿದ್ದಷ್ಟು ಬಲಾತ್ಕಾರವನ್ನು ತನ್ನ ನ್ಯಾಯಾಂಗ-ಪೊಲೀಸ್-ರಕ್ಷಣಾ ವ್ಯವಸ್ಥೆಗಳ ಮೂಲಕ ಪ್ರಯೋಗಿಸುತ್ತದೆ. ಪ್ರಭುತ್ವದ ಪ್ರಕ್ರಿಯೆಗಳು ಎಲ್ಲಿಯವರೆಗೆ ಆಳುವ ವರ್ಗದ ಹಿತವನ್ನು ಮಾತ್ರ ಪ್ರತಿಪಾದಿಸುತ್ತವೆಯೋ ಅಲ್ಲಿಯವರೆಗೆ, ಅಂಥ ಸಂದರ್ಭ ಗಳಲ್ಲೆಲ್ಲಾ ಈ ಬಲಾತ್ಕಾರವು ಆಳುವ ವರ್ಗವಲ್ಲದವರಿಗೆ ಹಿಂಸೆಯ ರೂಪ ಪಡೆಯುತ್ತದೆ. ವರ್ಗಗಳ ನಡುವಿನ ಹಲವು ಸುಪ್ತ-ಜಾಗೃತ ಸಂಘರ್ಷಗಳನ್ನು ಪ್ರಭುತ್ವದ ಪ್ರಕ್ರಿಯೆಗಳು ಪ್ರತಿಬಿಂಬಿಸುತ್ತವೆ, ಜಮೀನ್ದಾರರ ಹಿತರಕ್ಷಕ ಸರ್ಕಾರ ಭೂಸುಧಾರಣೆ ಬಯಸುವವರ ವಿರುದ್ಧ ಬಲಪ್ರಯೋಗ ಮಾಡುವಂತೆ. ಪ್ರಭುತ್ವ ಕೇವಲ ಹಿಂಸೆಯನ್ನು ಮಾತ್ರ ಪ್ರಯೋಗಿಸುವ ಸಂಘಟನೆಯಲ್ಲ. ತನ್ನ ಆಳ್ವಿಕೆ ಸಹ್ಯವಾಗುವಂತೆ ಎಲ್ಲ ವರ್ಗಗಳೂ ತನ್ನಿಂದ ಸ್ವಲ್ಪವಾದರೂ ಪ್ರಯೋಜನ ಮನಗಾಣುವಂತೆ ಜಾಣ್ಮೆಯಿಂದ ಎಲ್ಲವನ್ನೂ ನಿರ್ವಹಿಸುವುದು ಆಳುವ ವರ್ಗದವರ ಜವಾಬ್ದಾರಿಯಾಗುತ್ತದೆ, ಹಣಕಾಸುಮಂತ್ರಿಯೆಂಬ ಷೇರುಪೇಟೆಯ ಪ್ರತಿನಿಧಿ ಹಳ್ಳಿಗಾಡಿನ ರೈತ ಸಮಾಜದ ಬಡತನಕ್ಕೆ ಒಮ್ಮೊಮ್ಮೆ ಮರುಗುವಂತೆ. ಯಾವಾಗ ಆಳುವ ವರ್ಗದ ನೀತಿಗಳು, ಮಿಕ್ಕ ಎಲ್ಲ ವರ್ಗಗಳ ಹಿತಾಸಕ್ತಿಗಳನ್ನು ತಿರಸ್ಕರಿಸುವ ಸರ್ವಾಧಿಕಾರದ ಸ್ವರೂಪ ಪಡೆದು, ತಾನು ಪ್ರತಿನಿಧಿಸುವ ವರ್ಗದವರ ಹಿತಕ್ಕಾಗಿ ಉಳಿದವರೆಲ್ಲರ ಮೇಲೂ ದಬ್ಬಾಳಿಕೆ ಮಾಡಲು ಹಿಂಜರಿಯುವುದಿಲ್ಲವೋ ಆಗ ಅದು ಸಹಿಸಲಾರದ ಹಿಂಸೆಯಾಗಿ, ದಬ್ಬಾಳಿಕೆಗೆ ಶೋಷಣೆಗೆ ಒಳಗಾದವರು ದಂಗೆ ಏಳುತ್ತಾರೆ, ಪ್ರತಿಹಿಂಸೆಗೆ ಇಳಿಯುತ್ತಾರೆ. ಅಂತಹ ಪರಿಸ್ಥಿತಿಯಲ್ಲಿ ಪ್ರಭುತ್ವ ತನ್ನ ಸಮರ್ಥನೆಯನ್ನು ಕಳೆದುಕೊಳ್ಳುತ್ತದೆ. ಇಂದಿನ ಪ್ರಜಾಪ್ರಭುತ್ವದಲ್ಲಿ ಚಂದ್ರಬಾಬು ನಾಯ್ಡುರಂಥವರು ಅಧಿಕಾರ ಕಳೆದುಕೊಂಡರೂ ಅವರನ್ನು ಸ್ಥಾನಪಲ್ಲಟ ಮಾಡಿದ ಗುಂಪು, ಬದಲಾವಣೆ ತರುವ ಭ್ರಾಂತಿಯನ್ನು ಜನರ ಮುಂದಿಡಬಹುದು, ಅದೂ ತಾತ್ಕಾಲಿಕವಾಗಿ. ಆದರೆ ಎಲ್ಲಿ ಸದ್ಯದ ವ್ಯವಸ್ಥೆಯ ಬದಲಾವಣೆಯೇ ಸಮಸ್ಯೆಗೆ ಪರಿಹಾರವೋ, ಅಲ್ಲಿ ಇಂಥ ಚುನಾವಣೆಗಳು ಶಾಶ್ವತ ಪರಿಹಾರವನ್ನು ಕೊಡದೆ, ಆಳುವ ವರ್ಗದ ವಾಸ್ತವ ಸ್ಥಾನಪಲ್ಲಟವಾಗದಿರುವುದನ್ನು ಗಮನಿಸಬೇಕಾಗುತ್ತದೆ. ಆಂಧ್ರದ ಇಂದಿನ ಕಾಂಗ್ರೆಸ್ ಸರ್ಕಾರ ಭೂಸುಧಾರಣೆ ಮಾಡೀತೆ? ಹಾಗೂ ಇಂಥ ಸ್ಥಾನಪಲ್ಲಟಗಳು, ಕೆಲವು ಸುಧಾರಣೆಗಳನ್ನು ವ್ಯವಸ್ಥೆಯೊಳಗೇ, ಅಂದರೆ ಹಾಲಿ ರಾಜ್ಯಾಂಗದ ಚೌಕಟ್ಟಿನಲ್ಲಿ ಅಳವಡಿಸಿ, ಸಮಸ್ಯೆ ಪರಿಹಾರವಾಗುವ ಭ್ರಮೆ ಹುಟ್ಟಿಸಿ, ಸದ್ಯದ ಕ್ರಾಂತಿಕಾರಿ ಪರಿಸ್ಥಿತಿಯನ್ನು ಮುಂದೂಡಲು ಶಕ್ಯವಾಗಬಹುದು. ಕೆಲವೊಮ್ಮೆ ಒಂದಿಷ್ಟು ಪರಿಹಾರ ದೊರೆಯಲೂಬಹುದು. ಕ್ರಾಂತಿಕಾರಿಗಳು ರೂಢಮೂಲ ಪರಿಹಾರಕ್ಕಾಗಿ ರಾಜ್ಯಾಂಗವನ್ನೇ, ಅಂದರೆ, ವ್ಯವಸ್ಥೆಯ ರಚನೆಯನ್ನೇ ಬದಲಾಯಿಸಬಯಸುತ್ತಾರೆ. ಭಾಜಪ ರಾಜ್ಯಾಂಗವನ್ನು ಪುನರ್‌ರಚಿಸುವ ಪ್ರಯತ್ನಪಟ್ಟದ್ದಕ್ಕೆ ಕಾರಣ ಅವರು ಕಾಂಗ್ರೆಸ್‌ಗಿಂತ ತಾವು ಭಿನ್ನರೆಂದು ಭಾವಿಸಿಕೊಂಡಿದ್ದು. ವಾಸ್ತವದಲ್ಲಿ ಅವರು ರಾಜ್ಯದ ಚುಕ್ಕಾಣಿ ಹಿಡಿಯಲು ಕೋಮುವಾದದ, ಹಿಂದುತ್ವದ ತಂತ್ರ ಹೂಡಿದರೇ ವಿನಃ ಆರ್ಥಿಕ ನೀತಿಯನ್ನೇನೂ ಬದಲಾಯಿಸಲಿಲ್ಲ. ಹಾಗಾಗಿ ಅವರಿಂದ ರಾಜ್ಯಾಂಗ ಬದಲಾಯಿಸಲು ಆಗಲಿಲ್ಲ.

ಹಾಗೆ ನೋಡಿದರೆ, ರಾಜ್ಯಾಂಗದ ಬದಲಾವಣೆ ಬಯಸುವವರೆಲ್ಲಾ ಅನಿವಾರ್ಯವಾಗಿ ಕಾನೂನಿನ ದೃಷ್ಟಿಯಲ್ಲಿ ಕಾನೂನುಬಾಹಿರರಾಗುತ್ತಾರೆ. ಈ ಪ್ರಜಾಪ್ರಭುತ್ವದ ಚೌಕಟ್ಟಿನಲ್ಲೇ ಉಳಿದುಕೊಂಡು, ರಾಜ್ಯಾಂಗದ ಒಂದೆರಡು ಪ್ರಣಾಳಿಕೆಗಳಿಗೆ ಆಗೊಮ್ಮೆ ಈಗೊಮ್ಮೆ ತಿದ್ದುಪಡಿ ತರುವುದನ್ನು ರಾಜ್ಯಾಂಗದ ಪುನರ್‌ರಚನೆ ಎಂದು ಹೇಳುವುದರಲ್ಲಿ ಅರ್ಥವಿಲ್ಲ. ರಾಜ್ಯಾಂಗದ ಪುನರ್‌ರಚನೆಯೆಂದರೆ ಮೂಲಭೂತ ಬದಲಾವಣೆಯ ಪ್ರಯತ್ನ ಎಂದು. ಸುಪ್ರೀಂ ಕೋರ್ಟು ನಮ್ಮ ರಾಜ್ಯಾಂಗದ ಮೂಲಭೂತ ಲಕ್ಷಣಗಳನ್ನು ಪಾರ್ಲಿಮೆಂಟ್ ಕೂಡ ಬದಲಾಯಿಸುವ ಹಾಗಿಲ್ಲ ಎಂದು ತೀರ್ಮಾನಿಸಿದಾಗ, ಅದೇ ರಾಜ್ಯಾಂಗದ ಸೃಷ್ಟಿಯಾದ ನ್ಯಾಯಾಲಯಕ್ಕೆ ರಾಜ್ಯಾಂಗದ ಹೊರನಿಂತು ಚಿಂತಿಸುವ ಸಾಮರ್ಥ್ಯವಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಮುಂದುವರಿದು, ಅಧಿಕಾರದಲ್ಲಿ ಪಾಲು ಪಡೆಯಲು ಕಾತುರರಾದ ಹೊಸ ವರ್ಗಗಳಿಗೆ ತಾವೇ ಚುನಾಯಿಸಿದ ಲೋಕಸಭೆ ಸದಸ್ಯರ ಮೂಲಕ ಅಗತ್ಯವಾದ ಬದಲಾವಣೆಗಳನ್ನು ತಂದುಕೊಳ್ಳಲು ಅವಕಾಶವಿಲ್ಲವೆಂದಾಗುತ್ತದೆ. ಹೊಸ ಆಶಯಗಳನ್ನು ಹೊಂದಿರುವ ವರ್ಗವು ಆಗ ತನ್ನ ಬಯಕೆಗೆ ಸ್ಪಂದಿಸದ ರಾಜ್ಯಾಂಗದ ವಿರುದ್ಧ ಜನಸಾಮಾನ್ಯರ ಮಟ್ಟದ ವ್ಯಾಪಕ ಸಂಘರ್ಷಕ್ಕೆ ಅನಿವಾರ್ಯವಾಗಿ ಇಳಿಯಬೇಕಾಗುತ್ತದೆ. ಕನಿಷ್ಠ ಸಾಮಾನ್ಯ ಕಾರ್ಯಕ್ರಮದಲ್ಲಿಲ್ಲದ ವಿದೇಶಿ ವಿನಿವೇಶ ನೀತಿಯನ್ನು ಆಳುವ ವರ್ಗ ಮಧ್ಯೆ ತೂರಿಸಲು ಪ್ರಯತ್ನಿಸಿದಾಗ, ಆ ಸರ್ಕಾರಕ್ಕೆ ಬೆಂಬಲ ಸೂಚಿಸುವ ಪ್ರಗತಿಪರ ಶಕ್ತಿಗಳು ವಿಧಿಯಿಲ್ಲದೆ ಜನತೆಯನ್ನೂ ಸಂಘಟಿಸಲು ಮುಂದಾಗಬೇಕಾಗುವ ಪರಿಸ್ಥಿತಿ, ಇಂದಿನ ಪಾರ್ಲಿಮೆಂಟಿನ ಮಿತಿಯನ್ನು ಸೂಚಿಸುತ್ತದೆ. ಇಲ್ಲಿಯ ಮತಗಟ್ಟೆಯ ವ್ಯವಸ್ಥೆ ಮತ್ತಷ್ಟು ಕುಲಗೆಡದೆ, ಪ್ರಗತಿಪರ ಶಕ್ತಿಗಳೂ ಚುನಾಯಿತರಾಗುವ ಸಾಧ್ಯತೆ ಇನ್ನೂ ಇರುವುದರಿಂದ ಈ ಪ್ರಜಾಪ್ರಭುತ್ವದ ಸಾಧ್ಯತೆಗಳು ಎದ್ದು ಕಾಣುತ್ತವೆ. ರಾಜ್ಯಾಂಗದ ಮೂಲಭೂತ ಸ್ವರೂಪವೆಂದಾಗ ನ್ಯಾಯಾಲಯ ಮುಖ್ಯವಾಗಿ ಗುರುತಿಸಿದ್ದು ವೈಯಕ್ತಿಕ ಆಸ್ತಿಯ ಹಕ್ಕನ್ನು. ಈ ಹಕ್ಕಿನ ಪಾರಮ್ಯವನ್ನು ನ್ಯಾಯಾಲಯ ರಕ್ಷಿಸುತ್ತದೆ. ಸ್ಥಿತಿವಂತರ, ಅಂದರೆ, ಪ್ರಭುತ್ವದ ಚುಕ್ಕಾಣಿ ಹಿಡಿದ ಆಳುವ ವರ್ಗದ, ಆಸ್ತಿಯ ಹಕ್ಕು ಈ ವ್ಯವಸ್ಥೆಯ ಸಾಮರ್ಥ್ಯದ ನಿರ್ಣಾಯಕ ಸ್ವರೂಪವಾಗುತ್ತದೆ. ಇದೇನೂ ಹೊಸ ಸಂಶೋಧನೆಯಲ್ಲ. ೧೯೩೦ರಲ್ಲೂ ನಮ್ಮ ಪ್ರಜಾಪ್ರಭುತ್ವದ ಮೊದಲ ದಿನಗಳಲ್ಲಿ ಕರ/ಸುಂಕ ಕೊಡುವ/ನೀಡುವ ಆಸ್ತಿವಂತರಿಗೆ ಮಾತ್ರ ಮತದಾನದ ಹಕ್ಕು ಇದ್ದದ್ದು ಎಂಬುದನ್ನು ಮರೆಯಲಾಗದು. ಅವರ

ಸಂಖ್ಯೆ ಆಗ ಜನತೆಯ ಶೇ. ೧೨ರಷ್ಟು ಮಾತ್ರ ಇದ್ದಿದ್ದು. ಎಲ್ಲ ವಯಸ್ಕರಿಗೂ ಯಾವ ಭೇದಭಾವವೂ ಇಲ್ಲದ, ಮತ ಚಲಾಯಿಸುವ ಕ್ರಾಂತಿಕಾರಿ ಹಕ್ಕು ದೊರೆತಿದ್ದಕ್ಕೆ ನಮ್ಮ ಪೀಳಿಗೆ ಜವಹರಲಾಲ ನೆಹರೂ ಅವರಿಗೆ ಕೃತಜ್ಞರಾಗಿರಬೇಕಾಗಿದೆ. ಆಸ್ತಿಯ ಹಕ್ಕನ್ನು ಕಿತ್ತುಕೊಂಡರೆ, ಪ್ರಭುತ್ವದ ಮೇಲಿನ ಆ ವರ್ಗದ ಹಿಡಿತ ಸಡಿಲವಾಗುತ್ತದೆ. ಉಳ್ಳವರ ಈ ಹಕ್ಕನ್ನು ಮಾರ್ಪಡಿಸದೆ, ಪರಿಷ್ಕರಿಸದೆ, ಇಲ್ಲದವರ ಮೂಲಭೂತ ಸಮಸ್ಯೆಗಳಿಗೆ ಪರಿಹಾರವಿಲ್ಲದಿದ್ದಾಗ ಸಂಘರ್ಷದ ಸಂದರ್ಭ ಉಂಟಾಗುತ್ತದೆ. ಸಂಘರ್ಷವನ್ನು ಸದೆ ಬಡಿಯಲು ಆಳುವವರ್ಗ ತನ್ನ ನಿಯಂತ್ರಣದಲ್ಲಿರುವ ಪ್ರಭುತ್ವದ ಕಾನೂನುಬದ್ಧವೆಂಬ ಸಂಘಟಿತ ಹಿಂಸಾಶಕ್ತಿಯನ್ನು ಪ್ರಯೋಗಿಸುತ್ತದೆ. ಕೆಲವೊಮ್ಮೆ ಮುಂಚೂಣಿಯಲ್ಲಿರುವ ಜನನಾಯಕರ ಪರವಾಗಿ ಹಾಲಿ ಪ್ರಭುತ್ವದ ಪೊಲೀಸ್-ಸೇವಾವ್ಯವಸ್ಥೆ ತಮ್ಮ ನಿಷ್ಠೆ ಬದಲಾಯಿಸಬಹುದು. ಸಾಮಾನ್ಯವಾಗಿ, ಈ ದಳಗಳಲ್ಲಿ ಕೆಲಸ ಮಾಡುವವರು ಶೋಷಿತವರ್ಗದವರಾಗಿದ್ದು, ಅಂದಿನ ರಾಜಕೀಯ ಚರ್ಚೆ ಅವರ ಮೇಲೆ ಪರಿಣಾಮವನ್ನು ಬೀರಲೂಬಹುದು, ೧೯೪೬ರಲ್ಲಿ ನೌಕಾದಳದ ಯೋಧರು ಸ್ವಾತಂತ್ರ್ಯ ಹೋರಾಟದ ಪರ ನಿಂತಂತೆ, ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹಿಂದೂ-ಮುಸ್ಲಿಂ ಸೇನಾ ಸದಸ್ಯರು ದಂಗೆ ಎದ್ದಂತೆ. ಭಾಜಪ ತನ್ನ ಪರಿವಾರದ ಸದಸ್ಯರನ್ನು ರಕ್ಷಣಾವ್ಯವಸ್ಥೆಯ ವಿವಿಧ ಶಾಖೆಗಳೊಳಗೆ, ಸರ್ಕಾರದ ಬಹುಮುಖ್ಯ ಅಂಗಗಳಾದ ಗೃಹ, ಶಿಕ್ಷಣ, ರಕ್ಷಣೆ, ಪ್ರಚಾರ ಇಲಾಖೆಗಳಲ್ಲಿ ನುಸಿದುಕೊಂಡುದಕ್ಕೂ ಇದೇ ಅರ್ಥ.

ಖಾಸಗಿ ಆಸ್ತಿಯ ಹಕ್ಕು ಎಂಬುದು ಇಂದಿನ ಲಾಭೈಕದೃಷ್ಟಿಯ ಬಂಡವಾಳ ಅರ್ಥವ್ಯವಸ್ಥೆಯ ಬಹುಮುಖ್ಯ ಅಂಗ. ದಾವೂದ್ ಇಬ್ರಾಹಿಂನ ಆಸ್ತಿಯನ್ನು ಮಟ್ಟುಗೋಲು ಹಾಕಿಕೊಳ್ಳಲೂ ಅದೆಷ್ಟು ಕಷ್ಟವಾಯಿತೆಂದು ಎಲ್ಲರಿಗೂ ತಿಳಿದಿದೆ. ಆಸ್ತಿ ಎಂದರೆ ಜೀವನಾವಶ್ಯಕವಾದ ಒಂದಿಷ್ಟು ವಸ್ತು ವಗೈರೆ, ವಾಸ ಮಾಡಲು ಮನೆ, ಸ್ವಂತ ಉಪಕರಣಗಳು ಮುಂತಾದವುಗಳ ಒಡೆತನದ ವಿಷಯವಲ್ಲ. ಅದು ರಾಜಕೀಯ ಶಕ್ತಿಯಾಗಬಲ್ಲಷ್ಟು, ಅಂದರೆ, ಆಸ್ತಿ ಇಲ್ಲದವನ ಮೇಲೆ ಆಧಿಪತ್ಯ ಮಾಡಲು ಶಕ್ತಿ ನೀಡುವಷ್ಟು ಪ್ರಮಾಣದ ಸ್ವಂತ ಆಸ್ತಿಯ ಶೇಖರಣೆಯ ವಿಷಯ. ರಾಜಕೀಯ ಮುತ್ಸದ್ದಿಗಳು ಅಲ್ಪಕಾಲದಲ್ಲೇ ಗಾಢವಾದ ಆಸ್ತಿ ಶೇಖರಿಸಿದ್ದು ಹೇಗೆ ಎಂದು ಯಾರಾದರೂ ಕಾನೂನಿನಲ್ಲಿ ಇಲ್ಲಿಯವರೆಗೂ ಪ್ರಶ್ನಿಸುತ್ತಿಲ್ಲ ಎಂಬುದನ್ನು ನೆನಪಿಸಿಕೊಳ್ಳಿ. ಅಂದರೆ, ಆಳುವ ವರ್ಗವು ಅರ್ಥವ್ಯವಸ್ಥೆಯ ಮೇಲಿನ ತನ್ನ ಸಂಪೂರ್ಣ ಹತೋಟಿಯನ್ನು ಎಂದಿಗೂ ಸಡಿಲಗೊಳಿಸುವುದಿಲ್ಲ ಎಂಬುದು ವಾಸ್ತವ. ಇಲ್ಲದವರಿಗೆ ಜೀವನ ನಿರ್ವಹಿಸುವಷ್ಟು ಸಾಮಾಜಿಕ ಆಸ್ತಿಯಲ್ಲಿ ಪಾಲು, ಅವಕಾಶ ದೊರಕದೆ ಹೋದಾಗ ಪರಿಸ್ಥಿತಿಯ ವಿರುದ್ಧ ಸಿಡಿದೇಳುವ ಪ್ರವೃತ್ತಿ ಸಹಜವಾಗಿಯೇ ಸೃಷ್ಟಿಯಾಗುತ್ತದೆ. ಆ ಕ್ರಿಯೆ ಹಿಂಸೆಯ ರೂಪ ತಾಳುವುದೂ ಅನಿವಾರ್ಯವಾಗುತ್ತದೆ.

ಈ ಚರ್ಚೆಯಿಂದ ಹೊರಹೊಮ್ಮುವ ಒಂದು ಮುಖ್ಯ ವಿಷಯವೆಂದರೆ, ಪ್ರಭುತ್ವದ ಸಂಘಟಿತ, ಕಾನೂನುಬದ್ಧವೆನಿಸುವ, ಆಳುವ ವರ್ಗದ ನಿಯಂತ್ರಣ ದಲ್ಲಿರುವ ಹಿಂಸ್ರಕ ಶಕ್ತಿ ಒಂದು ಕಡೆ; ಅದರ ಪ್ರಯೋಗ ಅಸಹ್ಯವೆನಿಸುವಷ್ಟು ವಿಪರೀತವಾದಾಗ ಅದರ ವಿರುದ್ಧ ಸಿಡಿದೇಳುವ ಅಧಿಕಾರ ವಂಚಿತರ ಪ್ರತಿಹಿಂಸೆ ಇನ್ನೊಂದು ಕಡೆ. ಅನೇಕ ವೇಳೆ ಇಂಥ ಪ್ರತಿಕ್ರಿಯೆಗಳು ವೈಯಕ್ತಿಕವೂ ಅಸಂಘಟಿತವೂ ಆಗಿರುತ್ತವೆ. ಎಲ್ಲೋ ಒಮ್ಮೊಮ್ಮೆ ಸಂಘಟಿತವಾಗಿರಬಹುದು ಅಷ್ಟೆ. ಈ ಪ್ರತಿಹಿಂಸೆಯ ಅನಿವಾರ್ಯತೆಯನ್ನು ಕೆಲವರು ಒಪ್ಪುತ್ತಾರೆ. ಆದರೆ, ಪ್ರಸಕ್ತ ಲಭ್ಯವಿರುವ ಬೇರೆಲ್ಲಾ ಪ್ರಯತ್ನಗಳನ್ನು ಕೈಗೊಂಡು ವಿಫಲವಾದ ನಂತರವೇ, ಎಂದರೆ ಅನಿವಾರ್ಯ ವೆನಿಸಿದಾಗ ಮಾತ್ರ, ನಡೆಸಲಾಗುವುದು ಎಂದು ಟಿಪ್ಪಣಿ ನೀಡುತ್ತಾರೆ. ಇನ್ನು ಕೆಲವರು ಅದು ಹಾಗಲ್ಲ, ಅದರ ಪ್ರಯೋಗಕ್ಕೆ ಈಗಲೇ ಅಂಥ ಪರಿಸ್ಥಿತಿ ಉಂಟಾಗಿದೆ ಎಂದು ವಾದಿಸುತ್ತಾರೆ. ಅಂಥವರು ವ್ಯವಸ್ಥೆಯಲ್ಲಿನ ಶೋಷಕವರ್ಗದ ಕಾನೂನುಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಇಂಥ ಅಭಿಪ್ರಾಯವುಳ್ಳವರು ಮಾತ್ರ ಹಿಂಸೆಗೆ ಮುಂದಾದರೆ ಆಳುವ ವರ್ಗದ ದಮನಕ್ಕೆ ಗುರಿಯಾಗಿ ನಾಶವಾಗುತ್ತಾರೆ. ಪರ್ಯಾಯವಾಗಿ ತಮ್ಮ ಸಮರ್ಥನೆಯನ್ನು ವಿಸ್ತರಿಸಿಕೊಂಡು, ನಿರ್ಣಾಯಕ ಪರಿಸ್ಥಿತಿಗಾಗಿ ಕಾದು ಕಾರ್ಯತತ್ಪರರಾಗಬೇಕಾದುದು ಸರಿಯಾದ ತಂತ್ರವಲ್ಲವೇ ? ಪರಿಸ್ಥಿತಿ ಅಪಕ್ವ ವಾಗಿರುವಾಗ ಹಿಂಸಾತ್ಮಕ ಹೋರಾಟದ ಹಾದಿ ಹಿಡಿದು ತಮ್ಮೆಲ್ಲ ಪ್ರಯತ್ನಗಳನ್ನೂ ವ್ಯರ್ಥವಾಗಿಸುತ್ತಾರೆ. ಆಳುವ ವರ್ಗಕ್ಕೆ ಸಮಯ ಕೊಟ್ಟರೆ, ಕೆಲವು ಸುಧಾರಣಾ ಮಾರ್ಗಗಳನ್ನು ಅನುಸರಿಸಿ, ಭ್ರಮೆಗಳನ್ನು ಹುಟ್ಟಿಸಿ, ಕ್ರಾಂತಿಗೆ ಅಡ್ಡಬರುತ್ತಾರಲ್ಲ? ಹೀಗಾಗಿ ಕ್ಷಿಪ್ರಕ್ರಾಂತಿಗಾಗಿ ಹವಣಿಸುವವರು ಹೋರಾಡಲು ತವಕಿಸುತ್ತಿದ್ದು, ತಮ್ಮ ಪ್ರಭಾವವನ್ನು ವ್ಯಾಪಕವಾಗಿ ಬೆಳೆಸಲು ವಿಳಂಬವಾದಂತೆಲ್ಲಾ ಹತಾಶೆಗೆ ಒಳಗಾಗುವುದು ಸಹಜ. ಮೊದಲು ಚರ್ಚೆ ಪ್ರಚಾರಗಳ ಮೂಲಕ ತಮ್ಮ ಬೆಂಬಲಿಗರ ಸಂಖ್ಯೆಯನ್ನು ವಿಸ್ತರಿಸುತ್ತಾ ಹೋಗುವುದು ವ್ಯರ್ಥ ಕಾಲಹರಣವೆಂಬ ತೀರ್ಮಾನಕ್ಕೆ ಬಂದು ಹಿಂಸ್ರಾಪ್ರಕರಣಗಳನ್ನು ನಡೆಸಿದರೆ ಹೆಚ್ಚಿನ ಜನಸಮೂಹವನ್ನು ಒಡನೆಯೇ ತಮ್ಮ ಕಡೆ ಸೆಳೆದುಕೊಳ್ಳಬಹುದು ಎಂದು ಭಾವಿಸುತ್ತಾರೆ. ಹೀಗಾಗಿ ಅವರು ಕಾಶ್ಮೀರ ಅಥವಾ ಈಶಾನ್ಯದಲ್ಲಿ ನಡೆಯುತ್ತಿರುವ ಸಂಘರ್ಷಗಳೊಡನೆ, ಎಲ್‌ಟಿಟಿಇ ಕಾರ್ಯಾಚರಣೆಗಳೊಡನೆ ನಕ್ಸಲೀಯ ಹೋರಾಟವನ್ನು ಸಮೀಕರಿಸುವ ಪ್ರಮಾದವನ್ನು ಮಾಡುತ್ತಾರೆ. ಪೊಲೀಸ್ ಪೇದೆಯನ್ನೋ, ಕಾಲೇಜಿನ ಉಪಾಧ್ಯಾಯರನ್ನೋ ಇಲ್ಲವೇ ಒಬ್ಬ ಮಂತ್ರಿಯನ್ನೋ ಅವರು ಕೊಲ್ಲಲೂಬಹುದು. ಇದರಿಂದ ಇವರ ಉದ್ದೇಶಕ್ಕೆ ಧಕ್ಕೆ ಉಂಟುಮಾಡುವ, ಅರಾಜಕತಾವಾದಿಗಳೆಂಬ ಭಯೋತ್ಪಾದಕರೆಂಬ ಅಪಪ್ರಚಾರಕ್ಕೆ ಗುರಿಯಾಗುತ್ತಾರೆ. ಅವರು ಕ್ರಾಂತಿಗೆ, ಕ್ರಾಂತಿಯ ಸಾಧ್ಯತೆಗಳಿಗೆ ಅಪಖ್ಯಾತಿ ತಂದುಬಿಡುತ್ತಾರೆ. ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ನಡೆದ ವಿದೇಶಿ ಶತ್ರುವಿನ ವಿರುದ್ಧದ ದಂಗೆ, ಪಿತೂರಿ, ಭೂಗತ ಕೆಲಸಗಳು ಈ ಮಾದರಿಗೆ ಹೋಲಿಕೆಯಲ್ಲ ಎಂಬುದು ಸ್ಪಷ್ಟವಾಗಬೇಕು. ಹಿಂಸ್ರಕ ಕ್ರಾಂತಿಯೂ ಸಂಘಟಿತವಾಗಿರಬೇಕಾಗುತ್ತದೆ. ಒಟ್ಟಾರೆ, ಅಂಥ ಹೋರಾಟವು ಸಮಾಜದ ಬಹುಪಾಲು ಜನರ ಪ್ರಜ್ಞಾಪೂರ್ವಕ ಹೋರಾಟವಾಗಿರಬೇಕಾದುದು ಅಗತ್ಯ. ಅದು ಕೆಲವೇ ಜನರ ದುಸ್ಸಾಹಸವಾಗಬಾರದು. ಕೆಲವೊಮ್ಮೆ ಅವರ ಕ್ರಿಯೆಗಳು ರೋಚಕ ಅನುಭವ ನೀಡಬಹುದು. ಸಾಮಾಜಿಕ ಕಾರ್ಯಕರ್ತರಿಗೆ ಸ್ಫೂರ್ತಿದಾಯಕವೂ ಆಗಬಹುದು. ಸುಧಾರಣಾ ಕಾರ್ಯಕ್ರಮಗಳನ್ನು ಕೈಗೊಳ್ಳಲು ಒತ್ತಾಯವನ್ನು ಉಂಟುಮಾಡಬಹುದು. ಆದರೆ ಅವು ಪ್ರಭುತ್ವದ ವರ್ಗ ಹಸ್ತಾಂತರವೆನಿಸುವ ಮೂಲಭೂತ ಕ್ರಾಂತಿಯ ರೂಪ ಪಡೆಯದೇ ಹೋಗುವುದು ಹೆಚ್ಚು. ಅಸಂಘಟಿತ, ಅನಿರ್ದಿಷ್ಟ ಹಿಂಸೆಯಿಂದಾಗಿ ಕ್ರಾಂತಿಯುತ ಸಂಘರ್ಷಗಳು ತಮ್ಮ ಸಾಮೂಹಿಕ ನೆಲೆಯನ್ನು ಕಳೆದುಕೊಂಡುಬಿಡುವುದು ಆಶ್ಚರ್ಯವೇನಲ್ಲ. ಭಗತ್ ಸಿಂಗ್‌ರ ವಿಚಾರ ನಮಗೆ ಇಲ್ಲಿ ಹೆಚ್ಚು ಅರ್ಥವತ್ತಾಗಿ ಕಾಣಿಸುತ್ತದೆ.

ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆ ಅನುಭವದ ಹಾದಿಯಲ್ಲಿ ಇನ್ನೂ ಹೆಜ್ಜೆ ಇಡಬೇಕಾಗಿದೆ. ಅದರ ಎಲ್ಲಾ ಸಾಧ್ಯತೆಗಳನ್ನು ಒರೆಗೆ ಹಚ್ಚಿ, ಅದರಿಂದಾಗಲಿ, ಸಂವಿಧಾನದಿಂದಾಗಲಿ ಇನ್ನು ಯಾವ ಪ್ರಯೋಜನವೂ ಆಗಲಾರದು ಎಂಬ ಹಂತ ತಲುಪುವವರೆಗೆ ಮುಂದಿನ ಹಂತದ ಬದಲಾವಣೆಗೆ ಸಮಯ ಸನ್ನಿಹಿತವಾಗುವುದಿಲ್ಲ. ಸ್ವಾತಂತ್ರ್ಯದ ಮುಂಜಾವಿನಲ್ಲೇ ಮುಂದಿನ ಕ್ರಾಂತಿಗೆ ಆತುರಪಟ್ಟು ಈ ದೇಶದ ಪ್ರಗತಿಪರ ಶಕ್ತಿಗಳು, ಕೇವಲ ತಮ್ಮ ನಡುವಿನ ಸೈದ್ಧಾಂತಿಕ ಗೊಂದಲ, ಭಿನ್ನಾಭಿಪ್ರಾಯಗಳ ಆಧಾರದ ಮೇಲೆ ಹಲವು ಗುಂಪುಗಳಾಗಿ ಒಡೆದು ಛಿದ್ರವಾಗಿ ಹೋಗಿದ್ದು ನಮ್ಮ ಪ್ರಜಾಪ್ರಭುತ್ವಕ್ಕೆ ಸಂಭವಿಸಿದ ಒಂದು ದುರಂತ. ತತ್ಕಾರಣದಿಂದ ಈ ಸಂವಿಧಾನದ ಚೌಕಟ್ಟಿನೊಳಗೆ ಆಗಬಹುದಾಗಿದ್ದ ಪ್ರಗತಿಪರ ಬದಲಾವಣೆಗಳ ಮೇಲೆ ಈ ಶಕ್ತಿಗಳು ಪ್ರಭಾವ ಬೀರಲು ವಿಫಲವಾದುದು ಮತ್ತೊಂದು ದುರಂತ. ಕಾರಣ ಅವರೆಲ್ಲರೂ ಒಟ್ಟಾಗಿ ಹೋರಾಟಗಳಲ್ಲಿ ಭಾಗವಹಿಸುತ್ತಾ, ಅನುಭವದ ಆಧಾರದ ಮೇಲೆ ಸಿದ್ಧಾಂತವನ್ನು ಪರಿಷ್ಕರಿಸಿಕೊಳ್ಳುತ್ತಾ, ತಮ್ಮ ಪ್ರಭಾವವನ್ನು



'ಹೊಸತು' ಮತ್ತು ಸಮಕಾಲೀನ ಅಧ್ಯಯನ ವೇದಿಕೆ ಬೆಂಗಳೂರಿನಲ್ಲಿ ಸಾಮಾನ್ಯ ಕನಿಷ್ಠ ಕಾರ್ಯಕ್ರಮ ಕುರಿತು ವಿಚಾರ ಸಂಕಿರಣ ಏರ್ಪಡಿಸಿದ್ದವು (೧೯-೬-೦೪). ಡಾ॥ ಟಿ. ವೆಂಕಟೇಶ ಮೂರ್ತಿಯವರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ ಪ್ರೊ॥ ಜಿ. ತಿಮ್ಮಯ್ಯ, ಡಾ॥ ವಿನೋದ್ ವ್ಯಾಸುಲು, ಡಾ॥ ಹೇಮಲತಾ ರಾವ್ ಮತ್ತು ಪ್ರೊ॥ ಜೀವನ್ ಕುಮಾರ್ ಹಾಗೂ ಹಲವು ಗಣ್ಯರು ಭಾಗವಹಿಸಿದ್ದರು.

ಬೆಳೆಸಿಕೊಳ್ಳುವ ಹಾದಿ ಹಿಡಿಯದೆ ಚದುರಿಹೋದುದರ ಪರಿಣಾಮವಾಗಿ ಆಗಿರುವ ಅನಾಹುತಗಳ ಬಗ್ಗೆ ಅರಿವು ಮೂಡಿಬರಬೇಕಾಗಿದೆ.

ಹಿಂಸೆ ಹಿಂಸೆಯನ್ನು ಹುಟ್ಟಿಹಾಕುತ್ತದೆ ಎನ್ನುವುದು ಅನುಭವದ ವಿಷಯ. ಅದಕ್ಕೆ ಕಾರಣ ಹಿಂಸೆ ಮತ್ತು ಪ್ರತಿಹಿಂಸೆಗಳ ನಡುವಿನ ಪಾರಿಮಾಣಿಕ ಅಂತರ. ಪ್ರತಿಹಿಂಸೆ ಸಾಕಷ್ಟು ಸಾಮರ್ಥ್ಯ ಬೆಳೆಸಿಕೊಳ್ಳುವವರೆಗೆ ಅಹಿಂಸೆ ತಂತ್ರವಾಗಿಯಾದರೂ ಅಗತ್ಯವಾಗುತ್ತದೆ. ಸಂವಿಧಾನದೊಳಗೇ ಸುಧಾರಕ ಪರಿಹಾರ ಸಾಧ್ಯತೆಗೆ ಅದು ಮಾರ್ಗವಾಗುತ್ತದೆ. ಸಂವಿಧಾನಬಾಹಿರ ಹೋರಾಟಕ್ಕೆ ಈ ಸಮಾಜದ ಅಹಿಂಸೆಯೆಂಬ ನೀತಿ ಅನ್ವಯವಾಗುವುದಿಲ್ಲ, ಆದರೆ ವೈಯಕ್ತಿಕ ನೆಲೆಯಲ್ಲಿ ಅಹಿಂಸೆ ಮಾನವ ಸಮಾಜದ ನಿರಂತರ ಬಯಕೆಯಾದ ಶಾಂತಿಯುತ ಸಮೃದ್ಧ ಸಮಾಜದ ಬುನಾದಿ. ಪ್ರಭುತ್ವದ ಸಂಘಟಿತ ಹಿಂಸೆಯನ್ನು ವೈಯಕ್ತಿಕ ನೆಲೆಯಲ್ಲಿ ಪ್ರತಿಭಟಿಸುವಾಗ ಅಹಿಂಸೆ ಉತ್ತಮ ಅಸ್ತ್ರವೆಂಬುದು ಗಾಂಧೀಜಿಯವರು ಹಮ್ಮಿಕೊಂಡ ಹೋರಾಟಗಳಿಂದ ತಿಳಿಯಬಹುದು. ಮಾನವನೂ ಒಬ್ಬ ಪ್ರಾಣಿ ಎಂದು ಹೇಳಿದರೂ ಮಾನವಸಮಾಜ ತನ್ನ ಮೃಗತ್ವವನ್ನು ಹಸನಾಗಿಸುವ ಆದರ್ಶ ಹೊತ್ತಿರುವಾಗ ಹಿಂಸೆಯ ವೈಭವೀಕರಣ ಸಲ್ಲದು. ಅದು ಕೆಲವೊಮ್ಮೆ ಅನಿವಾರ್ಯವೆಂಬ ತರ್ಕವೇನೋ ಸರಿಯೆ. ಆದರೆ ಅದೇ ಬಯಕೆಯಾಗಲಾರದು. ಕ್ರಾಂತಿಶಾಸ್ತ್ರದ ಆದರ್ಶವಾದ ''ವ್ಹಿದರಿಂಗ್ ಅವೇ ಆಫ್ ದಿ ಸ್ಟೇಟ್'' ಅಂದರೆ, ವರ್ಗ ಪ್ರಭುತ್ವದ ಅಂತಿಮ ನಾಶದ ಉದ್ದೇಶವೇ ಅಹಿಂಸಾಸಮಾಜ ಸ್ಥಾಪನೆ. ಅದು ''ವ್ಹಿದರಿಂಗ್ ಅವೇ ಆಫ್ ವಯಲನ್ಸ್'' ಎನ್ನಬಹುದು. ಸಮಾನತೆಯ ಸಮಾಜದಲ್ಲಿ ಶೋಷಣೆಯ ಅಗತ್ಯವಿಲ್ಲದೆ, ಹಿಂಸೆಗೆ ಸ್ಥಾನವೇ ಇರುವುದಿಲ್ಲ. ಅರಾಜಕತಾವಾದವೂ ಇದನ್ನೇ ಹೇಳುವಂತೆ ತೋರಿದರೂ, ಅದು ಸಮಾಜಾತೀತವಾದ ವ್ಯಕ್ತಿತ್ವದ ಬಯಕೆಯಾಗಿದ್ದು, ಭ್ರಾಮಕವೆನಿಸುತ್ತದೆ.

ಜಾತಿವ್ಯವಸ್ಥೆಯ ಸಂಕೀರ್ಣತೆ ಮತ್ತು ಅದು ವರ್ಗಪ್ರಜ್ಞೆಯ ಬೆಳವಣಿಗೆಗೆ ಅಡಚಣೆಯಾಗಿರುವುದು ಭಾರತದ ವಿಶಿಷ್ಟ ಪರಿಸ್ಥಿತಿ. ಶೋಷಣೆಯ ಹಾಗೂ ಹಿಂಸೆಯ ವರ್ಗಸ್ವರೂಪವನ್ನು ಗ್ರಹಿಸಲು ಜನಸಮೂಹಕ್ಕೆ ಸಾಧ್ಯವಾಗುವವರೆಗೆ ಮುಂದಿನ ಹೆಜ್ಜೆ ಇಡಲಾಗದು. ಮೂಲತಃ ಪ್ರತಿಗಾಮಿಯಾದ ಮತಧರ್ಮ ಮಾರ್ಗದಲ್ಲಿ, ಜಾತಿವಾದದಲ್ಲಿ ಸಮಾಜ ಸಂಘಟನೆಗೆ ಇನ್ನೂ ಸಾಮರ್ಥ್ಯವಿರುವಾಗ ವರ್ಗಪ್ರಜ್ಞೆಯ ವಿಕಾಸವು ಎಷ್ಟು ದುಸ್ತರವಾದ ಹಾದಿ ಎಂಬುದು ಹೆಚ್ಚು ಸ್ಪಷ್ಟವಾಗುತ್ತಿದೆ. ಜಾತಿ ಮತ ಮೀರಿದ ವರ್ಗಪ್ರಜ್ಞೆಯ ಬೆಳವಣಿಗೆಯನ್ನು ಉಂಟುಮಾಡುವುದೇ ನಮ್ಮ ಇಂದಿನ ಆದ್ಯ ಕರ್ತವ್ಯ. ಸದ್ಯದ ಸಂವಿಧಾನದ ಚೌಕಟ್ಟಿನಲ್ಲಿ ಪಾರ್ಲಿಮೆಂಟಿನ ಒಳಗೂ ಹೊರಗೂ ಸೃಜನಾತ್ಮಕವಾಗಿ ಸ್ಪಂದಿಸಿ ಈ ಕರ್ತವ್ಯವನ್ನು ನೆರವೇರಿಸಬೇಕಾಗಿದೆ. ಪಾರ್ಲಿಮೆಂಟ್ ಪದ್ಧತಿಯ ಭ್ರಾಮಕತೆಯ ವಿಷಯವನ್ನು ಸದ್ಯಕ್ಕೆ ಅಧ್ಯಯನದ ಮಟ್ಟಕ್ಕೆ ಸೀಮಿತಗೊಳಿಸಿಕೊಳ್ಳುವುದು ಸೂಕ್ತ. ವಾಸ್ತವದಲ್ಲಿ, ಈ ಸಂಸ್ಥೆಯ ಇತಿ-ಮಿತಿಗಳನ್ನು ಮೀರುವ ಕೆಲಸ ಇನ್ನೂ ಮುಗಿದಿಲ್ಲ. ಹಾಲಿ ಪ್ರಜಾಪ್ರಭುತ್ವದ ಸವಾಲುಗಳನ್ನು ಎದುರಿಸುವ ಕೆಲಸ ಇನ್ನೂ ಆಗಬೇಕಾಗಿದೆ.

ಈ ನಾಡಿನಲ್ಲಿ ಮುಂದೊಮ್ಮೆ ಶಾಸಕಾಂಗದೊಳಹೊಕ್ಕು ಬಹುಮತ ಪಡೆದ ದಲಿತ-ಕಾರ್ಮಿಕ ಶೋಷಿತವರ್ಗಗಳು ಸಂವಿಧಾನವನ್ನು ಪುನರ್‌ರಚಿಸಲು ಮುನ್ನುಗ್ಗುವಾಗ ಒಂದು ಸಂದರ್ಭ ಸೃಷ್ಟಿಯಾಗುತ್ತದೆ. ಹಿಂದೊಮ್ಮೆ ಕೇರಳದಲ್ಲಿ ಕಮ್ಯುನಿಸ್ಟರ ಪಕ್ಷ ಚುನಾಯಿತವಾದಾಗ, ''ಪಕ್ಷವು ರಾಜ್ಯಾಂಗದ ಒಳಹೊಕ್ಕು ಅದನ್ನು ಮುರಿಯುತ್ತದೆ'' ಎಂದದ್ದುಂಟು. ಹಾಗೆಯೇ ಅದರ ಶತ್ರುಗಳು, ''ಅವರಿಗೆ ಅಧಿಕಾರ ನಡೆಸಲು ಅವಕಾಶವೇ ಕೊಡುವುದಿಲ್ಲ'' ಎಂದದ್ದೂ ಉಂಟು. ವಾಸ್ತವದಲ್ಲಿ ಇಬ್ಬರೂ ತಮ್ಮ ನಿಲುವುಗಳನ್ನು ಬದಲಾಯಿಸಿಕೊಳ್ಳಬೇಕಾಯಿತು, ಪರಿಷ್ಕರಿಸಿಕೊಳ್ಳಬೇಕಾಯಿತು. ಆದರೆ ಇಂದು ಮತ್ತೊಮ್ಮೆ ಇಂದಿನ ಆಳುವ ವರ್ಗ, ಶೋಷಿತರು ರಾಷ್ಟ್ರಮಟ್ಟದಲ್ಲಿ ಅಧಿಕಾರಕ್ಕೆ ಬರುವ ಪರಿಸ್ಥಿತಿ ಬಂದಾಗ, ಅದನ್ನು ಪ್ರಜಾಪ್ರಭುತ್ವಾತ್ಮಕವಾದ ಬದಲಾವಣೆಯೆಂದು ಸ್ವೀಕರಿಸುತ್ತಾರೆಯೇ ಇಲ್ಲವೇ ಎಂಬುದನ್ನು ಹೇಳಲಾಗದು. ಹಾಗಿಲ್ಲದೆ, ತಾವು ಪಳಗಿಸಿರುವ ಪ್ರಭುತ್ವದ ಎಲ್ಲ ಹಿಂಸ್ರಕಶಕ್ತಿಗಳನ್ನೂ ಉಪಯೋಗಿಸಿ ಅವರನ್ನು ಅಧಿಕಾರದಿಂದ ಕಿತ್ತೊಗೆಯಲು ಪ್ರಯತ್ನಿಸಬಹುದು. ಇಂದು ಅಂಥ ಸಂದರ್ಭದಲ್ಲಿ ಅವರಿಗೆ ಅಂತರರಾಷ್ಟ್ರೀಯ ಮಟ್ಟದ ಸಹಕಾರವೂ ಒದಗಿಬರುವುದು ಸಾಧ್ಯವಿದೆ. ಆಗ ಕಾನೂನು ಪಾಲನೆಯ ಭ್ರಮೆ ಬಿಟ್ಟು ಬೀದಿಗಿಳಿಯಬೇಕಾಗುತ್ತದೆ. ಅಂಥ ಸಂದರ್ಭಗಳಲ್ಲಿನ ಸಂಘರ್ಷಗಳಲ್ಲಿ ಹಿಂಸೆಯ ಬಳಕೆಯ ಮೌಲ್ಯಮಾಪನಕ್ಕೆ ಬೆಲೆ ಇರುವುದಿಲ್ಲ. ಅದು ಒಂದು ಕರ್ತವ್ಯವೇ ಆಗಿಬಿಡುತ್ತದೆ. ಶೋಷಕರೂ ಅಂತರರಾಷ್ಟ್ರೀಯವಾಗಿ ಇಂದು ಸಂಘಟಿತರಾಗುತ್ತಿದ್ದಾರೆ. ಅಂತಹ ಸಾಧ್ಯತೆಗಳನ್ನು ತಡೆಗಟ್ಟಲು ಎಲ್ಲ ಶೋಷಿತರನ್ನು ಅಣಿಗೊಳಿಸಿ ಅಂತರರಾಷ್ಟ್ರೀಯವಾಗಿ ಸಂಘಟಿಸುವುದು ಇಂದಿನ ಆದ್ಯ ಕರ್ತವ್ಯವಾಗಿದೆ. ಇದಕ್ಕೆ ಹಲವಾರು ದಶಕಗಳೇ ಬೇಕಾಗುತ್ತದೆ, ಒಂದೆರಡು ಚುನಾವಣೆಗಳದ್ದಲ್ಲ. ೧೯೪೭ರ ಅಂತಿಮ ಕ್ರಾಂತಿಕಾರಿ ಜನತಾ ಹೋರಾಟಕ್ಕೆ ಎಪ್ಪತ್ತು ವರ್ಷಗಳ ಹಲವು ಮಜಲಿನ ಹಲವು ರೀತಿಯ ಸಾಮೂಹಿಕ ಹೋರಾಟಗಳ ಪರಂಪರೆಯೇ ಇತ್ತು. ಅಂದಿನ ನಾಯಕರೆಲ್ಲಾ ಜೈಲಿನೊಳಗಿದ್ದರೂ, ಜನತೆ ತಮ್ಮ ಕರ್ತವ್ಯವೇನೆಂದು ತಾವೇ ತಿಳಿದಿದ್ದರು. ಇಂದಿನ ಪರಿಸ್ಥಿತಿಯಲ್ಲಿ ಪ್ರಭುತ್ವವನ್ನು ವರ್ಗಾಂತರಗೊಳಿಸುವ ಕ್ರಾಂತಿ ಬಯಸುವವರು ಗಮನಿಸಬೇಕಾದ್ದು, ಉದ್ವೇಗ ಮತ್ತು ಆವೇಶದ ಸ್ಫೂರ್ತಿ ತುಂಬಬಲ್ಲ ಸ್ವಾತಂತ್ರ್ಯ ಹೋರಾಟಕ್ಕಿಂತ ವರ್ಗಕ್ರಾಂತಿಗಾಗಿ ಸಂಘಟಿಸುವುದು ಕಷ್ಟಕರವಾದುದು ಎಂಬುದನ್ನು. ನಮ್ಮ ಬಯಕೆಗಳು ವಾಸ್ತವದಲ್ಲಿಲ್ಲ ವೆಂದಾಗ ತಾಳ್ಮೆ ಬೇಕೆ ವಿನಃ ದುಡುಕಿನ ಧೋರಣೆಯಲ್ಲ, ಹತಾಶೆಯಲ್ಲ. ಹಿಂಸೆಯೇ ಗುರಿಯಲ್ಲ, ಅದು ಒಂದು ತಂತ್ರವಷ್ಟೆ. ಅದರ ಪ್ರಯೋಗಕ್ಕೊಂದು ಸಮಯ ಅವಕಾಶ ಬೇಕಾಗುತ್ತದೆ. ಹೊಸ ಹುಟ್ಟಿನ ಕ್ರಾಂತಿಯ ಸಂದರ್ಭವು ಪ್ರಸವದ ಹಿಂಸೆಯಂತೆ ಎಂದು ಹಿಂದೆಲ್ಲೊ ಕ್ರಾಂತಿ ಚಿಂತಕರು ವ್ಯಾಖ್ಯಾನಿಸಿರುವುದು ನಿಜ. ಆದರೆ ಅದೊಂದು ಸೃಜನಶೀಲ ವ್ಯಾಖ್ಯಾನ, ಕೇವಲ ಯಾಂತ್ರಿಕವಲ್ಲ. ಎಲ್ಲ ಸಂದರ್ಭದ ಎಲ್ಲ ಹಿಂಸೆಯೂ ಈ ಸೃಜನಶೀಲ ನೋವಿನಂಥದಲ್ಲ. ಶಿಶುಪ್ರಸವದ ಸಂದರ್ಭದ ಸೃಜನಾತ್ಮಕ ಹಿಂಸೆಗೆ ಪೂರ್ವದಲ್ಲಿ ಗರ್ಭಧಾರಣೆ, ಬೆಳವಣಿಗೆ, ಗರ್ಭದ ಫಲಕಾರಿತ್ವ, ನಂತರ ಜನನ, ಹೀಗೆ ಎಲ್ಲ ಹಂತಗಳು ಇದ್ದಂತೆ ಸಮಾಜದ ಬೆಳವಣಿಗೆಯಲ್ಲಿ ಈ ಎಲ್ಲ ಮೆಟ್ಟಿಲುಗಳನ್ನು ಹಾಯ್ದು ಹೋಗಬೇಕು ಕ್ರಾಂತಿ ಶಿಶು ಜನನವಾಗಬೇಕಾದರೆ. ಅವಧಿ ಪೂರ್ವ ಪ್ರಸವದ ಶಿಶು ವಿಕೃತವಾಗುತ್ತದೆ. ವೈಯಕ್ತಿಕ ನೆಲೆಯಲ್ಲಿ ನೀತಿ-ಅನೀತಿಯ ಮೌಲಿಕ ವಿಷಯವಾಗಿ ಹಿಂಸೆ-ಅಹಿಂಸೆಯ ಮೀಮಾಂಸೆ ಉಳಿದುಕೊಂಡು, ಕ್ರಾಂತಿಯ ಸಂದರ್ಭದಲ್ಲಿ ಅದರ ಪ್ರಯೋಗ ನೀತಿ-ಅನೀತಿಯ ಪ್ರಶ್ನೆಯಾಗದೆ, ತಂತ್ರದ ಸಮಯೋಚಿತತೆಯ ವಿಷಯವಾಗುತ್ತದೆ. ಆಳುವ ವರ್ಗ ಅಗತ್ಯಬಿದ್ದ ಸಾಮಾಜಿಕ ಪರಿವರ್ತನೆಗೆ ಮುಂದಾಗದೆ, ಅದಕ್ಕಾಗಿ ಹೋರಾಡುವ ಶೋಷಿತರ ವಿರುದ್ಧ ಪ್ರಭುತ್ವದ ಹಿಂಸೆಯನ್ನು ತೀವ್ರಗೊಳಿಸುವಷ್ಟು ಅವಿವೇಕಿಯಾದಾಗ, ಶೋಷಿತರು ನಿರುಪಾಯರಾಗಿ ಆತ್ಮರಕ್ಷಣೆಗಾಗಿ ಮಾತ್ರ ಅಲ್ಲದೆ ತಮ್ಮ ಉದ್ದೇಶಗಳನ್ನು ಒತ್ತಾಯಿಸುವುದಕ್ಕೂ ತಮ್ಮ ಕೊನೆಯ ಅಸ್ತ್ರವಾಗಿ ಸಂಘಟಿತ ಪ್ರತಿಹಿಂಸೆಯಲ್ಲಿ ತೊಡಗುವುದು ಅವರ ಹಕ್ಕೂ ಆಗಬಹುದು. ಸಾವಿರಾರು ವರ್ಷಗಳಿಂದ ಯಾವುದೇ ಸಮಾಜವು ಒಂದೇ ವರ್ಗದ ಹಿಡಿತದಲ್ಲಿ ಇದೆ ಎಂದು ಹೇಳುವುದು ಚರಿತ್ರೆಯ ತಿಳಿವಳಿಕೆಯಾಗದು. ಹಾಗೆಯೇ ಗುಲಾಮಗಿರಿಯ ಸ್ಪಾರ್ಟಕಸ್‌ನ ಹೋರಾಟ ನಮಗೆ ಸ್ಫೂರ್ತಿದಾಯಕವಾದರೂ ಅದು ಇಂದಿನ ಅನುಕರಣೀಯ ಹೋರಾಟದ ಮಾದರಿಯಲ್ಲ. ಇಂದಿನ ಶೋಷಣೆಯ ಮಾದರಿ ಗುಲಾಮಗಿರಿಯ ಮಾದರಿಯದಲ್ಲ. ಹಾಗೆಯೇ ಇಂದಿನ ಸರ್ಕಾರ ಪ್ರಭುತ್ವ ಬ್ರಿಟಿಷ್ ಸರ್ಕಾರದ ಮುಂದುವರಿಕೆ ಎಂಬುದು ಸಂಪೂರ್ಣ ವಾಸ್ತವವಲ್ಲ. ಅದರ ಅಂಗರಚನೆ, ಅದರ ವರ್ಗನಿಯಂತ್ರಣದ ಸ್ವರೂಪ, ಬದಲಾಗುತ್ತಿದೆ. ಈಗಷ್ಟೆ ಪ್ರಗತಿಪರ ಶಕ್ತಿಗಳು ಭಾರತದಲ್ಲಿನ ಪ್ರಭುತ್ವದ ಸ್ವರೂಪದ ಬಗ್ಗೆ ಒಮ್ಮತಕ್ಕೆ ಬರುತ್ತಿರುವಂತಿದೆ. ಅವರೊಳಗಿನ ಐಕ್ಯತೆ ಮುಂದಿನ ಪರಿಣಾಮಕಾರಿ ಹೆಜ್ಜೆಯಾಗಬೇಕಾಗಿದೆ. ಮೂರನೆಯ ಹೆಜ್ಜೆಯ ಭಿನ್ನಾಭಿಪ್ರಾಯವನ್ನು ನೆನೆಯುತ್ತಾ ಮೊದಲನೆಯ ಹೆಜ್ಜೆಯಲ್ಲೇ ಮುಗ್ಗರಿಸಬಾರದು.

ಕೆ. ಎಸ್. ಪಾರ್ಥಸಾರಥಿ
# ಸಿ-೧, ನಾಗಾರ್ಜುನ ಎನ್‌ಕ್ಲೇವ್, ೭೬/ಎ, ೧೪ನೇ ಕ್ರಾಸ್, ೧ನೇ ಹಂತ, ಜೆ.ಪಿ. ನಗರ, ಬೆಂಗಳೂರು-೭೮

> ಇಂದಿನ ಪ್ರಜಾಪ್ರಭುತ್ವದಲ್ಲಿ ಸಂಪತ್ತು ತನ್ನ ಪ್ರಭಾವವನ್ನು ಪರೋಕ್ಷವಾಗಿ ಆದರೆ ಅಷ್ಟೇ ಖಾತರಿಯಾಗಿ ಬಳಸುತ್ತದೆ. ಅಮೆರಿಕದಲ್ಲಿರುವ ಹಾಗೆ ಮೊದಲು ಪ್ರಭುತ್ವದ ಅಧಿಕಾರಿಗಳನ್ನು ಲಂಚದಿಂದ ಕೆಡಿಸುತ್ತದೆ. ನಂತರ ಸರ್ಕಾರಕ್ಕೂ ಷೇರುಪೇಟೆಗೂ ಸಂಬಂಧವೇರ್ಪಡಿಸುತ್ತದೆ. ಅಮೆರಿಕದಲ್ಲೂ, ಫ್ರಾನ್ಸ್‌ನಲ್ಲೂ ಇರುವಂತೆ.
>
> – ಏಂಗಲ್ಸ್

# ಶ್ರೀ ಗುರುವೇ ಅರಿವೇ.....

**ಕೆ**ಲವು ವ್ಯಕ್ತಿತ್ವಗಳಿಗೆ ಸಾವಿಲ್ಲ. ತಮ್ಮ ಆಲೋಚನೆಗಳ ಮೂಲಕ, ಅವುಗಳ ಪ್ರಸರಣದ ಮೂಲಕ ಅವರು ಚಿರಂಜೀವಿಗಳಾಗಿಬಿಡುತ್ತಾರೆ. ನಮ್ಮ ಪ್ರೀತಿಯ ಮೇಷ್ಟ್ರು ಪ್ರೊ|| ಜಿ. ಶ್ರೀನಿವಾಸನ್ ಅವರು ಈ ಗುಂಪಿಗೆ ಬರುತ್ತಾರೆ.

ಶ್ರೀನಿವಾಸನ್ ಅವರು ಮಾನಸ ಗಂಗೋತ್ರಿಯಲ್ಲಿ ನಾನು ತತ್ವಶಾಸ್ತ್ರದ ವಿದ್ಯಾರ್ಥಿನಿಯಾಗಿದ್ದಾಗ 'ಸೌಂದರ್ಯ ಶಾಸ್ತ್ರ'ವನ್ನು ಪಾಠ ಮಾಡುತ್ತಿದ್ದರು. ಪಾಂಡಿತ್ಯ ತುಂಬಿದ ಗುಂಡು ಮುಖ. ಇಂಪಾದ ಮೆಲುಮಾತು... ಚಹರೆಗಳಲ್ಲಿ ಹೊರಸೂಸುವ ಪಕ್ವ ಜೀವನಾನುಭವ. ಅವರ ಪಾಠ ನಮ್ಮ ಮಟ್ಟಿಗೆ ರಸದೌತಣ! ಖಚಿತತೆ, ಅಚ್ಚುಕಟ್ಟಾದ ಚೌಕಟ್ಟು ಅವರ ಮಾತಿನ ಬಂಡವಾಳ. ಅವರು ಸುಖವಾಗಿ ಕಣ್ಮುಚ್ಚಿ, ತಮ್ಮ ಅಭಿವ್ಯಕ್ತಿಯನ್ನು ತಾವೇ ಆನಂದಿಸುತ್ತಾ ವಿಷಯ ಬೋಧನೆ ಮಾಡುತ್ತಿದ್ದರೆ, ನಮ್ಮ ಪ್ರಜ್ಞೆಯ ಸುತ್ತ ಅದಾವುದೋ ಸುಮಧುರ ರಸಧಾರೆಯೊಂದು ಹಿತವಾಗಿ ವರ್ಷಿಸಿಬಿಡುವಂತೆ ನಮಗೆ ಭಾಸವಾಗುತ್ತಿತ್ತು. ಅವರು ಕಲಿಸುತ್ತಿದ್ದುದು ತತ್ವಗಳೇ ಆದರೂ, ಅದೆಂಥ ಜೀವನ ಸೌಂದರ್ಯ ಅಲ್ಲಿ ಅಡಕವಾಗಿತ್ತು! ಆ ಸೊಗಸಾದ ಮಾತುಗಳ ಚೆಲುವಿಗೆ, ಅರ್ಥ ಶ್ರೀಮಂತಿಕೆಗೆ ನಾವು ಪುಳಕಿತರಾಗುತ್ತಿದ್ದೆವು. ತಮ್ಮ ಮಾತುಗಳ ಮೂಲಕ ನಮ್ಮ ಕನಸುಗಳನ್ನು ಕಟ್ಟಿಕೊಟ್ಟವರು ಅವರು. ಕನಸು - ಕಲ್ಪನೆ ಮಾತ್ರವಲ್ಲ, ಬದುಕಿನ ಕರಾಳ - ಕಠೋರ ಮುಖಗಳ ಕಡೆಗೂ ನಮ್ಮ ಗಮನ ಸೆಳೆದವರು. ಬದುಕೆಂದರೆ ಹೀಗೆ... ಅದರ ರೀತಿ-ನೀತಿಗಳು ಇಂತಿಷ್ಟು ಎಂದು ತಿಳುವಳಿಕೆಯ ಬೆಳಕು ನೀಡಿ, ಚಿಕ್ಕ ವಯಸ್ಸಿನಲ್ಲೇ ನಮ್ಮ ಬದುಕಿಗೆ ಚಿಂತನೆಗಳ ಬುನಾದಿ ಹಾಕಿಕೊಟ್ಟ ಮೇಷ್ಟರಿಗೆ ನಾವೆಷ್ಟು ಕೃತಜ್ಞತೆ ಅರ್ಪಿಸಿದರೂ ಅದು ಕಡಿಮೆಯೇ!

ಮಾನಸ ಗಂಗೋತ್ರಿಯ ವಿದ್ಯಾರ್ಥಿ ಜೀವನಕ್ಕೆ ವಿದಾಯ ಹೇಳಿದ ಮೇಲೆ, ಮತ್ತೆ ಮೇಷ್ಟರನ್ನು ನಾನು ಕಂಡದ್ದು ಇಪ್ಪತ್ತೊಂಭತ್ತು ವರ್ಷಗಳ ನಂತರ! ಮಧ್ಯೆ ಮಧ್ಯೆ ಅವರ ಬಗ್ಗೆ ತಿಳಿಯುತ್ತಿತ್ತಾದರೂ, 'ಹೊಸತು' ಮುಂತಾದ ಪತ್ರಿಕೆಗಳಲ್ಲಿ ಅವರ ಲೇಖನಗಳನ್ನು ಓದುತ್ತಿದ್ದೆನಾದರೂ ಮುಖತಃ ಭೇಟಿ ಸಾಧ್ಯವಾಗಿರಲಿಲ್ಲ. ಭೇಟಿ ಮಾಡಲು ತೀವ್ರ ಹಂಬಲ ಇದ್ದರೂ ಆಗಿರಲಿಲ್ಲ. ಕೆಲವು ಸಾರಿ ನಾವು ಅಂದುಕೊಳ್ಳುವುದು ಆಗುವುದಿಲ್ಲ. ಬಹುಶಃ ನಮ್ಮ ಅಂದುಕೊಳ್ಳುವಿಕೆಗೆ ಬಲ ಸಾಲದೆ ಹೋಗುವುದೂ ಇದಕ್ಕೆ ಕಾರಣವಿರಬಹುದು.

ಕೆಲವು ತಿಂಗಳುಗಳ ಹಿಂದೆ – ಸರಿಯಾಗಿ ಇಪ್ಪತ್ತೊಂಭತ್ತು ವರ್ಷಗಳ ನಂತರ ನಾನು, ಶೈಲಿ, ಸುನಂದಾ ಅವರ ಮನೆಗೆ ಹೋದೆವು. ನಾವೆಲ್ಲರೂ ಅವರ ಶಿಷ್ಯೆಯರೇ. ಸುನಂದಾ ಅವರನ್ನು ಮಧ್ಯೆ ಹಲವಾರು ಬಾರಿ ಭೇಟಿ ಮಾಡುತ್ತಿದ್ದುದರಿಂದ ಚೆನ್ನಾಗಿ ಪರಿಚಿತಳು. ನನಗೋ ಮೇಷ್ಟರ ಸುಪ್ರಸಿದ್ಧ ಸ್ಮರಣ ಶಕ್ತಿಯನ್ನು ಒರೆಗೆ ಹಚ್ಚುವ ಕುತೂಹಲ. ಸುನಂದಳಿಗೆ ಹುಡುಗಾಟದಿಂದ ''ನಾನೇ ಮುಂದೆ ಹೋಗ್ತೀನಿ... ನೋಡೋಣ, ಗುರುತು ಹಿಡೀತಾರಾ ಅಂತ!'' ಎಂದು ತಾಕೀತು ಮಾಡಿದ್ದೆ. ಅದರಂತೆ ನಾನೇ ಮುಂದೆ ನಿಂತು ಮನೆಯ ಕರೆಗಂಟೆ ಒತ್ತಿದೆ. ಬಾಗಿಲು ತೆರೆದುಕೊಳ್ಳುತ್ತಿದ್ದಂತೆ, ಅವರ ಆತ್ಮೀಯ ಮುಖ ನನ್ನ ಕಣ್ಣೆದುರಿಗೆ ಪ್ರತ್ಯಕ್ಷವಾಯಿತು. ಮರುಕ್ಷಣ ''ಭಾರತಿ ? ಬಾ ಬಾ.....'' ಗುರುಗಳ ಶ್ರೀಮುಖದಿಂದ ಅಪ್ಪಣೆ ಹೊರಟಿತು! ನಾನು ಆಶ್ಚರ್ಯದಿಂದ ಮೂರ್ಛೆ ಹೋಗುವುದು ಬಾಕಿ! ಆಮೇಲೆ ಅವರು ಸಂಭ್ರಮದಿಂದ ಎಲ್ಲರನ್ನೂ ಒಳಗೆ ಬರಮಾಡಿಕೊಂಡು ಆದರಿಸಿದರು.

ಎಲ್ಲರ ಕುಶಲವನ್ನು ವಿವರವಾಗಿ ವಿಚಾರಿಸಿದ ಮೇಷ್ಟರು ನನ್ನ ಬಗ್ಗೆ ಕೆಲವು ಒಳ್ಳೆಯ ಮಾತುಗಳನ್ನಾಡಿದರು. ಗಂಗೋತ್ರಿ ಬಿಟ್ಟ ಮೇಲೆ ನನಗೂ ಅವರಿಗೂ ಸಂಪರ್ಕವೇ ಇರದಿದ್ದರೂ, ಈ ಮಧ್ಯೆ ಪ್ರಕಟವಾದ ನನ್ನ ಬರವಣಿಗೆಯನ್ನು ಅವರು ಗುರುತಿಸಿದ್ದರು. ''ರಾಮಕೃಷ್ಣ ಅವರು ಒಂದ್ಸಾರಿ ನಿನ್ನ ಬಗ್ಗೆ ಹೇಳಿದ್ರು.....'' ಅಂದರವರು ಪ್ರೀತಿಯಿಂದ. ನಾನವರಿಗೆ ಹೇಳಿದೆ ''ಸರ್, ನೀವು ಎರಡು ವರ್ಷ ಹೇಳಿದ ಪಾಠ ಜೀವನದುದ್ದಕ್ಕೂ ನನ್ನ ಕಾದಿದೆ. ನನ್ನ ಅನೇಕ ಆಲೋಚನೆಗಳ ಹಿಂದೆ ನಿಮ್ಮ ಮಾತುಗಳ ಸ್ಫೂರ್ತಿ ಇದೆ!'' ಅವರಿಗೆ ಸಂತೋಷವಾಗಿರಬೇಕು. ಒಂದು ಮೃದು ಮಂದಸ್ಮಿತ ಸೂಚಿಸಿದರು.

ಇತ್ತೀಚಿನ ದಿನಗಳಲ್ಲಿ ಅವರ ಆರೋಗ್ಯ ಸರಿಯಿರಲಿಲ್ಲವೆಂದು, ಮನಶ್ಶಾಂತಿಗಾಗಿ ತುಂಬಾ ಸಂಗೀತ ಕೇಳುತ್ತಾರೆಂದು ನಮಗೆ ತಿಳಿದಿತ್ತು. ''ಸರ್, ಒಂದು ಹಾಡು ಹೇಳ್ತೀನಿ. ಕೇಳಲು ಇಷ್ಟ ಆಗಬಹುದಾ ?'' ಎಂದವರನ್ನು ಕೇಳಿದೆವು. ಅವರು ಕೀಟಲೆಯನ್ನು ಗಂಭೀರವಾಗಿ ಸೂಸುತ್ತ ''ತುಂಬಾ ಇಷ್ಟ ಆಗುತ್ತೇ!'' ಅಂದರು. ಅವರು · ಕುರ್ಚಿಯಲ್ಲಿ ಕೂತಿದ್ದರು. ಸುನಂದಾ, ನಾನು ಅವರ ಹತ್ತಿರ ಹೋಗಿ, ನೆಲದ ಮೇಲೆ ಪದ್ಮಾಸನ ಹಾಕಿ ಕೂತು,

''ಶ್ರೀ ಗುರುವೇ ಅರುವೆ  
ಶರಣಾಗಿ ಬರುವೆ  
ಕರುಣೆಯನು ಕೋರಿ ಬರುವೆ''

ಹಾಡಿದೆವು. ಹಾಡು ಮುಗಿದ ಮೇಲೆ, ಮಗ್ಗಿ ಒಪ್ಪಿಸಿದ ನಂತರ ಸರಿ-ತಪ್ಪುಗಳ ಅಭಿಪ್ರಾಯಕ್ಕಾಗಿ ಹುಡುಗರು ಮೇಷ್ಟರ ಮುಖವನ್ನು ಭಯ-ಭಕ್ತಿಗಳಿಂದ ನೋಡುವಂತೆ ನಾವೂ ಅವರ ಮುಖ ನೋಡಿದೆವು. ಅಲ್ಲಿ ನಗು ತುಂಬಿತ್ತು. ''ನಮ್ಮ ಮನೆ ಹತ್ರಾನೂ ಒಬ್ರು ಸಂಗೀತ ಹಾಡೋರು ಇದಾರೆ. ಅವ್ರೇನಾದ್ರೂ, ಈಗ ಇಲ್ಲಿದ್ದಿದ್ರೆ... ಕುಣಿದುಬಿಡ್ತಾ ಇದ್ರು!'' ಅಂದರು. ಅದು ನಮ್ಮ ಅವತ್ತಿನ ಸರ್ಟಿಫಿಕೇಟು!

ನಾವು ಭೇಟಿ ಮಾಡುವ ವೇಳೆಗಾಗಲೇ ಶ್ರೀನಿವಾಸನ್ ಅವರು ಖಿನ್ನತೆಗೆ ಕೆಲವು ಬಾರಿ ಗುರಿಯಾಗಿದ್ದರು. ಚಿಕಿತ್ಸೆ ಕೂಡ ತೆಗೆದುಕೊಂಡಿದ್ದರು. ಆದರೆ ಅವರ ಮಾತಿನಲ್ಲಾಗಲೀ, ಚಹರೆಗಳಲ್ಲಾಗಲೀ ಆ ಕುರುಹು ಒಂದಿಷ್ಟೂ ಗೋಚರಿಸಲಿಲ್ಲ. ಅದೇ ಗಾಂಭೀರ್ಯ, ಅದೇ ಬಿಗಿ.... ಅದೇ ಸಂಯಮ! ದಾರ್ಶನಿಕನೊಬ್ಬನದೇ ಪ್ರಬುದ್ಧ ನಡೆವಳಿಕೆ! ತಮ್ಮ ತಮ್ಮ ಪಕ್ವತೆಗಳಿಗನುಗುಣವಾಗಿ ಪ್ರವರ್ತಿಸುತ್ತಾರಲ್ಲವೇ ಜನ ?

## ಭಾರತೀ ಕಾಸರಗೋಡು

ಅವತ್ತು ನಾವು ಹೊರಟಾಗ, ತಾವೇ ಖುದ್ದಾಗಿ ನಮ್ಮೆಲ್ಲರ ವಿಳಾಸಗಳನ್ನು ದೂರವಾಣಿ ಸಂಖ್ಯೆಗಳನ್ನು ಡೈರಿಯಲ್ಲಿ ಬರೆದುಕೊಂಡರು. ''ಸಮಯಕ್ಕೆ ಬೇಕಾಗಬಹುದೇನೋ ?'' ಅಂದರು. ಆದರೆ ಆ ರೀತಿಯ ಸಮಯಗಳನ್ನು, ಮುಂದಿನ ಭೇಟಿಗಳನ್ನು ನಿರಾಕರಿಸಿ ಆ ಮನೆಗೆ ನಡೆದೇಬಿಟ್ಟರು. ಅದು ಇಷ್ಟು ಬೇಗ ಸಂಭವಿಸಬಹುದೆನ್ನುವ ಕಲ್ಪನೆ ಕೂಡ ನಮಗಿರಲಿಲ್ಲ. ಪ್ರತಿನಿತ್ಯ ಸಾವನ್ನು ನೋಡುತ್ತಿದ್ದರೂ, ನಮಗೆ ಪ್ರಿಯರಾದವರ ವಿಚಾರದಲ್ಲಿ ಎಂಥದ್ದೋ 'ಚಿರಾಯು' ತನದ ಭ್ರಮೆ ನಮಗೆ!

ಮೇಷ್ಟ್ರು ಭೌತಿಕವಾಗಿ ನಮ್ಮಿಂದ ದೂರವಾಗಿದ್ದಾರೆ. ಆದರೆ ತಾವು ಕಲಿಸಿಕೊಟ್ಟ ಪಾಠ, ಕಟ್ಟಿಕೊಟ್ಟ ಭರವಸೆಗಳಿಂದ ತಮ್ಮ ಸಾವಿರಾರು ಶಿಷ್ಯರಲ್ಲಿ ಉಸಿರಾಡುತ್ತಲೇ ಇದ್ದಾರೆ. ಅವತ್ತು ಅವರ ಸಮ್ಮುಖದಲ್ಲಿ ಹಾಡಿದ ಹಾಡನ್ನೇ ಮತ್ತೊಮ್ಮೆ ಹಾಡಬೇಕೀಗ ನಾವು –

''ಶ್ರೀ ಗುರುವೇ ಅರುವೇ  
ಶರಣಾಗಿ ಬರುವೆ  
ಕರುಣೆಯನು ಕೋರಿ ಬರುವೆ  
ಹೃತ್ ಪ್ರಕೃತಿ ತಂದ  
ಕಿಡಿ ಹೂಗಳನ್ನು  
ಶ್ರೀ ಚರಣಕೆರೆಯುತಿರುವೆ.''




ಭಾರತೀ ಕಾಸರಗೋಡು  
೭೩೬, ೧೪ನೇ ಕ್ರಾಸ್, ಬಿಇಎಲ್ ಬಡಾವಣೆ (ಮೊದಲ ಹಂತ)  
ಭಾರತ್‌ನಗರ, ಮಾಗಡಿ ರಸ್ತೆ, ಬೆಂಗಳೂರು - ೫೬೦ ೦೯೧

# ತಮಿಳಿಗೆ ಕ್ಲಾಸಿಕಲ್ ಭಾಷೆಯ ಪಟ್ಟ ಕಟ್ಟಿದ ಯು. ಪಿ. ಎ !

ಸ್ವತಂತ್ರ ಭಾರತದ ಭಾಷಾನೀತಿಯಲ್ಲಿ ಮೊದಲಿನಿಂದಲೂ ತಾರತಮ್ಯ ನೀತಿಯೇ ಪ್ರಧಾನವಾಗಿರುವುದರಿಂದ ತಮಿಳಿಗೆ ಈಗ ಸಿಕ್ಕಿರುವ ಹೊಸ ಮನ್ನಣೆಯಿಂದ ಯಾರೂ ವಿಚಲಿತರಾಗಬೇಕಿಲ್ಲ, ಅಲ್ಲದೆ, ಈ ನೀತಿಯಿಂದಾಗಿ ತಮಿಳು ಭಾಷೆ ಉದ್ಧಾರವಾದೀತೆಂಬ ಭರವಸೆಯೂ ಇಲ್ಲ. ಏಕೆಂದರೆ ಕಳೆದ ಐವತ್ತು ವರ್ಷಗಳ ಕಾಲಾವಧಿ ಯಲ್ಲಿ ಇನ್ನಿಲ್ಲವೆಂಬಂತೆ ಹಿಂದಿ ಭಾಷೆಯನ್ನು ಅಭಿವೃದ್ಧಿಪಡಿಸಲು ಹಣದ ಹೊಳೆಯನ್ನೇ ಹರಿಸಿದರೂ, ಪರಿಣಾಮ ಮಾತ್ರ ಶೂನ್ಯವೆಂಬಂತಾಗಿದೆ. ಹಿಂದೀಯೇತರ ರಾಜ್ಯಗಳು – ಅದರಲ್ಲಿಯೂ ದಕ್ಷಿಣ ಭಾರತದ ಪ್ರದೇಶಗಳು – ಹಿಂದಿಯನ್ನು ತಮ್ಮ ರಾಷ್ಟ್ರಭಾಷೆ ಎಂದು ಮನಸಾ ಒಪ್ಪಿಕೊಂಡಿಲ್ಲ.

**ಬಿ.**ಜೆ.ಪಿ. ಹಾಗೂ ಅದರ ಮಿತ್ರ ಪಕ್ಷಗಳನ್ನು ಸೋಲಿಸಿ ಚುನಾವಣೆಯನ್ನು ಗೆದ್ದ ಕಾಂಗ್ರೆಸ್ ಹಾಗೂ ಅದರ ಮಿತ್ರ ಪಕ್ಷಗಳು ತಮ್ಮ ಮುಂದಿನ ಗುರಿಯನ್ನು ಕುರಿತು, ''ಕನಿಷ್ಠ ಸಾಮಾನ್ಯ ಕಾರ್ಯಕ್ರಮ''ಗಳನ್ನು ಘೋಷಿಸಿದಾಗ, ಸಂಘಪರಿವಾರದ ಸಾಂಸ್ಕೃತಿಕ ಗುಪ್ತ ಕಾರ್ಯಾಚರಣೆಗೆ ಒಂದು ಉತ್ತಮವಾದ ಪಾರದರ್ಶಕ ಪರ್ಯಾಯ ಹುಟ್ಟಿಕೊಂಡಿತೆಂದು ನಂಬಲಾಗಿತ್ತು. ಆದರೆ ಕೇವಲ ಒಂದೆರಡು ತಿಂಗಳಿನಲ್ಲಿಯೇ ಅದು ಸಂಪೂರ್ಣ ನಿಜವಿರಲಾರದೆಂಬ ಸಂದೇಹ ಬರುತ್ತಿದೆ. ನಮ್ಮ ದೇಶದ ಜಾತ್ಯತೀತ ಸ್ವರೂಪವನ್ನು ರಕ್ಷಿಸುವ ನಿಟ್ಟಿನಲ್ಲಿ ಹೊಸ ಪರಿವಾರವನ್ನು ನಂಬಬಹುದಾದರೂ ಉಳಿದ ಹಲವು ವಿಚಾರಗಳಲ್ಲಿ ಹಿಂದಿನ ಪ್ರಭುತ್ವಕ್ಕಿಂತ ಭಿನ್ನ ಶೈಲಿ ಗೋಚರವಾಗುತ್ತಿಲ್ಲ. ರಾಜಕೀಯ ಪ್ರೇರಿತ ಕಾರಣಗಳಿಗಾಗಿ ಸಾಂಸ್ಕೃತಿಕ ನಿರ್ಧಾರಗಳನ್ನು ತೆಗೆದುಕೊಳ್ಳುವ ಪ್ರವೃತ್ತಿ ಇಲ್ಲಿಯೂ ಕಾಣಿಸಿಕೊಂಡಿದೆ. ಅಧಿಕಾರಕ್ಕೆ ಬಂದ ಮೊದಲ ವಾರದಲ್ಲೇ ಭಾರತದ ಎಲ್ಲ ರಾಜ್ಯಗಳ ಅಧಿಕೃತ ಭಾಷೆಗಳೂ ರಾಷ್ಟ್ರಭಾಷೆಗಳೆಂದು ಘೋಷಿಸಿದಾಗ ಸಂತೋಷಪಟ್ಟವರಿಗೆ ಮುಂದಿನ ವಾರದಲ್ಲಿಯೇ ಆಘಾತಕರ ಸುದ್ದಿ ಕಾದಿತ್ತು. ಎಲ್ಲ ಇಪ್ಪತ್ತೆರಡು ಭಾಷೆಗಳೂ ಸಮಾನವೆಂಬುದನ್ನು ತಾತ್ವಿಕವಾಗಿ ಒಪ್ಪಿದ್ದರೂ, ತಮಿಳಿಗೆ ಮಾತ್ರ ವಿಶೇಷ ಮಾನ್ಯತೆ ಕಲ್ಪಿಸಲಾಯಿತು. ತಮಿಳನ್ನು 'ಕ್ಲಾಸಿಕಲ್ ಭಾಷೆ' ಎಂದು ಘೋಷಿಸಿ ಅದರ ಅಭಿವೃದ್ಧಿಗೆ ಸರ್ವ ಪ್ರಯತ್ನ ಮಾಡಲಾಗುವುದೆಂದು ಆಶ್ವಾಸನೆ ನೀಡಲಾಯಿತು. ಹೊಸ ಸರ್ಕಾರದ ಈ ತೀರ್ಮಾನದ ಹಿನ್ನೆಲೆಯಲ್ಲಿ ರಾಜಕೀಯ ಚಾತುರ್ಯವನ್ನು ಗುರುತಿಸಬಹುದೇ ಹೊರತು, ವಿವೇಕಪೂರ್ಣ ಮುನ್ನೋಟ ಅಲ್ಲಿ ಗೋಚರಿಸುತ್ತಿಲ್ಲ.

ಸ್ವತಂತ್ರ ಭಾರತದ ಭಾಷಾನೀತಿಯಲ್ಲಿ ಮೊದಲಿನಿಂದಲೂ ತಾರತಮ್ಯ ನೀತಿಯೇ ಪ್ರಧಾನವಾಗಿರುವುದರಿಂದ ತಮಿಳಿಗೆ ಈಗ ಸಿಕ್ಕಿರುವ ಹೊಸ ಮನ್ನಣೆಯಿಂದ ಯಾರೂ ವಿಚಲಿತರಾಗಬೇಕಿಲ್ಲ. ಅಲ್ಲದೆ, ಈ ನೀತಿಯಿಂದಾಗಿ ತಮಿಳು ಭಾಷೆ ಉದ್ಧಾರವಾದೀತೆಂಬ ಭರವಸೆಯೂ ಇಲ್ಲ. ಏಕೆಂದರೆ ಕಳೆದ ಐವತ್ತು ವರ್ಷಗಳ ಕಾಲಾವಧಿಯಲ್ಲಿ ಇನ್ನಿಲ್ಲವೆಂಬಂತೆ ಹಿಂದಿ ಭಾಷೆಯನ್ನು ಅಭಿವೃದ್ಧಿಪಡಿಸಲು ಹಣದ ಹೊಳೆಯನ್ನೇ ಹರಿಸಿದರೂ, ಪರಿಣಾಮ ಮಾತ್ರ ಶೂನ್ಯವೆಂಬಂತಾಗಿದೆ. ಹಿಂದೀಯೇತರ ರಾಜ್ಯಗಳು – ಅದರಲ್ಲಿಯೂ ದಕ್ಷಿಣ ಭಾರತದ ಪ್ರದೇಶಗಳು – ಹಿಂದಿಯನ್ನು ತಮ್ಮ ರಾಷ್ಟ್ರಭಾಷೆ ಎಂದು ಮನಸಾ ಒಪ್ಪಿಕೊಂಡಿಲ್ಲ. ಯಾವ ವಿಶೇಷ ಮಾನ್ಯತೆ ನೀಡದಿದ್ದರೂ ಸಮಕಾಲೀನ ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಕನ್ನಡ, ಬಂಗಾಳಿ, ಮತ್ತು ಮಲೆಯಾಳ ಭಾಷಾ ಸಾಹಿತ್ಯ ಶ್ರೇಷ್ಠ ಸಾಧನೆಗೆ ಹೆಸರಾಗಿವೆ. ಹಿಂದಿ ಭಾಷೆ ಮತ್ತು ಸಾಹಿತ್ಯದ ಸಾಧನೆ ಗಮನಾರ್ಹವಾಗಿ ಕಾಣಿಸುತ್ತಿಲ್ಲ. ಇದಕ್ಕೆ ಕಾರಣವೇನು ಎಂಬುದನ್ನು ನಾವೆಲ್ಲ ಗಂಭೀರವಾಗಿ ಆಲೋಚಿಸಬೇಕಾಗುತ್ತದೆ. ಯಾವುದೇ ಭಾಷೆ ತನ್ನ ಸ್ವಂತ ಬಲದಿಂದ ಸಮೃದ್ಧಗೊಳ್ಳಲು ಸಾಂಸ್ಕೃತಿಕ ಒತ್ತಾಸೆ ಇರಬೇಕೇ ಹೊರತು, ಅಧಿಕಾರದ ಬಲದಿಂದ ಹಣದ ಬೆಂಬಲದಿಂದ ಅದು ಬೆಳೆಯುವುದಿಲ್ಲ. ಸೋದರ ಭಾಷಾ ಸಮುದಾಯಗಳ ಅಸಂತುಷ್ಟಿಗೆ ಇಂತಹ ಭಾಷೆಗಳು ಪಕ್ಕಾಗಿ, ಅಪರಾಧಿ ಭಾವನೆಯಿಂದ ಕೊರಗಬೇಕಾಗಬಹುದು. ಆದರೂ ಮತ್ತೆ ಮತ್ತೆ ಈ ತಾರತಮ್ಯ ರಾಜಕೀಯ ನೀತಿ ಅಬಾಧಿತವಾಗಿ ಮುಂದುವರಿಯುತ್ತದೆ. ಇಲ್ಲಿಯವರೆಗೆ, ಹಿಂದಿ ಪರವಾಗಿದ್ದ ಪ್ರಭುತ್ವ ಈಗ ಸ್ವಲ್ಪಮಟ್ಟಿಗೆ ತಮಿಳನ್ನು ಓಲೈಸುತ್ತಿದೆ.

ಸ್ವತಂತ್ರ ಭಾರತದ ರಾಜ್ಯಾಂಗ ಸಭೆಯಲ್ಲಿಯೇ ಹಿಂದಿಯನ್ನು ರಾಷ್ಟ್ರ ಭಾಷೆಯನ್ನಾಗಿ ಅಂಗೀಕರಿಸಿದ್ದು ಗೊಂದಲದ ಸಂದರ್ಭದಲ್ಲಿ. ಇಂಗ್ಲಿಷಿಗೆ ಪರ್ಯಾಯವಾಗಿ ಭಾರತೀಯ ರಾಷ್ಟ್ರಭಾಷೆಯನ್ನು ಅಧಿಕೃತವಾಗಿ ಒಪ್ಪಿಕೊಳ್ಳಬೇಕೆಂಬ ಆಶಯಕ್ಕನುಸಾರವಾಗಿ ವಿಸ್ತಾರವಾದ ಚರ್ಚೆ ನಡೆದಾಗ, ವಾಸ್ತವವಾಗಿ ಉರ್ದುಭಾಷೆಗೆ ಹೆಚ್ಚಿನ ಬೆಂಬಲ ವ್ಯಕ್ತವಾಯಿತು. ಭಾರತದ ಎಲ್ಲ ರಾಜ್ಯಗಳಲ್ಲಿಯೂ ಬಳಕೆಯಲ್ಲಿರುವ ಉರ್ದುಭಾಷೆಯನ್ನು ಒಪ್ಪದೆ, ಹಿಂದಿವಾದಿಗಳು ಓಟಿನ ಮೂಲಕ ಅದನ್ನು ನಿರ್ನಾಮಿಸಲು ಮುಂದಾದರು. ಆಗ, ಉರ್ದು ಮತ್ತು ಹಿಂದಿ ಭಾಷೆಗಳೆರಡಕ್ಕೂ ಸಮಾನ ಮತಗಳು ಲಭ್ಯವಾಗಿ, ಹಿಂದಿವಾದಿಗಳಿಗೆ ಮುಖಭಂಗವಾಯಿತು. ರಾಜ್ಯಾಂಗ ಸಭೆಯ ಅಧ್ಯಕ್ಷರಾಗಿದ್ದ ಬಾಬು ರಾಜೇಂದ್ರ ಪ್ರಸಾದರು ಸತ್ಸಂಪ್ರದಾಯವನ್ನು ಬದಿಗೊತ್ತಿ, ಅಂತಿಮವಾಗಿ ತಮ್ಮ ಮತವನ್ನೂ ಚಲಾಯಿಸಿದ ಕಾರಣದಿಂದ ಹಿಂದಿ ರಾಷ್ಟ್ರಭಾಷೆಯಾಗಿ ವಿಜೃಂಭಿಸಿತು. ಸ್ವಾತಂತ್ರ್ಯ ಚಳುವಳಿಯ ಕಾಲದಿಂದಲೂ ಕಾಂಗ್ರೆಸ್ ಪಕ್ಷ ಮತ್ತು ಗಾಂಧೀಜಿಯವರು ಹಿಂದಿ ನಮ್ಮ ರಾಷ್ಟ್ರಭಾಷೆ ಎಂಬುದಾಗಿ ಪ್ರಚಾರ ಮಾಡಿದ್ದರೂ ಸಹ, ನಿರ್ಣಾಯಕ ಸಂದರ್ಭದಲ್ಲಿ ಈ ಭಾಷೆಯನ್ನು ಹಿಂದಿಯೇತರ ಪ್ರದೇಶಗಳು ಒಪ್ಪಿಕೊಳ್ಳಲು ಹಿಂಜರಿದ ವಿಚಾರ ಮಾತ್ರ ಈಗ ಚಾರಿತ್ರಿಕ ಸತ್ಯವಾಗಿ ಉಳಿದಿದೆ.

ರಾಷ್ಟ್ರಭಾಷೆ ಎಂಬ ಮನ್ನಣೆ ದೊರೆತ ಮೇಲೆ ಹಿಂದಿ ಭಾಷೆಯನ್ನು ಪ್ರೋತ್ಸಾಹಿಸುವ ರಭಸದಲ್ಲಿ ಮುಂದಿನ ಸರ್ಕಾರಗಳು ಉಳಿದ ರಾಜ್ಯ ಭಾಷೆಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದವು. ಪ್ರಾದೇಶಿಕ ಭಾಷೆಗಳ ಅಭಿವೃದ್ಧಿಯ ಹೊಣೆ ರಾಜ್ಯ ಸರ್ಕಾರಗಳಿಗೆ ಸೇರಿದೆ, ಎಂಬ ಈ ಧೋರಣೆ ವಸಾಹತುಶಾಹಿ ನೀತಿಗಿಂತ ಭಿನ್ನವೇನೂ ಅಲ್ಲವೆಂಬುದನ್ನು ನಾವು ಮರೆಯಬಾರದು. ಇಂದಿಗೂ ಎಲ್ಲ ಕೇಂದ್ರ ವಿಶ್ವವಿದ್ಯಾಲಯಗಳಲ್ಲಿ ಹಿಂದಿ ಭಾಷಾ ವಿಭಾಗಗಳಿವೆ; ಕೇಂದ್ರೀಯ ಹಿಂದಿ ವಿಶ್ವವಿದ್ಯಾಲಯವೇ ಸ್ಥಾಪಿತವಾಗಿದೆ; ಭಾರತ ಸರ್ಕಾರವು ಹಿಂದಿ ಭಾಷಾಭಿವೃದ್ಧಿಗೆ ಪ್ರತ್ಯೇಕ ನಿರ್ದೇಶನಾಲಯ ಸ್ಥಾಪಿಸಿದೆ; ಕೇಂದ್ರ ಸರ್ಕಾರದ ಕಚೇರಿಗಳಲ್ಲಿ ಮತ್ತು ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಹಿಂದಿ ಭಾಷೆಯ ಅಭಿವೃದ್ಧಿಗಾಗಿ ವಿಶೇಷ ಪ್ರೋತ್ಸಾಹ ನೀಡಲಾಗುತ್ತದೆ; ಹಿಂದಿ ಸಾಹಿತ್ಯಕ್ಕೆ ಬೇರೆಲ್ಲ ಭಾಷೆಗಳಿಂದ ಪ್ರತ್ಯೇಕವಾದ ಪ್ರಶಸ್ತಿ, ಪುರಸ್ಕಾರಗಳನ್ನು ಹಮ್ಮಿಕೊಳ್ಳಲಾಗಿದೆ; ಆಕಾಶವಾಣಿ, ದೂರದರ್ಶನವೇ ಮುಂತಾದ ಸಂಪರ್ಕ ಮಾಧ್ಯಮಗಳ ಮೂಲಕ ಹಿಂದಿ ಪ್ರಚಾರವನ್ನು ನಿರಂತರವಾಗಿ ನಡೆಸಲಾಗುತ್ತಿದೆ. ಹಿಂದಿ ಪ್ರಚಾರ ಸಭಾಗಳಂತೂ ಮಿಷನರಿಗಳಂತೆ ಈ ಕಾಯಕ ನಡೆಸುತ್ತಿವೆ. ಆದರೂ ಹಿಂದಿ ಭಾಷೆ ಮತ್ತು ಸಾಹಿತ್ಯ, ಉದ್ಧಾರವಾದಂತೆ ಕಾಣಿಸುತ್ತಿಲ್ಲ. ಚಲನಚಿತ್ರಗಳಂತಹ ಸ್ವತಂತ್ರ ಉದ್ಯಮಗಳಲ್ಲಿ ಜನಪ್ರಿಯ ನೆಲೆಯಲ್ಲಿ ಹಿಂದಿ ಮೆರೆಯುತ್ತಿದ್ದರೂ, ಸಮಕಾಲೀನ ಹಿಂದಿ ಚಿತ್ರಗಳ ಅಭಿರುಚಿಯ ಮಟ್ಟ ಅಸಹನೀಯವೆನ್ನಿಸುವಂತಿದೆ. ಒಟ್ಟಾರೆಯಾಗಿ ಹೇಳುವುದಾದರೆ, ''ಊರು ತಿಂದರೂ ಗೌಡ ಒಕ್ಕಲಾಗಲಿಲ್ಲ...'' ಎಂಬ ಹಳೆಯ ಗಾದೆ, ಹಿಂದಿ

ಡಾ. ಕೆ. ಮರುಳಸಿದ್ದಪ್ಪ

ಭಾಷೆಯ ಸದ್ಯದ ಪರಿಸ್ಥಿತಿಗೆ ತುಂಬಾ ಚೆನ್ನಾಗಿ ಹೊಂದಿಕೊಳ್ಳುತ್ತದೆ.

ತಮಿಳುನಾಡಿನಲ್ಲಿ ಮಾತ್ರ ಹಿಂದಿ ಪ್ರಭುತ್ವವನ್ನು ಮೊದಲಿನಿಂದಲೂ ನಿರಾಕರಿಸಿ, ತಮ್ಮ ಸ್ವತಂತ್ರ ಅಸ್ತಿತ್ವವನ್ನು ಕೆಚ್ಚಿನಿಂದ ಕಾಪಾಡಿಕೊಂಡು ಬಂದಿರುವುದು ಇಲ್ಲಿ ಗಮನಿಸಬಹುದಾದ ಮತ್ತೊಂದು ಮಹತ್ವದ ವಿಚಾರವಾಗುತ್ತದೆ. ಅವರ ಆತ್ಮವಿಶ್ವಾಸ ಅನುಪಮವಾದುದು. ಈ ನಿಟ್ಟಿನಲ್ಲಿ ತಮಿಳರಿಂದ ನಾವು ಕಲಿಯಬೇಕಾದ ಪಾಠವಿದೆಯಾದರೂ, ಇದೀಗ ತಮ್ಮ ಭಾಷೆಗೆ ಮಾತ್ರ ವಿಶೇಷ ಸ್ಥಾನಮಾನ ಗಿಟ್ಟಿಸಿಕೊಂಡಿರುವ ಅವರ ಆತುರ ಪ್ರಶ್ನಾರ್ಹವಾಗಿದೆ. ತಮಿಳು ಭಾಷಾವಾದಿಗಳ ಈ ಆತುರಕ್ಕೆ ಹಿಂದಿಯ ಬಗೆಗೆ ಅವರಿಗಿರುವ ಪೈಪೋಟಿಯ ಹಿನ್ನೆಲೆಯೂ ಕಾರಣವೆಂಬುದು ಇಲ್ಲಿ ಬಹುಮುಖ್ಯವಾಗುತ್ತದೆ. ತಮಿಳು ಸಾಹಿತ್ಯ ಪರಂಪರೆಗಿರುವ ಪ್ರಾಚೀನ ಇತಿಹಾಸ ಅಥವಾ ಸಮೃದ್ಧ ಅಭಿಜಾತ ಸಾಹಿತ್ಯದ ಗಟ್ಟಿ ನೆಲೆ, ಹಿಂದಿ ಭಾಷೆಗಿಲ್ಲವಾದರೂ ರಾಜಕೀಯ ಬೆಂಬಲ ಮತ್ತು ಹೆಚ್ಚಿನ ಜನಸಂಖ್ಯೆಯಿರುವ ರಾಜ್ಯಗಳ ಭಾಷೆ ಎಂಬುದರಿಂದ ಅದು ರಾಷ್ಟ್ರಭಾಷೆಯಾಗಿ ಮೆರೆಯುತ್ತಿತ್ತು. ಈಗ ಬದಲಾಗಿರುವ ಸಮಕಾಲೀನ ರಾಜಕೀಯ ವಾಸ್ತವಕ್ಕನುಸಾರವಾಗಿ ತಮಿಳುನಾಡಿನ ರಾಜಕಾರಣಿಗಳು ತಮ್ಮ ಭಾಷೆಯ ಮಹತ್ವವನ್ನು ಸ್ಥಾಪಿಸಲು ರಭಸದಿಂದ ಮುಂದಾಗಿದ್ದಾರೆ. ಈ ಸಂದರ್ಭದಲ್ಲಿ ಮಂದಗಾಮಿಗಳಾದ ಕನ್ನಡ ನಾಡಿನ ನಮ್ಮ ರಾಜಕಾರಣಿಗಳ ನೆನಪಾದರೆ ಅಪ್ರಸ್ತುತವಾಗಲಾರದು.

'ಕ್ಲಾಸಿಕಲ್' ಎಂಬುದು ಯುರೋಪಿನ ಪ್ರಾಚೀನ ಸಂಸ್ಕೃತಿಯನ್ನು ಗುರುತಿಸಲು ಬಳಸಲಾಗುವ ಒಂದು ಶಾಸ್ತ್ರೀಯ ಪರಿಕಲ್ಪನೆಯಾಗಿದ್ದು, ಗ್ರೀಕ್ ಮತ್ತು ರೋಮನ್ ಪರಂಪರೆಯ ಹಿನ್ನೆಲೆ ಅದಕ್ಕಿದೆ. ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗೆ ಸಂಬಂಧಿಸಿ ಕ್ರಿಸ್ತಪೂರ್ವ ಕಾಲದಿಂದಲೂ ಅಸ್ತಿತ್ವದಲ್ಲಿರುವ ಅಭಿಜಾತ ಪರಂಪರೆಯನ್ನು 'ಕ್ಲಾಸಿಕಲ್' ಎಂದು ಹೇಳುವುದುಂಟು. ಪ್ರಾಚೀನ ಸಾಹಿತ್ಯ, ಕಲೆ, ಶಿಲ್ಪ ಮುಂತಾದ ಹಲವು ಪ್ರಕಾರಗಳಲ್ಲಿ ಈ ಕ್ಲಾಸಿಕಲ್ ಶೈಲಿಯನ್ನು ಉಲ್ಲೇಖಿಸಲಾಗುತ್ತದೆ. ಯುರೋಪಿನಲ್ಲಿ ಹದಿನೇಳು ಹದಿನೆಂಟನೆ ಶತಮಾನದಲ್ಲಿ ನಿಯೋಕ್ಲಾಸಿಕಲ್ ಪರಂಪರೆಯನ್ನು ಕಾಣುತ್ತೇವೆ. ಸ್ಥೂಲವಾಗಿ ಹೇಳುವುದಾದರೆ ರೊಮ್ಯಾಂಟಿಕ್ ಶೈಲಿಗೆ ಪ್ರತಿಯಾಗಿ ಕ್ಲಾಸಿಕಲ್ ಪರಿಕಲ್ಪನೆಯನ್ನು ಅಲ್ಲಿ ಬಳಸಲಾಗಿದೆ. ಹೀಗೆ ಶಾಸ್ತ್ರೀಯ ಅರ್ಥದಲ್ಲಿ ತಮಿಳಿಗೆ ಕ್ಲಾಸಿಕಲ್ ಭಾಷಾ ಪಟ್ಟ ಕಟ್ಟುವುದು ಬಹುಶಃ ತಮಿಳು ರಾಜಕಾರಣಿಗಳ ಗ್ರಹಿಕೆ ಇರಲಾರದು. ಸಂಸ್ಕೃತವನ್ನು ಬಿಟ್ಟರೆ, ದೀರ್ಘವಾದ ಪ್ರಾಚೀನ ಅಭಿಜಾತ ಸಾಹಿತ್ಯ ಪರಂಪರೆ ತಮಿಳಿಗಿರುವುದು ನಿಜವಾದರೂ ಸಾವಿರಾರು ವರ್ಷಗಳ ಪ್ರೌಢಸಾಹಿತ್ಯ ಪರಂಪರೆ ಕನ್ನಡ ಭಾಷೆಗೂ ಇದೆ. ಪ್ರಾಚೀನ ಸಾಹಿತ್ಯ ಪರಂಪರೆಯನ್ನೇ ಮಾನದಂಡವಾಗಿ ಬಳಸಿದರೆ ನಮ್ಮ ಭಾಷೆಯನ್ನು ಈ ನೆಲೆಯಲ್ಲಿಯೇ ಗುರುತಿಸಬೇಕಾಗುತ್ತದೆ. ಭಾಷಾ ವಿಜ್ಞಾನಿಗಳು ದ್ರಾವಿಡ ಭಾಷೆಗಳಲ್ಲಿ ತುಳುವ ಭಾಷೆ ಅತ್ಯಂತ ಪ್ರಾಚೀನವೆಂದು ಹೇಳುತ್ತಾರೆ. ಹೀಗಿರುವಾಗ ಕೇವಲ ತಮಿಳಿಗೆ ಅಗ್ರ ಮನ್ನಣೆ ಏಕೆ ? ಎಂಬ ಪ್ರಶ್ನೆ ಸಹಜವಾಗಿ ಉದ್ಭವಿಸಿದೆ.

ಆದರೆ ಹೀಗೆ ಭಾಷೆಗಳ ನಡುವೆ ಪೈಪೋಟಿಯ ಸ್ಪರ್ಧೆ ಹುಟ್ಟುಹಾಕುವುದು ದೇಶದ ಐಕ್ಯತೆಯ ದೃಷ್ಟಿಯಿಂದ ವಿವೇಕದ ವಿಚಾರವಲ್ಲ. ಒಕ್ಕೂಟ ರಾಷ್ಟ್ರವಾದ ಭಾರತದಲ್ಲಿ ಭಾಷಾ ನೀತಿಯ ಬಗೆಗೆ ಕಟ್ಟೆಚ್ಚರ ವಹಿಸದಿದ್ದರೆ ಅನಾಹುತಕ್ಕೆ ದಾರಿಯಾಗುತ್ತದೆ. ಈಗಾಗಲೇ ಕನ್ನಡದ ಹಲವು ಪ್ರಮುಖ ಬರೆಹಗಾರರು, ವಿದ್ವಾಂಸರು, ಇಂಗ್ಲಿಷ್ ವಾರಪತ್ರಿಕೆಯೊಂದರಲ್ಲಿ ನಮ್ಮ ಭಾಷೆಗೆ ಅನ್ಯಾಯವಾಗಿರುವುದಾಗಿ ಹೇಳಿಕೊಂಡಿದ್ದಾರೆ. ತಮಿಳಿಗೆ ಸಿಕ್ಕಿರುವ ಮಾನ್ಯತೆ ತಮ್ಮ ಭಾಷೆಗೂ ದೊರೆಯಬೇಕೆಂಬ ಅವರ ವಾದ ನ್ಯಾಯವಾಗಿಯೇ ಇದೆ. ಇಂತಹ ವಿವಾದ ಹುಟ್ಟಲು ಕೇಂದ್ರಸರ್ಕಾರದ ದುರ್ಬಲ ನೀತಿಯೇ ಕಾರಣವಾದಂತಾಯಿತು. ಈ ವಿಚಾರದಲ್ಲಿ ಯು.ಪಿ.ಎ. ಸರ್ಕಾರ ಎಡವಿರುವುದು ಅದಕ್ಕಿನ್ನೂ ಅರಿವಿಗೆ ಬಂದಿಲ್ಲ. ಏಕೆಂದರೆ ಬೆಂಕಿಯ ಕಿಡಿ ತಾಗಿದ ಕ್ಷಣದಲ್ಲಿ ಯಾರ ಅರಿವಿಗೂ ಗೋಚರಿಸುವುದಿಲ್ಲ. ಜ್ವಾಲೆ ಹರಡಿದಾಗ ಕಾಲ ಮಿಂಚಿ ಹೋಗಿರುತ್ತದೆ.

ವಿಶೇಷ ಕಾರಣಗಳಿಗಾಗಿ ಕೆಲವು ಭಾಷೆಗಳಿಗೆ ಭಾರತದಂತಹ ಬಹುಭಾಷಾ ರಾಷ್ಟ್ರದಲ್ಲಿ ಹೆಚ್ಚಿನ ಪ್ರೋತ್ಸಾಹ ಮತ್ತು ಮಾನ್ಯತೆ ಸಿಗಬೇಕಾಗುತ್ತದೆ, ಎಂಬ ವಿಚಾರವನ್ನು ನಾವು ಅಲ್ಲಗಳೆಯುವಂತಿಲ್ಲ. ಆದರೆ ಇಂತಹ ಪ್ರೋತ್ಸಾಹ ಹಾಗೂ ಮಾನ್ಯತೆಯ ಮಾನದಂಡಗಳಾವುವು ? ಎಂಬುದರ ಬಗೆಗೆ, ನಿಖರವಾದ ತರ್ಕಬದ್ಧ ನೀತಿ ಇರುವುದು ಅಗತ್ಯವಾಗುತ್ತದೆ. ಸಂಸ್ಕೃತ, ಪ್ರಾಕೃತ, ಪಾಳಿಯಂತಹ ಪ್ರಾಚೀನ ಭಾಷೆಗಳಲ್ಲಿ ಅಗಾಧ ಸಾಹಿತ್ಯ, ಶಾಸ್ತ್ರ ಸಂಪತ್ತು ಹುದುಗಿದೆ. ಈ ಭಾಷೆಗಳು ಕೇವಲ ಗ್ರಂಥಸ್ಥ ಭಾಷೆಗಳು. ಆಡುಮಾತುಗಳಾಗಿ ಬಳಕೆಯಾಗುತ್ತಿಲ್ಲ. ಯಾವುದೇ ಒಂದು ನಿರ್ದಿಷ್ಟ ರಾಜ್ಯದ ಅಧಿಕೃತ ಭಾಷೆಗಳಲ್ಲ. ಆದುದರಿಂದ ಕೇಂದ್ರ ಸರ್ಕಾರವು ಈ ಭಾಷೆಗಳಲ್ಲಿರುವ ಜ್ಞಾನ ಸಂಪತ್ತನ್ನು ರಕ್ಷಿಸಲು ಮತ್ತು ಜೀವಂತ ಭಾಷೆಗಳಿಗೆ ಅವನ್ನು ವರ್ಗಾಯಿಸಲು ತಕ್ಕ ಏರ್ಪಾಡು ಮಾಡಬಹುದಾಗಿದೆ. ಈ ಭಾಷೆಗಳ ಅಧ್ಯಯನವನ್ನು ಸಂಶೋಧನೆಯ ದೃಷ್ಟಿಯಿಂದ ನಡೆಸಲು ನೆರವು ನೀಡಬೇಕಾಗುತ್ತದೆ. ಇಂಗ್ಲಿಷರ ಆಳ್ವಿಕೆಯಿದ್ದಾಗಲೂ ಸಂಸ್ಕೃತ ಭಾಷೆಗೆ ವಿಶೇಷ ನೆರವು ದೊರೆತಿದೆ. ಸಂಸ್ಕೃತ ಪರವಾದ ಈ ನೆರವು ನ್ಯಾಯವಾದುದು.




ಇನ್ನು ಕೆಲವು ಭಾಷೆಗಳಿವೆ. ಆಡುಮಾತುಗಳಾಗಿ ಬಳಕೆಯಲ್ಲಿದ್ದರೂ ಬರೆಹ ಪರಂಪರೆಯಿಲ್ಲ. ಅಲ್ಪಸ್ವಲ್ಪ ಲಿಖಿತ ಸಾಹಿತ್ಯವಿದ್ದರೂ ಪ್ರತ್ಯೇಕ ಲಿಪಿ ಇರುವುದಿಲ್ಲ. ಆದರೆ ಸಮೃದ್ಧವಾದ ಜಾನಪದ ಪರಂಪರೆ ಇರುತ್ತದೆ. ಯಾವುದೇ ಒಂದು ರಾಜ್ಯದ ಅಧಿಕೃತ ಭಾಷೆಯ ಸ್ಥಾನಮಾನಗಳು ಇಂತಹ ಭಾಷೆಗಳಿಗೆ ಇಲ್ಲದಿರುವಾಗ ಅವುಗಳಿಗೆ ಪ್ರೋತ್ಸಾಹ, ನೆರವು, ತೀರಾ ಅತ್ಯಗತ್ಯವಾಗಿದೆ. ಕರ್ನಾಟಕದ ಲಕ್ಷಾಂತರ ಜನಗಳು ಮಾತನಾಡುವ ತುಳು ಮತ್ತು ಕೊಡವ ಭಾಷೆಗಳು ಇದಕ್ಕೆ ಅತ್ಯುತ್ತಮ ಉದಾಹರಣೆಯಾಗಿವೆ. ಉರ್ದುವಿನಂತಹ ಭಾಷೆ ರಾಷ್ಟ್ರವ್ಯಾಪಿಯಾಗಿ ಎಲ್ಲ ರಾಜ್ಯಗಳಲ್ಲಿ ಬಳಕೆಯಲ್ಲಿದೆ; ಆದರೆ ಎಲ್ಲಿಯೂ ಬಹುಸಂಖ್ಯಾತರ ಭಾಷೆಯಾಗಿಲ್ಲವಾದುದರಿಂದ ಅಧಿಕೃತ ರಾಜ್ಯಭಾಷೆಯಲ್ಲ. ಉರ್ದುವಿಗೆ ಶ್ರೇಷ್ಠ ಸಾಹಿತ್ಯ ಪರಂಪರೆಯೂ ಉಂಟು. ಈ ಪಟ್ಟಿಗೆ ಸೇರಬಹುದಾದ ನೂರಾರು ಭಾಷೆಗಳು ಭಾರತದಲ್ಲಿವೆ. ಈ ಭಾಷೆಗಳನ್ನು ಉಳಿಸಿ ಬೆಳೆಸುವ ಕರ್ತವ್ಯ ಆಯಾ ರಾಜ್ಯಗಳಿಗೆ ಮಾತ್ರವಲ್ಲ, ಕೇಂದ್ರ ಸರ್ಕಾರಕ್ಕೂ ಇದೆ. ಇಂತಹ ಅಲ್ಪಸಂಖ್ಯಾತರ ಭಾಷೆಗಳಿಗೆ ನಮ್ಮ ರಾಜ್ಯಾಂಗದಲ್ಲಿ ಸ್ಪಷ್ಟವಾಗಿ ವಿಶೇಷ ರಕ್ಷಣೆ ನೀಡಲಾಗಿದೆಯಾದರೂ ಕಾರ್ಯರೂಪಿಯಾಗಿ ಅದು ಜಾರಿಯಾಗಿಲ್ಲ.

ಮರಾಠಿ, ತಮಿಳು, ಹಿಂದಿ, ತೆಲುಗು, ಬಂಗಾಳಿ, ಕನ್ನಡವೇ ಮುಂತಾದ ಅಧಿಕೃತ ಭಾಷೆಗಳಿಗೆ ತಮ್ಮದೇ ಆದ ರಾಜ್ಯ ಸರ್ಕಾರಗಳ ಬೆಂಬಲವಿದೆ. ಇದೀಗ ಈ ಎಲ್ಲ ಅಧಿಕೃತ ಭಾಷೆಗಳನ್ನು ರಾಷ್ಟ್ರಭಾಷೆಗಳೆಂದೇ ಪರಿಗಣಿಸಲಾಗುತ್ತಿದೆ. ಈ ಗುಂಪಿನ ಭಾಷೆಗಳಲ್ಲಿ ಯಾವುದೇ ಒಂದು ಭಾಷೆಯನ್ನು ಪ್ರತ್ಯೇಕಿಸಿ, ವಿಶೇಷ ಮಾನ್ಯತೆಯ ಪ್ರೋತ್ಸಾಹ ಕೊಡುವುದು ತಾರತಮ್ಯವಾಗುತ್ತದೆ. ಹಿಂದಿ ಮತ್ತು ಇದೀಗ ತಮಿಳು ಭಾಷೆಗಳಿಗೆ ದೊರೆಯುತ್ತಿರುವ ಮಾನ್ಯತೆಯ ಬಗೆಗೆ ತಕರಾರು ಏಳುವುದು, ಇಂತಹ ವಾಸ್ತವ ಹಿನ್ನೆಲೆಯಿಂದ ಸಾಂಸ್ಕೃತಿಕ ಒತ್ತಾಸೆಯಿಲ್ಲದೆ ಕೇವಲ ರಾಜಕೀಯ ಕಾರಣಕ್ಕಾಗಿ ನಿರ್ಧಾರ ತೆಗೆದುಕೊಂಡಾಗ ಸಹಜವಾಗಿಯೇ ಪ್ರಶ್ನಾರ್ಹವಾಗುತ್ತದೆ. ಆದರೆ ನಮ್ಮ ದೇಶದಲ್ಲಿ ರಾಜಕೀಯ ಲಾಭವೇ ಎಲ್ಲ ನೀತಿಯ ಮೂಲ ಮಾನದಂಡವಾಗಿರುವುದರಿಂದ, ಅಧಿಕಾರದಲ್ಲಿರುವ ರಾಜಕೀಯ ಪಕ್ಷಗಳ ಹಿತಾಸಕ್ತಿಗಳಿಗೆ ತಕ್ಕಂತೆ ಇಂತಹ ತೀರ್ಮಾನಗಳಾಗುತ್ತಿವೆ, ಎಂಬುದು ನೋವಿನ ಸಂಗತಿಯಾಗಿದೆ. ಚರಿತ್ರೆ, ಸಂಸ್ಕೃತಿ, ಸಾಹಿತ್ಯ, ಕಲೆ – ಇವೆಲ್ಲವೂ ಪಕ್ಷ ರಾಜಕಾರಣದ ಪಗಡೆಯಾಟದಲ್ಲಿ ದಾಳಗಳಾಗಿ ಬಳಕೆಯಾದರೆ ದೇಶದಲ್ಲಿ ಐಕ್ಯತೆ ಮೂಡುವುದು ಹೇಗೆ ತಾನೆ ಸಾಧ್ಯ ?

ತಮಿಳಿಗೆ ಈಗ ಅಗ್ರಪಟ್ಟ ದೊರೆತಿದೆ. ಮಹಾಭಾರತ ಯುದ್ಧ ಕಾಲದಲ್ಲಿ ಭೀಷ್ಮಾಚಾರ್ಯರಿಗೆ ಸೇನಾಪತಿ ಪಟ್ಟ ಕಟ್ಟಿ ಹಿಗ್ಗುತ್ತಿದ್ದ ಕೌರವೇಶ್ವರನನ್ನು ಕುರಿತು, ಪಂಪನ ಕರ್ಣ ಒಂದು ಸವಾಲು ಹಾಕುತ್ತಾನೆ; ''ಪಟ್ಟಮೇಂಗಳ ಪಾರಿತಿಂಬುದೆ ಪಗೆಯನ್... ?'', ಎಂದು ಕೇಳುವ ಕರ್ಣನಂತೆ ಕನ್ನಡಿಗರು ತಮ್ಮ ಸರದಿಗಾಗಿ ಕಾಯಬೇಕಾಗಿದೆ.

ಡಾ. ಕೆ. ಮರುಳಸಿದ್ದಪ್ಪ
ನಂ. ೧೩೭, ೧೨ನೇ ತಿರುವು, ಜೆ. ಪಿ. ನಗರ, ೨ನೇ ಹಂತ,
ಬೆಂಗಳೂರು – ೫೬೦ ೦೭೮

ಅಬ್ದುಲ್ ಮಜೀದ್ ಖಾನ್

**ಲೋಕವಿನಾಶಕ್ಕೆ ಈಗ ಮತ್ತೊಂದು ಮಹಾಯುದ್ಧದ ಅಗತ್ಯವೇ ಇಲ್ಲ. ಏಕೆಂದರೆ ಮಹಾಸಮರಕ್ಕಿಂತಲೂ ಅಧಿಕ ಘಾತುಕವೆನಿಸುವ ಸಣ್ಣ ಪುಟ್ಟ ಯುದ್ಧಗಳು ಏಕಕಾಲಕ್ಕೆ ಪ್ರಪಂಚದ ಹಲವು ದೇಶಗಳ ನಡುವೆ ನಡೆಯುತ್ತಲೇ ಇವೆ. ಜಾತೀಯತೆ, ಪ್ರಾಂತೀಯತೆ, ರಾಷ್ಟ್ರೀಯತೆ, ಮತಾಂಧತೆ, ಸೈದ್ಧಾಂತಿಕ ಶ್ರೇಷ್ಠತೆ, ಪ್ರತ್ಯೇಕತೆ ಅಥವಾ ಇನ್ಯಾವುದೋ ಬಾಧ್ಯತೆಗಾಗಿ ಭಯೋತ್ಪಾದಕತೆಯನ್ನು ಅನುಸರಿಸುವ ನೂತನ ವಿಧಾನ ಅಂತಿಮವಾಗಿ ಅಣುಬಾಂಬ್ ದಾಳಿಯಲ್ಲಿ ಮುಕ್ತಾಯಗೊಂಡರೆ ಏನಾಗಬಹುದೆಂದು ಚಿಂತಿಸಬೇಕಾದ ಅಗತ್ಯ ಹಿಂದಿಗಿಂತಲೂ ಇಂದು ತೀವ್ರವಾಗಿದೆ.**

# ಒಂದು ಬಾಂಬ್ ಮಾಡುವ ವಿಧ್ವಂಸಕ ಕೆಲಸ

ವಿಜ್ಞಾನ ಮತ್ತು ತಂತ್ರಜ್ಞಾನಗಳು ಜನಕೋಟಿಯ ಒಳಿತಿಗಾಗಿ ಉಪಯೋಗಿಸಲ್ಪಡುವ ಮೊದಲೇ ವಿನಾಶಕಾರಿ ಉದ್ದೇಶಗಳಿಗಾಗಿ ಬಳಸಲಾಗಿದ್ದುದು ಮಾನವ ಇತಿಹಾಸದ ಅತ್ಯಂತ ದೊಡ್ಡ ದುರಂತ. ಆತ್ಮರಕ್ಷಣೆಯ ಬದಲು ಅಧಿಕಾರ ಮತ್ತು ವಲಯ ವಿಸ್ತರಣಾ ದೃಷ್ಟಿಯಿಂದ ಆಕ್ರಮಣಕಾರಿ ನೀತಿಯನ್ನು ಪಾಲಿಸುವ ಪ್ರವೃತ್ತಿ ಮನುಷ್ಯ ಜೀವನದ ಸಮಸ್ಯೆಗಳಿಗೆ ಪರಿಹಾರಗಳನ್ನು ರೂಪಿಸುವ ಬದಲು ಅಶಾಂತಿ, ಅಹಿಂಸೆ, ಅತ್ಯಾಚಾರಗಳಿಗೆ ಉತ್ತೇಜನ ನೀಡಿದುದರಿಂದ, ಅವು ಮಾಮೂಲು ಸ್ಥಿತಿಗೆ ಹಿಂದಿರುಗಲಾಗದ ಹಂತವನ್ನು ತಲುಪಿವೆ ಎಂದರೆ ತಪ್ಪಾಗಲಾರದು.

ಲೋಕವಿನಾಶಕ್ಕೆ ಈಗ ಮತ್ತೊಂದು ಮಹಾಯುದ್ಧದ ಅಗತ್ಯವೇ ಇಲ್ಲ. ಏಕೆಂದರೆ ಮಹಾಸಮರಕ್ಕಿಂತಲೂ ಅಧಿಕ ಘಾತುಕವೆನಿಸುವ ಸಣ್ಣ ಪುಟ್ಟ ಯುದ್ಧಗಳು ಏಕಕಾಲಕ್ಕೆ ಪ್ರಪಂಚದ ಹಲವು ದೇಶಗಳ ನಡುವೆ ನಡೆಯುತ್ತಲೇ ಇವೆ. ಜಾತೀಯತೆ, ಪ್ರಾಂತೀಯತೆ, ರಾಷ್ಟ್ರೀಯತೆ, ಮತಾಂಧತೆ, ಸೈದ್ಧಾಂತಿಕ ಶ್ರೇಷ್ಠತೆ, ಪ್ರತ್ಯೇಕತೆ ಅಥವಾ ಇನ್ಯಾವುದೋ ಬಾಧ್ಯತೆಗಾಗಿ ಭಯೋತ್ಪಾದಕತೆಯನ್ನು ಅನುಸರಿಸುವ ನೂತನ ವಿಧಾನ ಅಂತಿಮವಾಗಿ ಅಣುಬಾಂಬ್ ದಾಳಿಯಲ್ಲಿ ಮುಕ್ತಾಯಗೊಂಡರೆ ಏನಾಗಬಹುದೆಂದು ಚಿಂತಿಸಬೇಕಾದ ಅಗತ್ಯ ಹಿಂದಿಗಿಂತಲೂ ಇಂದು ತೀವ್ರವಾಗಿದೆ.

ಆಗ್ಗೆ ೬೪ ವರ್ಷಗಳ ಹಿಂದೆ ಮೊಟ್ಟಮೊದಲ ಅಣುಬಾಂಬ್ ಆಗಸ್ಟ್ ೬, ೧೯೪೫ರಂದು ಜಪಾನಿನ ಹಿರೋಶಿಮಾ ನಗರದ ಮೇಲೂ, ಎರಡನೆಯದು ಆಗಸ್ಟ್ ೯, ೧೯೪೫ರಂದು ನಾಗಸಾಕಿಯ ಮೇಲೂ ಬಿದ್ದ ನಂತರ ಇಡೀ ಜಗತ್ತು ದಿಗ್ಭ್ರಾಂತವಾಗಿತ್ತು. ಮಾನವೀಯ ಹೃದಯಗಳು ತಲ್ಲಣಿಸಿದವು. ಆ ನಂತರ ಜ್ಞಾನಿಗಳು, ವಿಜ್ಞಾನಿಗಳು, ದಾರ್ಶನಿಕರು, ಶಾಂತಿಪ್ರಿಯರು, ಮಾನವತಾವಾದಿಗಳು, ಅಣುಬಾಂಬ್‌ಗಳ ನಿರ್ಮಾಣ ಮತ್ತು ಪ್ರಯೋಗವನ್ನು ಕಟುವಾಗಿ ವಿರೋಧಿಸುತ್ತ, ಖಂಡಿಸುತ್ತ ಬಂದಿದ್ದಾರೆ. ಈ ಭಯಂಕರ ಅಣ್ವಸ್ತ್ರ ದಾಳಿಗಳ ಅಗತ್ಯವಿತ್ತೇ? ಎಂಬ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಕೆಲವರು ಅವುಗಳ ಬಳಕೆ ಮಾನವ ಜನಾಂಗದ ವಿರುದ್ಧ ಎಸಗಲಾದ ಅಪರಾಧವೆಂದು ಒತ್ತಿ ಹೇಳಿದರು. ಇನ್ನು ಕೆಲವರು ಅವುಗಳ ಭೀಕರತೆಯನ್ನು ಒಪ್ಪಿಕೊಂಡರೂ ಜಪಾನಿಯರು ತಮ್ಮ ನಿಯಂತ್ರಣದಲ್ಲಿದ್ದ ಪ್ರಪಂಚದ ಬಹುಭಾಗಗಳಲ್ಲಿ ಆಗಾಗ್ಗೆ ಅತ್ಯಂತ



ಬರ್ಬರತೆಯಿಂದ ವರ್ತಿಸುತ್ತಿದ್ದುದರಿಂದ, ಆ ಕಾರಣ ತಿಂಗಳುಗಟ್ಟಲೆ ಸಾಗಬಹುದಾದ ಯುದ್ಧವೊಂದರಲ್ಲಿ ಮುಂದುವರೆಯುವ ಅಪಾರ ನರಳುವಿಕೆ ಮತ್ತು ರಕ್ತಪಾತಗಳನ್ನು ಅಣ್ವಸ್ತ್ರದ ಬಳಕೆ ತಕ್ಷಣ ಕೊನೆಗಾಣಿಸಿತು, ಎಂದು ವಾದಿಸಿದರು! ಏನೇ ಆದರೂ ಒಂದು ವಿಷಯ ನಿರ್ವಿವಾದ. ಅದೇನೆಂದರೆ, ಯುದ್ಧದಿಂದ ನಾಗರಿಕತೆ ನಾಶವಾಗುತ್ತದೆಂಬ ದಿಗಿಲನ್ನು ಹುಟ್ಟಿಸುವಂಥ ನವ ಯುಗವೊಂದರ ಪರಿಚಯವನ್ನು ಅಣುಬಾಂಬ್ ಮಾಡಿಸಿಕೊಟ್ಟಿತು.

ಹಿರೋಷಿಮಾ ಮತ್ತು ನಾಗಸಾಕಿಗಳ ಮೇಲೆ ಅಣುಬಾಂಬುಗಳನ್ನು ಎಸೆದು ಆಗಲೇ ಮೂರು ವಾರಗಳಾದರೂ ವಿನಾಶಕ್ಕೆ ಗುರಿಯಾದ ಆ ನಗರಗಳ ಅಥವಾ ಅಸಂಖ್ಯಾತ ಬಲಿಯಾಳುಗಳ ಗತಿ ಏನಾಯಿತೆಂಬ ಬಗ್ಗೆ ಮಾಹಿತಿ ದೊರಕಿಸದೆ ಇದ್ದರೂ, ಹೊಸ ಆಯುಧದ ಬಳಕೆ ಮತ್ತು ಅದರ ಸಾಧಾರಣ ಶಕ್ತಿಗಾಗಿ ಮಾಡಲಾಗಿದ್ದ ಸಿದ್ಧತೆಗಳ ಬಗ್ಗೆ ಅಮೆರಿಕನ್ ವೈರ್‌ಲೆಸ್ ತುಂಬ ವ್ಯಾಪಕ ಪ್ರಸಾರ ಮಾಡಿತ್ತು. ಆದರೆ ಎಡೆಬಿಡದ ಅಣ್ವಕ ಪ್ರಹಾರಗಳ ಪರಿಣಾಮ ಭಯಂಕರ ಭವಿಷ್ಯವಾಣಿಗೆ ಮಾತ್ರ ಸೀಮಿತವಾಗಿತ್ತು. "ಸ್ಫೋಟದ ಕ್ಷೇತ್ರದ ಸುತ್ತಮುತ್ತಲ ವಿದ್ಯುತ್ ವಿಕಿರಣಕ್ರಿಯಾಶಕ್ತಿ ಕೊನೆಯ ಪಕ್ಷ ೭೦ವರ್ಷಗಳವರೆಗೆ ಎಲ್ಲ ಜೀವರಾಶಿಗಳ ಅಸ್ತಿತ್ವವನ್ನು ತಡೆಹಿಡಿಯುವುದು'' ಎಂದು ಸ್ವಲ್ಪ ಹೆಮ್ಮೆಯಿಂದಲೇ ಹೇಳಿಕೊಳ್ಳಲಾಗಿತ್ತು.

ಮೃತರಾದವರ ಒಟ್ಟು ಸಂಖ್ಯೆ ಎಷ್ಟೆಂಬುದು ಯಾರಿಗೂ ಗೊತ್ತಿರಲಿಲ್ಲ. ಕೆಲವರು ಐವತ್ತು ಸಾವಿರ ಎಂದರು, ಮತ್ತೆ ಕೆಲವರು ಎರಡು ಲಕ್ಷವೆಂದು ಒತ್ತಿಹೇಳಿದರು. ಅಲ್ಲದೆ ಅಷ್ಟೇ ಅಥವಾ ಅದಕ್ಕೂ ಹೆಚ್ಚು ಜನ ಗಾಯಗೊಂಡಿದ್ದರು. ಆರಂಭದಲ್ಲಿ ಹಾನಿಯಿಂದ ಪಾರಾದರೆಂದು ಕಂಡು ಬಂದವರಲ್ಲಿ ಪ್ರತಿದಿನವೂ ಸಾವಿರಾರು ಮಂದಿ ವಿಚಿತ್ರ, ಹೊಸ ಹಾಗೂ ವಿವರಿಸಲಾಗದ ರೋಗಲಕ್ಷಣಗಳಿಂದ ಸಾಯತೊಡಗಿದರು.



ಸೆಪ್ಟೆಂಬರ್ ೧ರ ನಂತರ ಮಾತ್ರ 'ಗಾಯ್‌ಮುಚೋ' (ಜಪಾನಿನ ವಿದೇಶಾಂಗ ವ್ಯವಹಾರಗಳ ಸಚಿವಾಲಯ) ಹಿರೋಷಿಮಾದಲ್ಲಿ ಬಾಂಬ್ ಸ್ಫೋಟಿಸಿದ ತರುವಾಯ ತೆಗೆದ ಚಿತ್ರಗಳನ್ನು ಪ್ರಕಟಿಸಿತು. ಅದುವರೆಗೆ ಹೇಳಲಾಗಿದ್ದನ್ನು ಮತ್ತು ಕಲ್ಪಿಸಿಕೊಂಡಿದ್ದನ್ನು ಮೀರಿ, ಬೂದು ಬಣ್ಣದ ಮರುಭೂಮಿ ಆಗಿದ್ದ ಮತ್ತು ಬಿರುಕುಗಳ ಜಾಲವಾಗಿದ್ದ ಅಲ್ಲಿಯ ನೆಲ ಆಳದಲ್ಲಿ ಕದಲುತ್ತಿತ್ತು. ಕ್ರಿಸ್ತಶಕ ೭೯ರಲ್ಲಿ ಇಟಲಿಯ ನಗರ 'ಪಾಂಪೇಯ್' ವೆಸುವಿಯಸ್ ಜ್ವಾಲಾಮುಖಿಯ ಪ್ರಕೋಪಕ್ಕೆ ಬಲಿಯಾಗಿ ನಿಗಿನಿಗಿ ಉರಿಯುತ್ತಿದ್ದ ಕೆಂಡಗಳ ಸುರಿಮಳೆ ಮತ್ತು ಕಾದ ಕೆಂಪು ಲಾವಾದ ಪ್ರವಾಹಕ್ಕೆ ಸಿಲುಕಿ ಸಾಯುತ್ತಿದ್ದವರ ಆರ್ತ ಚೀತ್ಕಾರಗಳು ಸ್ತಬ್ಧವಾಗಿ ಶತಮಾನಗಳೇ ಕಳೆದಿದ್ದವು. ಇಂದು ಹಿರೋಷಿಮಾದಲ್ಲಿ ಪ್ರಜ್ವಲಿಸುವ ಕೆಂಡಗಳ ಮಳೆಯಾಗಲೀ ಕೆಂಪು ಲಾವಾದ ಪ್ರವಾಹವಾಗಲೀ ಇರಲಿಲ್ಲವಾದರೂ ಇಲ್ಲಿನ ಗಾಳಿ ಹಠಾತ್ತನೆ ಹಲವು ಸಾವಿರ ಡಿಗ್ರಿಗಳಷ್ಟು ಕಾದುಹೋಗಿ, ಪಾಂಪೇಯ್ ನಗರದ ಚಿತ್ರವನ್ನು ಇನ್ನೂ ವಿಶಾಲ ಪ್ರಮಾಣದಲ್ಲಿ ನೆನಪಿಸಿಕೊಳ್ಳುವಂತೆ ಮಾಡಿತ್ತು.

'ಸನ್ನಿವೇಶ ಭಯಾನಕ... ನಗರದ ೯೦% ಭಾಗ ನೆಲಸಮ... ಎಲ್ಲ ಆಸ್ಪತ್ರೆಗಳು ಧ್ವಂಸ ಅಥವಾ ಕ್ಷತಗ್ರಸ್ತ... ಎರಡು ಹಂಗಾಮಿ ಆಸ್ಪತ್ರೆಗಳಿಗೆ ಭೇಟಿ ನೀಡಿದೆ... ಹೇಳಲಸಾಧ್ಯ ಪರಿಸ್ಥಿತಿ... ಬಾಂಬ್ ಪರಿಣಾಮಗಳು ರಹಸ್ಯಗರ್ಭಿತ... ಮೇಲ್ನೋಟಕ್ಕೆ ಚೇತರಿಸಿಕೊಳ್ಳುತ್ತಿರುವಂತೆ ಕಾಣುವ ಬಹುಮಂದಿ ಬಲಿಯಾಳುಗಳು ಬಿಳಿರಕ್ತಕಣಗಳ ಅವನತಿ ಮತ್ತಿತರ ಆಂತರಿಕ ಗಾಯಗಳ ಕಾರಣ ಏಕಾಏಕಿ ಮರಳಿ ಕಾಯಿಲೆಗೆ ಗುರಿಯಾಗುತ್ತಿದ್ದಾರೆ... ಅಧಿಕ ಸಂಖ್ಯೆಯಲ್ಲಿ ಸಾವು ಸಂಭವಿಸುತ್ತಲೇ ಇದೆ... ನೆರೆಹೊರೆಯಲ್ಲಿ ಒಂದು ಲಕ್ಷಕ್ಕೂ ಹೆಚ್ಚು ಪೀಡಿತರು ಆಸ್ಪತ್ರೆಗಳಲ್ಲಿದ್ದಾರೆ... ಬ್ಯಾಂಡೇಜ್, ಔಷಧ ದ್ರವ್ಯಗಳ, ಅವಶ್ಯಕ ಸಾಮಗ್ರಿಗಳ ಕೊರತೆ ಅತ್ಯಧಿಕ... ನಗರದ ಕೇಂದ್ರಕ್ಕೆ ತಕ್ಷಣ ಪೂರೈಕೆಗಳನ್ನು ಪ್ಯಾರಾಚೂಟ್ ಮೂಲಕ ಒದಗಿಸುವಂತೆ ಸಂಬಂಧಪಟ್ಟ ಉನ್ನತ ಅಧಿಕಾರಿಗೆ ಮನವಿ ಮಾಡಿಕೊಳ್ಳಿ... ಹೇರಳ ಪ್ರಮಾಣದ ಬ್ಯಾಂಡೇಜ್, ಎಕ್ಕಿದ ಹತ್ತಿ, ಸುಟ್ಟ ಗಾಯಗಳಿಗೆ ಮುಲಾಮುಗಳು, ಸಲ್ಫಮೈಡ್‌ಗಳು, ರಕ್ತರಸ ಮತ್ತು ಪಾತ್ರಾಂತರ ಚೀಲಗಳು ತುರ್ತಾಗಿ ಬೇಕಾಗಿದೆ.. ತತ್‌ಕ್ಷಣ ಕಾರ್ಯಾಚರಣೆ ಅಗತ್ಯ...'

ಸೆಪ್ಟೆಂಬರ್ ೧ರ ಮುಂಜಾನೆ ರೆಡ್‌ಕ್ರಾಸ್‌ನ ಡಾ|| ಜುನಾಡ್‌ರನ್ನು ಒಳಗೊಂಡ ಒಂದು ವಿಚಾರಣಾ ಆಯೋಗ ಮಿಯಾಜಿಮಾ ದ್ವೀಪದಿಂದ ಹೊರಟಿತು. ತಮ್ಮ ಹೋಟೆಲ್‌ನಿಂದ ಅವರೆಲ್ಲರೂ ದಂಡೆಯುದ್ದಕ್ಕೂ ನಡೆದು ಒಂದು ಸಣ್ಣ ಬಂದರನ್ನು ತಲುಪಿದರು. ಮುಂಜಾವಿನ ಹಗುರ ಮತ್ತು ಚದುರಿದ ಬೆಳಕಿನಲ್ಲಿ ದೇವಾಲಯದ ಗೇಟಿನ ಸುವರ್ಣ ರಂಜಿತ ಮೇಲ್ಭಾಗದ ರಚನೆಗಳಿಗೆ ಒಳ ನುಗ್ಗುತ್ತಿದ್ದ ನೀರಿನ ಉಬ್ಬರ ಅಪ್ಪಳಿಸುತ್ತಿತ್ತು. ಇವರನ್ನು ಮುಖ್ಯ ಭೂಪ್ರದೇಶದಿಂದ ಬೇರ್ಪಡಿಸುತ್ತಿದ್ದ ಸಮುದ್ರ ಬಾಹುವನ್ನು ದಾಟಲು ಇವರು ನಾವೆಯೊಂದನ್ನು ಹತ್ತಿ ಕುಳಿತರು.

ಆಚೆ ದಡದಲ್ಲಿ ಒಂದು ಕಾರು ಇವರ ದಾರಿ ಕಾಯುತ್ತಿತ್ತು. ಡಾ|| ಜುನಾಡ್ ಇಬ್ಬರು ವ್ಯಾಖ್ಯಾಕಾರರ ನಡುವೆ ಕುಳಿತರು. ಅವರಲ್ಲೊಬ್ಬರು ಮಿಸ್ ಐಟೊ, ಕೆನಡಾದಲ್ಲಿ ಜನಿಸಿದವರು. ಇನ್ನೊಬ್ಬರು ಜಪಾನಿ ಪತ್ರಿಕೋದ್ಯೋಗಿ, ಸಂಯುಕ್ತ ಸಂಸ್ಥಾನಗಳಲ್ಲಿ ೨೦ ವರ್ಷ ಕಳೆದಿದ್ದರು. ಅವರಿಬ್ಬರೂ ಹಿರೋಷಿಮಾ ಒಂದು ಕಾಲಕ್ಕೆ ಹೇಗಿತ್ತೆಂಬ ಬಗ್ಗೆ ಮತ್ತು ಅದರ ಪ್ರಮುಖ ಚಟುವಟಿಕೆಗಳು ಹಾಗೂ ಅದರ ಭೌಗೋಳಿಕ ಪರಿಸರ ಕುರಿತು ಹೇರಳ ಮಾಹಿತಿ ನೀಡಿದರು.

ಗತದಿನಗಳಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಆ ಪಟ್ಟಣದ ಅಂದಿನ ವಾಸ್ತವತೆಯೊಡನೆ ಇಂದಿನ ವಾಸ್ತವತೆಯನ್ನು ಹೋಲಿಸಲು ಡಾ|| ಜುನಾಡ್‌ಗೆ ಅವರ ವಿವರಣೆಗಳು ಬೇಕಾಗಿದ್ದವು. ಕಣ್ಣು ಕೋರೈಸುವ, ಹುರಿದು ಹಾಕುವ, ಬೆಳಕಿನ ಒಂದೇ ಒಂದು ಮಿಂಚಿನ ಝಳಪಿನಿಂದಾದ ಸಂಪೂರ್ಣ ವಿನಾಶದ ನಿರ್ಜನ ವಿಶಾಲ ದೃಶ್ಯ ಅದರ ಇಂದಿನ ವಾಸ್ತವತೆಯಾಗಿತ್ತು.

ನೀಲಿ ಕಿಮೋನೋ ಧರಿಸಿದ್ದ ನಾಜೂಕು ಮೈಕಟ್ಟಿನ ಮಿಸ್ ಐಟೋ ವಿವರಿಸಿದರು: "ಹಿರೋಷಿಮಾ ಎಂದರೆ ವಿಶಾಲ ದ್ವೀಪ ಎಂದು ಅರ್ಥ. ಅದು ಕಾಮುರಿ ಪರ್ವತದಿಂದ ಹರಿದು ಬರುವ ಓಟಾ ನದಿ ಮುಖಜ ಭೂಮಿಯ ಮೇಲೆ ನಿರ್ಮಿಸಲ್ಪಟ್ಟಿತ್ತು. ವಿಸ್ತಾರದ ದೃಷ್ಟಿಯಿಂದ ಜಪಾನಿನಲ್ಲಿ ಅದು ಏಳನೇ ಸ್ಥಾನ ಪಡೆದಿತ್ತು. ಓಟಾ ನದಿಯ 'ಸಪ್ತಬಾಹುಗಳು' – ಒಳನಾಡಿನ ಸಮುದ್ರಕ್ಕೆ ತಮ್ಮ ನೀರನ್ನು ಸುರಿಯುವ ಏಳು ನದಿಗಳು – ನಗರದ ಬಂದರು, ಕಾರ್ಖಾನೆಗಳು, ಒಂದು ಶಸ್ತ್ರಾಸ್ತ್ರ ಕೋಠಿ, ತೈಲ ಶುದ್ಧೀಕರಣ ಸ್ಥಾವರಗಳು ಮತ್ತು ಉಗ್ರಾಣಗಳು ಮುಂತಾದುವನ್ನು ಒಂದು ಪರಿಪೂರ್ಣ ತ್ರಿಕೋನದಲ್ಲಿ ಆವರಿಸಿದ್ದವು. ಹಿರೋಷಿಮಾದ ಜನಸಂಖ್ಯೆ ಎರಡು ಲಕ್ಷವಿತ್ತು. ಮೇಲಾಗಿ ಅಲ್ಲಿ ಸುಮಾರು ಒಂದೂವರೆ ಲಕ್ಷ ಕಾವಲು ಸೈನಿಕರ ದಂಡಿನ ಕೋಟೆಯೂ ಇತ್ತು.''

ಪತ್ರಿಕಾಕರ್ತ ನಗರದ ಪ್ರಮುಖ ಕಚೇರಿಗಳ ಮತ್ತು ಕಟ್ಟಡಗಳ ವಿವರಣೆ ನೀಡಿದರು. ಅವೆಲ್ಲವೂ ರೀ-ಇನ್‌ಫೋರ್ಸ್ಡ್ ಕಾಂಕ್ರೀಟಿನಿಂದ ಕಟ್ಟಲಾಗಿದ್ದು, ಕೆಳಮಟ್ಟದ ಛಾವಣಿಯುಳ್ಳ ಜಪಾನೀ ಮನೆಗಳ ಮೇಲೆ ತಮ್ಮ ಶ್ರೇಷ್ಠತೆಯನ್ನು ಸಾರುತ್ತಿದ್ದವು. ಜಪಾನಿ ಮಾದರಿ ಮನೆಗಳು ಆರು ಮೈಲಿಗಿಂತ ಹೆಚ್ಚು ದೂರದಲ್ಲಿ ಗೋಚರಿಸುವ ಕಾಡುಗಳಿಂದ ತುಂಬಿದ ಗುಡ್ಡಗಳವರೆಗೆ ಹಬ್ಬಿದ್ದವು.

"ಯುದ್ಧ ಕಾಲದಲ್ಲಿ ನಗರಕ್ಕೆ ಹೆಚ್ಚು ಹಾನಿ ಆಗಿರಲಿಲ್ಲ. ಆಗ ಬಾಂಬ್ ಸ್ಫೋಟಗಳಿಂದ ಅದು ಸ್ವಲ್ಪ ಘಾಸಿಗೊಂಡಿತ್ತು. ಎರಡು ಲಘು ದಾಳಿಗಳು ಮಾತ್ರ ನಡೆದಿದ್ದವು. ಒಂದನೆಯದು ೧೯ ಮಾರ್ಚ್ ೧೯೪೫ರಂದು ಅಮೆರಿಕನ್ ವಿಮಾನಗಳ ತಂಡದಿಂದಲೂ, ಎರಡನೆಯದು ೩೦ ಏಪ್ರಿಲ್ ೧೯೪೫ರಂದು ರಕ್ಷಣಾ ವಿಮಾನದಳದಿಂದಲೂ ನಡೆದಿತ್ತು.

"ಆಗಸ್ಟ್ ೬ರಂದು ಹಿರೋಷಿಮಾದ ಆಗಸದಲ್ಲಿ ಒಂದು ಚೂರು ಮೋಡವೂ ಇರಲಿಲ್ಲ. ದಕ್ಷಿಣದಿಂದ ಗ್ರಹಿಸಲು ಕಷ್ಟಸಾಧ್ಯವಾದ ಸೌಮ್ಯಗಾಳಿ ಬೀಸುತ್ತಿತ್ತು. ಹತ್ತು ಹನ್ನೆರಡು ಮೈಲಿ ದೂರದವರೆಗಿನ ದೃಶ್ಯ ಹೆಚ್ಚುಕಮ್ಮಿ ಪೂರ್ಣ ಪರಿಶುದ್ಧವಿತ್ತು.

"ಬೆಳಗಿನ ೭ ಘಂಟೆ ೯ ನಿಮಿಷವಾದಾಗ ವಿಮಾನ ದಾಳಿಯ ಎಚ್ಚರಿಕೆಯನ್ನು ಮೊಳಗಿಸಲಾಯಿತು. ಆಗ ನಾಲ್ಕು ಅಮೆರಿಕನ್ ಬಿ-೨೯ ವಿಮಾನಗಳು ಕಾಣಿಸಿದವು. ಅವುಗಳಲ್ಲಿ ಎರಡು ನಗರದ ಉತ್ತರಕ್ಕೆ ತಿರುಗಿ, ದಕ್ಷಿಣದ ಕಡೆ ಸಾಗಿ, 'ಷೋಹೋ' ಸಮುದ್ರದ ದಿಕ್ಕಿನಲ್ಲಿ ಅದೃಶ್ಯವಾದವು. ಉಳಿದ ಎರಡು ವಿಮಾನಗಳು 'ಶುಕಾಯ್' ನೆರೆಹೊರೆಯನ್ನು ಸುತ್ತು ಹಾಕಿದ ನಂತರ, ಅತ್ಯಧಿಕ ವೇಗದಲ್ಲಿ ದಕ್ಷಿಣ ದಿಕ್ಕಿನಲ್ಲಿ 'ಬಿಂಗೋ' ಸಮುದ್ರದ ಕಡೆ ಹಾರಿ ಹೋದವು.

"ಏಳು ಘಂಟೆ ೩೧ ನಿಮಿಷಕ್ಕೆ ಯಾವ ಅಪಾಯವೂ ಇಲ್ಲವೆಂಬ ಸೂಚನೆ ನೀಡಲಾಯಿತು. ಜನರು ಸುರಕ್ಷಿತರಾಗಿದ್ದಾರೆಂದು ಭಾವಿಸಿ ತಮ್ಮ ಆಶ್ರಯತಾಣಗಳಿಂದ

ಹೊರಬಂದು ತಮ್ಮ ತಮ್ಮ ವ್ಯವಹಾರಗಳಲ್ಲಿ ಮಗ್ನರಾದರು. ದಿನಗೆಲಸ ಪ್ರಾರಂಭವಾಯಿತು.

"ಇದ್ದಕ್ಕಿದ್ದಂತೆ ಕಣ್ಣು ಕೋರೈಸುವ ಒಂದು ಬಿಳಿ-ಎಳೆಗೆಂಪು ಬೆಳಕು ಆಗಸದಲ್ಲಿ ಮೂಡಿ, ಅದರ ಜತೆಗೊಂದು ಅಸಹಜ ಕಂಪನ, ಅದನ್ನು ಹಿಂಬಾಲಿಸಿದ ಉಸಿರುಗಟ್ಟಿಸುವ ಒಂದು ಅಲೆ, ಮತ್ತು ತನ್ನ ಮಾರ್ಗದಲ್ಲಿ ಎದುರಾದುದೆಲ್ಲವನ್ನೂ ಗುಡಿಸಿ ಹಾಕುವ ಗಾಳಿಯೊಂದು ಬೀಸಿತು.

"ಕೆಲವೇ ಘಳಿಗೆಗಳಲ್ಲಿ ನಗರದ ನಡುವೆ, ಬೀದಿಗಳಲ್ಲಿ ಮತ್ತು ತೋಟಗಳಲ್ಲಿ ಇದ್ದ ಸಾವಿರಾರು ಜನರು ಸುರಿದು ಹಾಕುವ ಕಾವಿನ ಅಲೆಯಲ್ಲಿ ಕಮರಿಹೋದರು. ಬಹುಮಂದಿ ತಕ್ಷಣ ಹತರಾದರು, ಇತರರು ನೆಲಕ್ಕೆ ಉರುಳಿ ಒದ್ದಾಡುತ್ತ, ಸುಟ್ಟಗಾಯಗಳ ನೋವಿನ ಕಾರಣ ಯಾತನಾಮಯ ಚೀತ್ಕಾರಗಳನ್ನು ಮಾಡುತ್ತ ಬಿದ್ದಿದ್ದರು. ಬಾಂಬ್ ಪ್ರಹಾರಕ್ಕೆ ಎದುರು ನೇರವಾಗಿ ನಿಂತ ಪ್ರತಿಯೊಂದು ವಸ್ತುವೂ – ಗೋಡೆಗಳು, ಮನೆಗಳು, ಕಾರ್ಯಾಗಾರಗಳು, ಮತ್ತಿತರ ಸೌಧಗಳು – ನಿರ್ನಾಮವಾದವು. ಭಗ್ನ ಅವಶೇಷಗಳೆಲ್ಲವೂ ಸುಂಟರಗಾಳಿಯಂತೆ ಸುತ್ತುತ್ತ ಆಕಾಶಕ್ಕೆ ಹಾರಿಸಲ್ಪಟ್ಟವು. ಭಾರ ಮತ್ತು ಘನತ್ವಗಳೇ ಇಲ್ಲವೆಂಬಂತೆ ಟ್ರಾಮುಗಳು ಮೇಲಕ್ಕೆ ಎತ್ತಲ್ಪಟ್ಟು ಅತ್ತಿತ್ತ ಎಸೆಯಲ್ಪಟ್ಟವು. ರೈಲುಬಂಡಿಗಳು ಆಟದ ಬೊಂಬೆಗಳೇನೋ ಎಂಬಂತೆ ಕಂಬಿಗಳಿಂದ ದೂರ ಬಿಸಾಡಲ್ಪಟ್ಟವು. ಮನುಷ್ಯರಿಗಾದ ಗತಿಯೇ ಕುದುರೆ, ನಾಯಿ ಮತ್ತು ದನಕರುಗಳಿಗೂ ಆಯಿತು. ಒಂದೊಂದು ಜೀವಂತ ವಸ್ತುವೂ ವಿವರಿಸಲಾಗದ ನರಳಾಟದ ಭಂಗಿಯಲ್ಲಿ ಸ್ತಂಭೀಭೂತವಾಯಿತು. ಸಸ್ಯಜೀವಿಗಳೂ ಪಾರಾಗಲಿಲ್ಲ, ಮರಗಳು ಹೊತ್ತಿಕೊಂಡು ಉರಿಯತೊಡಗಿದವು. ಭತ್ತದ ಸಸಿಗಳು ಹಸಿರು ಬಣ್ಣ ಕಳೆದುಕೊಂಡವು. ನೆಲದ ಮೇಲೆ ಬೆಳೆದಿದ್ದ ಹಸಿರು ಹುಲ್ಲು ಒಣ ಹುಲ್ಲಿನಂತೆ ಉರಿಯಿತು.

"ಏನೂ ಉಳಿಯದಿದ್ದ ಸಾವಿನ ವಲಯದ ಆಚೆ ಮರದ ತೊಲೆಗಳು, ಇಟ್ಟಿಗೆಗಳು, ಸರಗಟ್ಟುಗಳು ಗಿರಗಿರನೆ ತಿರುಗುತ್ತ ಮನೆಗಳು ಕುಸಿದವು. ಸ್ಫೋಟದ ಕೇಂದ್ರದಿಂದ ಸುಮಾರು ಮೂರು ಮೈಲಿಗಳವರೆಗೆ ಭಾರವಿರದಿದ್ದ ಮನೆಗಳು ರಟ್ಟಿನ ಪೆಟ್ಟಿಗೆಗಳಂತೆ ಚಪ್ಪಟೆಯಾದವು. ಒಳಗಿದ್ದವರು ಕೊಲ್ಲಲ್ಪಟ್ಟರು ಅಥವಾ ಗಾಯಗೊಂಡರು. ಯಾವುದೋ ಪವಾಡದಿಂದ ಎಂಬಂತೆ ತಮ್ಮನ್ನು ಪಾರು ಮಾಡಿಕೊಳ್ಳಲು ಸಫಲರಾದವರು ಬೆಂಕಿಯ ವೃತ್ತದಿಂದ ಆವರಿಸಲ್ಪಟ್ಟರು. ಸುರಕ್ಷೆಯತ್ತ ದಾರಿ ಮಾಡಿಕೊಂಡು ಹೋಗುವುದರಲ್ಲಿ ಯಶಸ್ವಿಯಾದ ಕೆಲವೇ ಜನರು ಗ್ಯಾಮ-ಕಿರಣಗಳ ಘಾತುಕ ಪರಿಣಾಮಗಳಿಂದ ೨೦ ಅಥವಾ ೩೦ ದಿನಗಳ ನಂತರ ಮಡಿದರು. ರೀ ಇನ್‌ಫೋರ್ಸ್ಡ್ ಕಾಂಕ್ರೀಟ್ ಅಥವಾ ಶಿಲಾಕಟ್ಟಡಗಳು ಹಲವು ನೆಟ್ಟಗೆ ನಿಂತಿದ್ದರೂ ಅವುಗಳ ಒಳಭಾಗಗಳೆಲ್ಲವೂ ಸ್ಫೋಟದ ಹೊಡೆತಕ್ಕೆ ನೆಲಕಚ್ಚಿದ್ದವು.

"ಆಸ್ಫೋಟ ಆದ ಅರ್ಧ ಘಂಟೆಯ ಬಳಿಕ, ಹಿರೋಷಿಮಾದ ಆಸುಪಾಸಿನ ಆಗಸವೆಲ್ಲ ನಿರಭ್ರವಾಗಿದ್ದರೂ ಪಟ್ಟಣದ ಮೇಲೆ ಒಳ್ಳೆಯ ಮಳೆ ಬೀಳಲಾರಂಭಿಸಿತು. ಅದು ಐದು ನಿಮಿಷ ಸುರಿಯಿತು. ಏಕಾಏಕಿ ಮಿತಿಮೀರಿ ಕಾದ ಗಾಳಿ ಬಹಳ ಎತ್ತರಕ್ಕೆ ಏರಿದ್ದರಿಂದ, ಅಲ್ಲಿ ಅದು ಘನೀಕರಿಸಿ ಮಳೆಯ ರೂಪದಲ್ಲಿ ಹಿಂದಿರುಗಿತ್ತು. ಅದಾದ ನಂತರ ಒಂದು ಪ್ರಚಂಡ ಮಾರುತ ಎಚ್ಚೆತ್ತು ಬೀಸಲಾರಂಭಿಸಿ, ಬೆಂಕಿ ಮತ್ತೆ ಭಯಂಕರ ವೇಗದಲ್ಲಿ ಹಬ್ಬಿತು. ಬಹುಪಾಲು ಜಪಾನೀ ಮನೆಗಳು ಟಿಂಬರ್ ಮತ್ತು ಒಣ ಹುಲ್ಲಿನಿಂದ ನಿರ್ಮಿಸಲಾಗಿದ್ದುದೇ ಅದಕ್ಕೆ ಕಾರಣ.

"ಸಂಜೆಯಾಗುತ್ತಿದ್ದಂತೆ ಬೆಂಕಿ ಕ್ಷೀಣಿಸತೊಡಗಿ, ಕ್ರಮೇಣ ಆರಿಹೋಯಿತು. ಉರಿದುಹೋಗಲು ಈಗ ಏನೂ ಉಳಿದಿರಲಿಲ್ಲ. ಹಿರೋಷಿಮಾ ತನ್ನ ಅಸ್ತಿತ್ವದಿಂದ ಮಾಯವಾಗಿತ್ತು."

ಜಪಾನೀ ಸಂಗಾತಿ ಮಾತು ನಿಲ್ಲಿಸಿದ, ನಂತರ ಒಂದು ಶಬ್ದವನ್ನು ಅನಿರ್ವಚನೀಯ, ಆದರೆ ನಿಯಂತ್ರಿತ ಉದ್ವೇಗದಿಂದ ಉಸುರಿದ: "ಅದೋ."

ಆಗ ಡಾ|| ಜುನಾಡ್ ಮತ್ತು ಸಂಗಡಿಗರು 'ಆಯಿಓಯ್' ಸೇತುವೆಯಿಂದ ನಾಲ್ಕು ಮೈಲಿಗೂ ಕಡಿಮೆ ದೂರದಲ್ಲಿದ್ದರು. ಅದು ಸ್ಫೋಟಕ್ಕೆ ನೇರವಾಗಿ ಗುರಿಯಾಗುವ ಕೆಳಪ್ರದೇಶದಲ್ಲಿತ್ತು. ಅದರ ಆಜುಬಾಜು ಮನೆಗಳ ಛಾವಣಿಗಳು ಆಗಲೇ ತಮ್ಮ ಹೆಂಚುಗಳನ್ನು ಕಳೆದುಕೊಂಡಿದ್ದವು, ಮತ್ತು ರಸ್ತೆ ಬದಿ ಉದ್ದಕ್ಕೂ ಬೆಳೆದಿದ್ದ ಹುಲ್ಲು ಹಳದಿಯಾಗಿತ್ತು. ವಿನಾಶಕೇಂದ್ರದಿಂದ ಮೂರು ಮೈಲಿ ದೂರದಲ್ಲಿದ್ದ ಮನೆಗಳು ಧ್ವಂಸವಾಗಿಹೋಗಿದ್ದವು. ಅವುಗಳ ಛಾವಣಿಗಳು ಒಳಭಾಗದಲ್ಲಿ ಬಿದ್ದಿದ್ದವು, ಮತ್ತು ಮುರುಕು ಗೋಡೆಗಳಿಂದ ದಿಮ್ಮಿಗಳು ಹೊರಚಾಚಿದ್ದವು. ಆದರೆ ಅದುವರೆಗೆ ಕಂಡಿದ್ದು ಸಾಧಾರಣ ಸ್ವರೂಪದ ಅಧಿಕ ಸ್ಫೋಟಕ ಶಕ್ತಿಯುಳ್ಳ ವಸ್ತುಗಳಿಂದ ಕ್ಷತಿಗೊಂಡ ಪಟ್ಟಣಗಳು ಪ್ರದರ್ಶಿಸುವಂಥ ಸಾಮಾನ್ಯ ದೃಶ್ಯಾವಳಿಯೇ ಆಗಿತ್ತು.

ನಗರಕೇಂದ್ರದಿಂದ ಸುಮಾರು ೨$^1/_2$ ಮೈಲಿ ದೂರದಲ್ಲಿದ್ದ ಕಟ್ಟಡಗಳೆಲ್ಲವೂ ಉರಿದು ನಾಶವಾಗಿದ್ದವು. ಅಡಿಪಾಯದ ಗುರುತುಗಳು, ಭಗ್ನಾವಶೇಷಗಳ ಗುಪ್ಪೆಗಳು ಮತ್ತು ಜಂಗು ಹಿಡಿದ ಕಬ್ಬಿಣದ ಸರಕುಗಳು ಉಳಿದಿದ್ದವು. ಈ ವಲಯ, ಸ್ಫೋಟಕ ವಸ್ತುಗಳನ್ನು ಹೊತ್ತಿಸುವ ಗುಂಡುಗಳ ಸಾಮೂಹಿಕ ಸುರಿಮಳೆಯ ನಂತರ ಹಾಳುಗೆಡಹಲಾಗಿದ್ದ ಟೋಕಿಯೋ, ಒಸಾಕಾ ಮತ್ತು ಕೋಬ್ ಶಹರುಗಳ ಪ್ರದೇಶಗಳನ್ನು ಹೋಲುತ್ತಿತ್ತು.

ಸ್ಫೋಟದ ಕೇಂದ್ರದಿಂದ ಮುಕ್ಕಾಲು ಮೈಲಿ ದೂರದಲ್ಲಿ ಏನೂ ಉಳಿದಿರಲಿಲ್ಲ, ಎಲ್ಲವೂ ಅದೃಶ್ಯವಾಗಿತ್ತು. ಅದೊಂದು ಹಾಳುಳಿಕೆಗಳಿಂದ ಮತ್ತು ತಿರುಚಿಹೋದ ತೊಲೆಗಳಿಂದ ತುಂಬಿದ ಕಲ್ಲಿನ ಬೆಂಗಾಡು ಆಗಿತ್ತು. ವಿಪರೀತ ಕಾವಿನ ನಿಗಿನಿಗಿ ಬೆಂಕಿಯ ಉಸಿರು ಎಲ್ಲ ಅಡೆತಡೆಗಳನ್ನು ಜಾಡಿಸಿಬಿಟ್ಟಿತ್ತು. ಮತ್ತು ತಲೆ ಎತ್ತಿ ನಿಂತಿದ್ದೇನಾದರೂ ಇದ್ದರೆ ಅದು ಕಲ್ಲು ಗೋಡೆಗಳ ಒಂದೆರಡು ಚೂರುಗಳು ಮತ್ತು ತಮ್ಮ ತಳಾಧಾರಗಳ ಮೇಲೆ ಅಸಂಗತ ರೀತಿಯಲ್ಲಿ ಉಳಿದುಕೊಂಡಿದ್ದ ಕೆಲವು ಒಲೆಗಳು.

ಡಾ|| ಜುನಾಡ್ ಮತ್ತು ಜತೆಗಾರರು ಕಾರಿನಿಂದ ಹೊರಬಿದ್ದು ಭಗ್ನಾವಶೇಷಗಳ ಮೂಲಕ ನಿಧಾನವಾಗಿ ನಡೆಯುತ್ತ ಸತ್ತುಹೋದ ನಗರದ ಮಧ್ಯಭಾಗವನ್ನು ತಲುಪಿದರು. ಇಡೀ ಸ್ಮಶಾನದಲ್ಲಿ ಕೇವಲ ಮೌನ ಆಳುತ್ತಿತ್ತು. ಹಾಳುಳಿಕೆಗಳಲ್ಲಿ ಏನನ್ನಾದರೂ ಹುಡುಕುತ್ತಿರುವಂಥ ಒಬ್ಬ ಮನುಷ್ಯನಾದರೂ ಬದುಕಿದ್ದುದು ಕಾಣಸಲಿಲ್ಲ. ಆದರೆ ಸ್ವಲ್ಪ ದೂರದಲ್ಲಿ ಸೈನಿಕರ ತಂಡವೊಂದು ಅವಶೇಷಗಳನ್ನು ಸರಿಸುತ್ತ ಹಾದಿಯೊಂದನ್ನು ಮಾಡುತ್ತಿದ್ದಿತು. ಅಲ್ಲಲ್ಲಿ



ಬಾಂಬ್ ಸ್ಫೋಟದ ಪರಿಣಾಮ

ಹಾಳುರಾಶಿಗಳ ಮಧ್ಯೆ ಸ್ವಲ್ಪ ಹುಲ್ಲು ಮೊಳೆಯಲು ಪ್ರಾರಂಭಿಸಿತ್ತು. ಆದರೆ ಎಲ್ಲೂ ಒಂದು ಪಕ್ಷಿಯಾಗಲೀ ಪ್ರಾಣಿಯಾಗಲೀ ಕಾಣಲಿಲ್ಲ.

ಜಪಾನಿನ ಉನ್ನತ ಶ್ರೇಣಿಯ ಸರ್ಜನ್‌ಗಳಲ್ಲಿ ಒಬ್ಬರಾದ ಪ್ರೊಫೆಸರ್ ಸುಸುಕಿ ಇವರಿಗೆ ಮಾರ್ಗದರ್ಶನ ನೀಡುತ್ತ ತಾವು ಹೇಳುತ್ತಿದ್ದುದು ಎಲ್ಲರಿಗೂ ಕೇಳಿಸುವಂತೆ ಎತ್ತರಿಸಿದ ದನಿಯಲ್ಲಿ ಮಾತಾಡುತ್ತಾ ನಡೆದರು. ಆದರೆ ಆಳವಾದ ಉದ್ವೇಗ ಮತ್ತು ಭಾವುಕತೆಯ ಕಾರಣ ಅವರ ಮಾತು ತುಂಡು ತುಂಡಾಗಿ ಉಸುರಲ್ಪಟ್ಟು ಇವರ ಕಿವಿಗಳನ್ನು ತಲುಪುತ್ತಿತ್ತು – "ನಾವು ತೆರೆದ ಮನಸ್ಸಿನವರಾಗಬೇಕು... ನಾವು ಎಲ್ಲವನ್ನೂ ಅರ್ಥಮಾಡಿಕೊಳ್ಳಲು ಪ್ರಯತ್ನಿಸಬೇಕು."

ಆರೇಳು ಗಜಗಳಷ್ಟು ಆಳದ ಅಡಿಪಾಯವಿದ್ದ ಅಳಿದುಳಿದ ಗೋಡೆಯೊಂದರ ಕಡೆ ಬೊಟ್ಟು ಮಾಡಿ ತೋರಿಸುತ್ತ ಅವರೆಂದರು: "ಇಲ್ಲೊಂದು ಆಸ್ಪತ್ರೆ ಇತ್ತು, ಮಹನೀಯರೆ; ಇನ್ನೂರು ಹಾಸಿಗೆಗಳು, ಎಂಟು ವೈದ್ಯರು, ಇಪ್ಪತ್ತು ನರ್ಸುಗಳು. ಅವರಲ್ಲಿ ಪ್ರತಿಯೊಬ್ಬರೂ ಮತ್ತು ಎಲ್ಲ ರೋಗಿಗಳೂ ಕೊಲ್ಲಲ್ಪಟ್ಟರು. ಇದೇ, ಒಂದು ಬಾಂಬ್ ಮಾಡುವ ಕೆಲಸ..."

* * *

ಆಂಗ್ಲ ಭಾಷಾಪಂಡಿತ ಡಿ. ಎಚ್. ಹೋವ್ ವಿವರಿಸಿದಂತೆ "ಹಿರೋಷಿಮಾದ ಮೇಲೆ ಕೆಡವಲಾದ ಅಣುಬಾಂಬ್ ನೆಲದಿಂದ ಒಂದು ಸಾವಿರ ಅಡಿ ಎತ್ತರದಲ್ಲಿ ಸ್ಫೋಟಿಸಿತು... ಕೇವಲ ಒಂದು ಸೆಕೆಂಡಿನ ಭಾಗಶಃ ಕಾಲದಲ್ಲಿ ಅದು ತನ್ನ ಲೋಹ-ಸಿಲಿಂಡರ್ ಆಕಾರದಿಂದ ಲಕ್ಷಾಂತರ ಡಿಗ್ರಿ ಉಷ್ಣವುಳ್ಳ ಮತ್ತು ಹಿಗ್ಗುವ ಅನಿಲದ ಬೃಹತ್ ರಾಶಿಯಾಗಿ ಪರಿವರ್ತನೆಗೊಂಡಿತು. ಸ್ಫೋಟದ ಬಿಂದುವಿನ ಸುತ್ತ-ಮುತ್ತಲ ಗಾಳಿಯೂ ಉರಿಯಲಾರಂಭಿಸಿತು. ಅದೃಶ್ಯ ಹಾಗೂ ತೀವ್ರಭೇದಿ ಕಿರಣಗಳ ಸುರಿಮಳೆ ನಗರದಲ್ಲಿದ್ದ ಪ್ರತಿಯೊಂದು ಜೀವಂತ ಮತ್ತು ನಿರ್ಜೀವ ವಸ್ತುವಿನ ಮೇಲೆ ಎರಗಿತು... ಅರವತ್ತು ಸಾವಿರಕ್ಕೂ ಹೆಚ್ಚು ಜನ ಭಯಂಕರ ಗಾಯಗಳಿಂದ, 'ಕರುಣಾಳು ಸಾವು' ಅವರನ್ನು ಆ ಗೋಳಿನಿಂದ ಮುಕ್ತಿ ನೀಡದವರೆಗೆ ನರಳಿದ್ದರು. ಇತರ ಸಾವಿರಾರು ಜನ ಆಜೀವ ಅಂಗವಿಕಲರಾದರು ಅಥವಾ

ವಿಕೃತರಾದರು... ಬಾಂಬ್ ಸ್ಫೋಟಿಸಿದಾಗ ನೆಲದಲ್ಲಿ ಅಸಾಧಾರಣ ದೊಡ್ಡ ಕುಳಿ ಉಂಟಾಯಿತು. ಪಟ್ಟಣದ ಇಡೀ ಕೇಂದ್ರಭಾಗ ಆವಿಯಾಗಿ ಹೋಯಿತು.

''...ಜಪಾನ್ ಶರಣಾಗತವಾದ ಮೇಲೆ ಮೊದಲ ಅಮೆರಿಕನ್ ಪತ್ರಿಕಾಕರ್ತ ವರದಿ ಮಾಡಿದುದು: ಹಿರೋಷಿಮಾ ಬಾಂಬ್‌ಗೆ ತುತ್ತಾದ ನಗರದಂತೆ ತೋರುವುದಿಲ್ಲ, ದೈತ್ಯಾಕಾರದ ಒಂದು ಸ್ಟೀಮ್ ರೋಲರ್ ಅದನ್ನು ಅಪ್ಪಚ್ಚಿ ಮಾಡಿ ಹೋದಂತೆ ಕಾಣುತ್ತದೆ...

''ಮೂರು ದಿನಗಳ ನಂತರ ಅದೇ ಬಗೆಯ ಇನ್ನೊಂದು ಬಾಂಬ್ ಹಿರೋಷಿಮಾದಷ್ಟೇ ದೊಡ್ಡ ನಗರ ನಾಗಸಾಕಿಯಲ್ಲಿ ನೆಲಮಟ್ಟದಲ್ಲಿ ಸ್ಫೋಟಿಸಿತು. ತಕ್ಷಣ ೨೪ ಸಾವಿರ ಜನ ಹತರಾದರು. ಇತರ ೩೦ ಸಾವಿರ ಮಂದಿ ಒಂದು ವರ್ಷದೊಳಗೆ ಸತ್ತರು. ಇಡೀ ನಗರ ನಾಶವಾಯಿತು... ಈಗ ನಮಗೆ ಪರಿಚಿತವಾಗಿರುವ ವಿಲಕ್ಷಣ ಆಕಾರದ, ಸುಳಿಯಂತೆ ಸುತ್ತುವ ಅಣಬೆ-ಮೋಡದಂತೆ ಕಾಣುವ ಹೊಗೆ ಮತ್ತು ಜ್ವಾಲೆಯ ಗೋಪುರವೊಂದು ೨೫೦ ಮೈಲಿ ದೂರದವರೆಗೂ ಕಾಣಿಸಿತು. ಭಯಂಕರ ಉಷ್ಣಕಿರಣಗಳು ಸ್ಫೋಟವನ್ನು ಹಿಂಬಾಲಿಸಿದವು ಮತ್ತು ವಿನಾಶಪೀಡಿತ ನಗರದ ಮೇಲೆ ಕಪ್ಪು ಧೂಳಿನ ಮಳೆ ಸುರಿಯಿತು...

''ಅಂದಿನಿಂದ ಈ ಜಗತ್ತು ಆ ಅಣಬೆ-ಮೋಡದ – ಅಣುಬಾಂಬ್ ಮೋಡದ – ನೆರಳಿನಲ್ಲಿ ಬದುಕುವುದನ್ನು ಕಲಿತುಕೊಂಡಿದೆ.''

* * *

ಈ ಹತ್ಯಾಕಾಂಡಗಳಿಂದ ಅಮೆರಿಕ ಪಶ್ಚಾತ್ತಾಪ ಪಡಲಿಲ್ಲವೆಂಬುದು ಸ್ಪಷ್ಟವಿದೆ. ಏಕೆಂದರೆ ಅಣುಬಾಂಬ್ ಒಂದರ ಸ್ಫೋಟವಾದಾಗ ವಿದ್ಯುತ್ ವಿಕಿರಣ ಕ್ರಿಯಾಶಕ್ತಿ ಎಷ್ಟು ದೂರ ಹಬ್ಬುವುದೆಂಬುದನ್ನು ಪರೀಕ್ಷಿಸಲು ಅದು ೧೯೪೬ರಲ್ಲಿ ಶಾಂತಸಾಗರದ ಒಂದು ಸಣ್ಣ ದ್ವೀಪದ (ಬಿಕಿನಿ) ಮೇಲೆ ಹಲವು ವ್ಯಾಪಕ ಪ್ರಯೋಗಗಳನ್ನು ನಡೆಸಿತು. ನಂತರ ನೀರಿನಲ್ಲೂ ಒಂದು ಬಾಂಬ್ ಸ್ಫೋಟ ಮಾಡಿತು. ಮುಂದಿನ ಹನ್ನೆರಡು ವರ್ಷಗಳಲ್ಲಿ ಅದು ಇನ್ನೂ ಹಲವು ಪ್ರಯೋಗಗಳನ್ನು ನಡೆಸಿತು. ತನ್ನನ್ನು 'ದೇವರ ಸ್ವಂತ ದೇಶ' ಎಂದು ಕರೆದುಕೊಳ್ಳುವ ಅಮೆರಿಕ ಕಳೆದ ನಾಲ್ಕೈದು ದಶಕಗಳಲ್ಲಿ ಮಾಡಿರುವ 'ಮಹತ್ಸಾಧನೆ' ಈಗ ಸಾಮಾನ್ಯಜ್ಞಾನ ಎನಿಸಿದೆ.

ಅಣುಬಾಂಬ್ ಸ್ಫೋಟದ ಪರಿಣಾಮದಿಂದ ಹಿರೋಷಿಮಾ ೭೦ ವರ್ಷಗಳವರೆಗೆ ಮರುಭೂಮಿಯಾಗಿ ಉಳಿಯುವುದೆಂದು ಅಮೆರಿಕ ಎಚ್ಚರಿಕೆ ನೀಡಿದುದನ್ನು ಚುರುಕುಮತಿಗಳೂ ಕಾರ್ಯಕುಶಲರೂ ಆದ ಜಪಾನೀಯರು ಕೆಲಮಟ್ಟಿಗಾದರೂ ಸುಳ್ಳಾಗಿಸಿದ್ದಾರೆ. ಹಿರೋಷಿಮಾದಲ್ಲಿ ಕೆಲವು ವರ್ಷ ಹಿಂದೆ ಪುನರ್ನಿರ್ಮಾಣ ಕಾರ್ಯಗಳು ಪ್ರಾರಂಭವಾದವು, ಹುತಾತ್ಮರ ಸ್ಮರಣಾರ್ಥ ಸಭೆಗಳೂ ಜರುಗಿದವು. ಈಗ ಜಪಾನ್ ಸಹ ಪ್ರಬಲ ರಾಷ್ಟ್ರಗಳಲ್ಲಿ ಒಂದಾಗಿದೆ! ಅಮೆರಿಕ ಬಣವನ್ನೇ ಸೇರಿದೆ!

ಅಬ್ದುಲ್ ಮಜೀದ್ ಖಾನ್
ರಾಜಾಜಿನಗರ, ಬೆಂಗಳೂರು

---

**ಆ** ಜಾಗಕ್ಕೆ ಮುತ್ತಿಗೆ ಹಾಕಿದ ಸ್ಪೇಯಿನ್‌ನ ಸೈನಿಕರು ಅದಕ್ಕೆ 'ಸತ್ತ ಮನುಷ್ಯನ ಕಾಲುದಾರಿ', 'ಸಾವಿನ ಪಯಣ' ಎಂದು ಹೆಸರಿಟ್ಟಿದ್ದರು. ಅದು ಜರುಗಿದ್ದು ಆರು ದಶಕಗಳಿಗೆ ಹಿಂದೆ. ನ್ಯೂ ಮೆಕ್ಸಿಕೋ, ಅಮೆರಿಕದ ದಕ್ಷಿಣ ಭಾಗದ ಒಂದು ಪ್ರಾಂತ. ಮೆಕ್ಸಿಕೋದವರಿಂದ ದುರಾಕ್ರಮಣ ಮಾಡಿ ಪಡೆದುಕೊಂಡ ಪ್ರದೇಶ. ಮರುಭೂಮಿ. ಈ ಜಾಗಕ್ಕೆ ಗ್ರೌಂಡ್ ಜೀರೋ ಎನ್ನಲಾಗಿತ್ತು. ಭೂ ತಳ ಎನ್ನಬಹುದು. ಅಲ್ಲಿ, ನೆಟ್ಟ ಉಕ್ಕಿನ ನೀಳ್ಗಂಬದ ಮೇಲೆ ಕೂರಿಸಿದ್ದ ಒಂದು ಉಕ್ಕಿನ ಗೋಳ. ಅದಕ್ಕೊಂದು ಹೆಸರು – ಫ್ಯಾಟ್‌ಮ್ಯಾನ್ – ಬೊಜ್ಜು ಮನುಷ್ಯ. ಅಂದು ಜುಲೈ ೧೬, ೧೯೪೫. ಅಂದೊಂದು ಪ್ರಯೋಗ – ಆ ಪ್ರಯೋಗಕ್ಕೂ ಒಂದು ಹೆಸರು – ಟ್ರಿನಿಟಿ – ನಮ್ಮ 'ತ್ರಿಮೂರ್ತಿ' ಎಂಬಂತೆ.

ಅದನ್ನು ಭೌತ ವಿಜ್ಞಾನಿಗಳು ನಿರ್ಮಿಸಿದ್ದರು. ಆದರೆ, ಅದೇನು ಮಾಡಬಲ್ಲುದು ಎಂದು ಅವರಿಗೇ ಸಂಪೂರ್ಣ ಸ್ಪಷ್ಟವಿರಲಿಲ್ಲ. ರಾಬರ್ಟ್ ಓಪನ್‌ಹೈಮರ್ ಒಂದು ಡಾಲರ್ ಪಣತೊಟ್ಟು ಹೇಳಿದ್ದ – ಇದರಲ್ಲಿ ಸುಮಾರು ೩೦೦ ಟನ್ ಟಿಎನ್‌ಟಿಯಷ್ಟು ಆಸ್ಫೋಟನಾ ಶಕ್ತಿ ಇದೆ ಎಂದು – ಅವನದೊಂದು ಸಾಧಾರಣ ಊಹೆ. ಅವನೇ ಆ ಪ್ರಯೋಗವನ್ನು ಸಂಚಯಿಸಿದ್ದ. ಜಾರ್ಜ್ ಕ್ರಿಸ್ಟಿಯಾಕೊವ್‌ಸ್ಕಿ ಅದರ ಸ್ಫೋಟಕ ಶಕ್ತಿ ೧೪೦೦ ಟನ್ ಎಂದ. ಹ್ಯಾನ್ಸ್ ಬೆಥೆ ೮೦೦೦ ಟನ್ ಎಂದರೆ ಐ. ಐ. ರಬಿ ೧೮೦೦ ಟನ್ ಎಂದ. ಎಡ್ವರ್ಡ್ ಟೆಲ್ಲರ್‌ನ ಪ್ರಕಾರ ಅದು ४೫,೦೦೦!

ಎನ್‌ರಿಕೋ ಫರ್ಮಿ ಅದರ ಆಸ್ಫೋಟದಲ್ಲಿ ವಾಯುಮಂಡಲಕ್ಕೆ ಬೆಂಕಿ ಹೊತ್ತಿಕೊಳ್ಳುತ್ತದೆ ಎಂದು ಪಣ ತೊಟ್ಟ. ಎಲ್ಲರೂ ಹಾಗೆ ಆಗಲೂಬಹುದು ಎಂದರು. ಪ್ರಯೋಗದ ಸಿದ್ಧತಾ ದಿನದಲ್ಲಿ, ಕೆಲವು ವರ್ಷಗಳ ಹಿಂದೆ: ಆ ಬಗ್ಗೆ ಭೌತವಿಜ್ಞಾನಿಯೊಬ್ಬ ಕಾವ್ಯಮಯವಾಗಿ ಬರೆದಿಟ್ಟಿದ್ದ: ಹಾಗೇನಾದರೂ ಆದರೆ ಭೂಮಿಯ ಎಲ್ಲ ಜಲಜನಕವನ್ನು ಅದು ಸೆಳೆದುಕೊಂಡು ಪರಿವರ್ತಿಸಿಬಿಡುತ್ತದೆ ಮತ್ತು ಅಂಥ ಒಂದು ಯಾವುದೋ ಮಹತ್ತರ ಪ್ರಯೋಗವಾಯಿತು ಎಂದು ಒಂದು ಹೊಸ ತಾರೆಯ ಉದಯವಾಗಿ ವಿಶ್ವಕ್ಕೆಲ್ಲಾ ಸಾರುತ್ತದೆ. ಅಂದರೆ ಭೂಮಿಯೇ ಒಂದು ಉರಿಯುವ ತಾರೆಯಾಗಿಬಿಡುತ್ತದೆ ಎಂಬ ಅರ್ಥ.

ಹೇಗೂ ಇವುಗಳಲ್ಲಿ ಯಾವುದು ಎಷ್ಟು ಸರಿ ಎಂದು ಕೆಲವೇ ಕ್ಷಣದಲ್ಲಿ ತಿಳಿಯುವುದಿತ್ತು. ಟೆಲ್ಲರ್, ಬೆಥೆ ಮತ್ತಿತರರು ಷಾರ್ಟ್‌ವೇವ್ ರೇಡಿಯೋ ಮುಖಾಂತರ ಪ್ರಸಾರವಾದ ಕ್ಷಣ ಗಣನೆಯನ್ನು ಕೇಳಲಾರಂಭಿಸಿದರು. ಅವರು ಗ್ರೌಂಡ್ ಜೀರೋ ಇಂದ ಒಂದು ಮೈಲು ದೂರದಲ್ಲಿದ್ದ ಒಂದು ಗುಡ್ಡದ ಮೇಲೆ ಕುಳಿತು ವೀಕ್ಷಿಸುತ್ತಿದ್ದರು. ಆಗ ಸಮಯ ಮುಂಜಾನೆ ೫ ಗಂಟೆ. ಕಗ್ಗತ್ತಲು. ಕೆಳಗೆ ಮಲಗಿ, ಮುಖವನ್ನು ಮರಳಿನಲ್ಲಿ ಮುಚ್ಚಿಕೊಳ್ಳಬೇಕೆಂದು ಅವರಿಗೆ ನಿರ್ದೇಶನ ನೀಡಲಾಗಿತ್ತು. ಆದರೆ ಟೆಲ್ಲರ್‌ಗೆ ಆ ಬರಲಿರುವ ''ಮೃಗ''ವನ್ನು ಕಣ್ಣಾರೆ ನೋಡಬೇಕೆಂಬ ಹಟ. ಆ ಕತ್ತಲೆಯಲ್ಲೇ ಸೂರ್ಯನ ಶಾಖದಿಂದ ರಕ್ಷಿಸಲು ಉಪಯೋಗಿಸುವ ಮುಲಾಮನ್ನು ಹಚ್ಚಿಕೊಂಡ. ತನ್ನ ಒಡನಾಡಿಗಳಿಗೂ ಡಬ್ಬಿಯನ್ನು ಕೊಟ್ಟು ಹಚ್ಚಿಕೊಳ್ಳಲು ಹೇಳಿದ.

ಗ್ರೌಂಡ್ ಜೀರೋಯಿಂದ ಐದು ಮೈಲಿ ದೂರದಲ್ಲಿ ಫರ್ಮಿ, ರಬಿ ಹಾಗೂ ನೂರಾರು ವಿಜ್ಞಾನಿಗಳು, ತಂತ್ರಜ್ಞರೂ, ಸೈನಿಕರೂ ನೆಲದ ಮೇಲೆ ಬೋರಲಾಗಿ ಮಲಗಿ, ಬಾಂಬಿನ ದಿಕ್ಕಿಗೆ ಕಾಲು ಚಾಚಿದ್ದರು. ಗಂಟೆ ೫.೨೯.೩೫ಕ್ಕೆ ಧ್ವನಿವರ್ಧಕ ಕ್ಷಣಗಣನೆಯ ಕೊನೆಯ ಹತ್ತು ಸೆಕೆಂಡುಗಳನ್ನು ಎಣಿಸಲಾರಂಭಿಸಿತು. ''ಆಗಷ್ಟೆ ಬೈಗುಮೂಡಿ, ಪಕ್ಕದವರು ಮಸುಕುಮಸುಕಾಗಿ ಕಾಣಿಸುತ್ತಿದ್ದರು. ನನ್ನ ಅನುಭವದಲ್ಲಿ ಆ ಕೊನೆಯ ಹತ್ತು ಸೆಕೆಂಡುಗಳು ಒಂದು ಯುಗವೆನಿಸಿಬಿಟ್ಟಿತ್ತು'' ಎಂದಿದ್ದಾನೆ ರಿಚರ್ಡ್ ರೋಡ್ಸ್.

ಗ್ರೌಂಡ್ ಜೀರೋಯಿಂದ ಎರಡು ಮೈಲು ದೂರದಲ್ಲಿ, ಭೂಮಿಯೊಳಗೆ ರಕ್ಷಿಸಲ್ಪಟ್ಟ ಒಂದು ಬಂಕರ್‌ನಲ್ಲಿ ಓಪನ್‌ಹೈಮರ್ ಕುಳಿತಿದ್ದ. ''ಅಯ್ಯೋ! ಯಾಕೋ ನನಗೆ ಹೃದಯದಲ್ಲಿ ವೇದನೆಯಾಗುತ್ತಿದೆ!'' ಎಂದು ಉದ್ಗರಿಸಿದ್ದ. ಹತ್ತಿರದ ಕಂಬವೊಂದಕ್ಕೆ ಆತುಕೊಂಡು ತನ್ನನ್ನು ತಾನೇ ಸ್ಥಿಮಿತಗೊಳಿಸಿಕೊಂಡ. ಮಾಡಬಾರದ ಕೆಲಸವೊಂದನ್ನು ಮಾಡುತ್ತಿರುವ ಅಳುಕು, ಮಾಂತ್ರಿಕ ಭಯಂಕರ ಭೂತವೊಂದನ್ನು ಆವಾಹನೆ ಮಾಡುತ್ತಿರುವಂತೆ...

ಇತಿಹಾಸದಲ್ಲೇ ಅತಿ ಪ್ರಬಲವಾದ ಮಿಂಚಿನ ಹೊಳಪು ಆ ಪ್ರದೇಶವನ್ನೆಲ್ಲಾ ಕ್ಷಣಾರ್ಧದಲ್ಲಿ ಆವರಿಸಿಕೊಂಡಿತು. ಅದರ ಪ್ರಮಾಣ ೧೮೦೦೦ ಟಿಎನ್‌ಟಿಯಷ್ಟು ಎಂದು ಸ್ಪಷ್ಟವಾಯಿತು. ಪ್ರಯೋಗ ಫಲಪ್ರದವಾಯಿತು. ಹಿರೋಷಿಮಾ, ನಾಗಸಾಕಿಗಳು ಮುಂದಿನ ಮೂರು ವಾರದಲ್ಲಿ ನಡೆದುಹೋದುವು.

ಆ ದೃಶ್ಯವನ್ನು ನೋಡುತ್ತಿದ್ದಂತೆಯೇ ಓಪನ್‌ಹೈಮರ್ ಭಗವದ್ಗೀತೆಯ ಶ್ಲೋಕವೊಂದನ್ನು ಹೇಳಿಕೊಂಡ ''ನಾನೀಗ ಯಮನೇ ಆಗಿದ್ದೇನೆ. ಜಗತ್ತಿನ ಸರ್ವನಾಶಕನಾಗಿದ್ದೇನೆ.'' ಅವನ ಬಲಗೈ ಆಗಿದ್ದ ವಿಜ್ಞಾನಿ ಕೆನೆತ್ ಬಯಿನ್‌ಬ್ರಿಜ್ ಹೇಳಿದ ''ನಾವೆಲ್ಲಾ ನಾಯಿಮಕ್ಕಳು!''

ಇವರೆಲ್ಲಾ ತಮ್ಮ ಕೆಲಸ ಮುಗಿಸಿ ಹಿಂದಿರುಗಿ ಬರುತ್ತಿದ್ದುದನ್ನು ಲಾಸ್ ಅಲ್ಮೊಸ್‌ನಲ್ಲಿದ್ದ ಭೌತವಿಜ್ಞಾನಿಯೊಬ್ಬ ದೂರದಿಂದಲೇ ನೋಡಿ ''ಭವಿಷ್ಯದ ಬಗ್ಗೆ ಅವರೆಲ್ಲರ ದೃಷ್ಟಿಯಲ್ಲೂ ಯಾವುದೋ ಭಯಂಕರವಾದ ಪ್ರಬಲ ಬದಲಾವಣೆಯಾಗಿರುವಂತೆ ಅವರ ಮುಖಮುದ್ರೆ ಸಾರುತ್ತಿತ್ತು'' ಎಂದಿದ್ದಾನೆ.

ಎರಡನೆಯ ಮಹಾಯುದ್ಧ ಈ ಬಾಂಬಿನ ಅವತಾರದ ಮುಂದೆ ತನ್ನ ಎಲ್ಲ ಗಂಭೀರತೆಯನ್ನು ಕಳೆದುಕೊಂಡಿತು ಎಂದು ''ಟೈಮ್ಸ್'' ಪತ್ರಿಕೆ ದಾಖಲಿಸಿತು.

ಸಂಗ್ರಹ : ಕೆ. ಎಸ್. ಪಾರ್ಥಸಾರಥಿ

ಅವನು ಕೆಂಪು ರಗ್ಗೊಂದನ್ನು ಹೊದ್ದು, ಬಹುತೇಕ ನಿಶ್ಚಲವಾಗಿ ಮಲಗಿದ್ದ. ಅವನೊಬ್ಬ ವೈದ್ಯಕೀಯ ವಿದ್ಯಾರ್ಥಿಯಾಗಿದ್ದ ತರುಣ. ಗಡ್ಡಬಿಟ್ಟಿದ್ದ ಕಪ್ಪು ಮುಖ. ದೊಡ್ಡ ಕಣ್ಣುಗಳು. ಆದರೆ ಆ ಕಣ್ಣುಗಳು ಈಗ ಯಾರನ್ನೂ, ಯಾವುದನ್ನೂ ಕಾಣದಂತೆ ಮುಚ್ಚಿಕೊಂಡಿದ್ದವು. ಅವನು ಉಸಿರಾಡುತ್ತಿದ್ದಾಗಿನ ಗೊರಗುಟ್ಟುವ ಹಾಗೂ ಕೆಮ್ಮಿನ ಶಬ್ದದ ಹೊರತಾಗಿ ಆ ವಾರ್ಡಿನಲ್ಲಿ ಬೇರೆ ಯಾವ ಸದ್ದೂ ಇರಲಿಲ್ಲ. ಅವನು ನಿರಂತರವಾಗಿ ಕೆಮ್ಮುತ್ತಿದ್ದ. ಕೆಮ್ಮಿನ ಶಬ್ದ ಕೇಳಿದರೆ ಅವನ ಶ್ವಾಸಕೋಶಗಳು ಒಡೆದು ರಕ್ತ ಚಿಮ್ಮುತ್ತಿದ್ದವೇನೋ ಎನ್ನುವಂತಿತ್ತು. ಹಾಸಿಗೆಯ ಬಳಿ ಕುಳಿತು ನೋಡುತ್ತಿದ್ದ ಎತ್ತರದ ಕಪ್ಪು ಹುಡುಗಿ ಎದ್ದು, ಮೆಲ್ಲನೆ – ಮೆಟ್ಟುಂಗಾಲಿನಲ್ಲಿ – ವಾರ್ಡಿನಿಂದ ಹೊರನಡೆದಳು.

ಆಸ್ಪತ್ರೆಯ ಆವರಣದಲ್ಲಿದ್ದ ಡಾಕ್ಟರನ ಬಂಗಲೆಯ ಮರದ ಮೆಟ್ಟಿಲನ್ನು ಹತ್ತಿ ಒಳ ಬಂದಳು. ಯಾವುದೋ ವೈದ್ಯಕೀಯ ಪತ್ರಿಕೆಯನ್ನು ಓದುತ್ತಿದ್ದ ಎಮಾ ತನ್ನ ಭಾರವಾದ, ನಿದ್ದೆಗೆಟ್ಟ ಕಣ್ಣುಗಳಿಂದ ನೋಡಿದ. ಅವನ ಮುಖ ಎಣ್ಣೆ ಮುಖವಾಗಿತ್ತು.

''ಅವನ ಆರೋಗ್ಯ ಮತ್ತೆ ಕೆಡ್ತಾ?''

''ಹೌದು, ಡಾಕ್ಟರ್ ಸರ್, ತುಂಬಾನೇ!'' ಅವಳು ಅಳಲಿಕ್ಕೆ ಶುರುಮಾಡಿದಳು, ಕೈಕೈ ಹಿಸುಕಿಕೊಳ್ಳುತ್ತಾ ಶಿಲುಬೆ-ಗುರ್ತು ಮಾಡುತ್ತಾ, ''ಅಯ್ಯೋ, ನನ್ನ ಬಯೋರಾ ! ಈಗ ನಾನೇನ್ ಮಾಡ್ಲಿ?''

''ಅವನ ಸ್ನೇಹಿತನಿಗೆ ಟೆಲಿಗ್ರಾಂ ಕಳ್ಸಿದೀಯಾ ?''

''ಹ್ಞೂಂ. ಹತ್ತು ದಿನದ ಹಿಂದೇನೇ.''

''ಸರಿ, ಬರ್ತೀನಿ ನಡಿ'' ಎಂದನು ಡಾಕ್ಟರ್ ಎಮಾ... ಮೆಲ್ಲಗೆ.

ರೋಗಿಯ ಹಾಸಿಗೆಯ ಬಳಿ ನಿಂತು ಡಾ॥ ಎಮಾ ಅವನ ಭಾರದ, ಕಂದು ಬಣ್ಣದ ಮುಖವನ್ನು ನೋಡಿದರು. ಆ ಮುಖದಲ್ಲಿ ಪ್ರೇತಕಳೆ. ಆ ಹುಡುಗಿ ಹುಚ್ಚಿಯಂತೆ ಕೂಗಾಡತೊಡಗಿದಳು. ಅವಳನ್ನು ಸಮಾಧಾನಪಡಿಸಲು ಸಾಧ್ಯವಿದ್ದಿಲ್ಲ.

* * *

''ಈ ಟೆಲಿಗ್ರಾಂ ಯಾರು ತಂದರು ?''

ಅಜಾಕಾ ನದಿಯಲ್ಲಿನ ದೋಣಿಯಲ್ಲಿ ತಾಯೋ ಕುಳಿತಿದ್ದ. ಸರಳ, ಕರಿಯ ಮರದಂತಿದ್ದ ಕಪ್ಪುಮುಖದ ಯುವಕ. ಬಿದಿರಿನ ಉದ್ದನೆಯ ಮೀನು ಗಾಳವನ್ನು ಬದಿಗಿರಿಸಿ ಲಕೋಟೆಯನ್ನು ಒಡೆದು ನೋಡಿದ.

''ಅವರು ಕೊಟ್ರು, ಸಾ'' ಎಂದ ಇನ್ನೊಂದು ದೋಣಿಯಲ್ಲಿ ಬಂದಿದ್ದ ಹುಡುಗ. ''ಹಳ್ಳಿಯಲ್ಲಿ ಯಾರೋ ಒಬ್ಬ ಸಿಕ್ಕ. ಅವನು ಕೊಟ್ಟ, ಸಾ !''

ತಾಯೋ ಅವನ ಮಾತನ್ನೇನೂ ಕೇಳುತ್ತಿದ್ದಿಲ್ಲ.

''ಏನಿಲ್ಲ ಅಂತ ಕಾಣುತ್ತೆ, ಅಲ್ವಾ, ಸಾ ?'' ಎಂದು ಉಸಿರು ಬಿಗಿಹಿಡಿದು ಕೇಳಿದ ಆ ಹುಡುಗ. ''ಕೆಟ್ಟ ಸುದ್ದಿ ಏನೂ ಇಲ್ಲ ತಾನೆ ? ಆ್ಞಂ ?''

ನೋವಿನಿಂದ ಅವನ ಮುಖ ತಿರುಚಿತು. ಈಗ ಒಂದು ವಾರದಿಂದ ಪ್ರತಿದಿನ ಅವನು ಮತ್ತು ತಾಯೋ ಜೊತೆಗೂಡಿಯೇ ಅಜಾಕಾ ನದಿಯಲ್ಲಿ ಮೀನು ಹಿಡಿದಿದ್ದರು. ತಾಯೋ ನಕ್ಕಾಗ ಇವನೂ ನಗುತ್ತಿದ್ದ; ತಾಯೋ ಯೋಚಿಸುತ್ತಿದ್ದಾಗ ಅವನೂ ಯೋಚಿಸುತ್ತಿದ್ದ.

''ಕೆಟ್ಟ ಸುದ್ದಿ ಏನೂ ಇಲ್ಲ ತಾನೆ ?'' ಎಂದು ಅವನು ತನ್ನ ಕೀರಲು ಧ್ವನಿಯಲ್ಲಿ



ಮೂಲ : ಸಿಪ್ರಿಯನ್ ಎಕ್‌ವೆನ್ಸಿ

ಕನ್ನಡಕ್ಕೆ : ಶ್ರೀನಿವಾಸ್ ವಿ. ಸುತ್ರಾವೆ

ಮತ್ತೆ ಕೇಳಿದ. ''ನೀವು ನನ್ನನ್ನು ಬಿಟ್ಟುಹೋಗಲ್ಲ, ಅಲ್ವಾ ?'' ಎಂದ.

ತಾಯೋ ಟೆಲಿಗ್ರಾಮನ್ನು ಎಷ್ಟೊಂದು ಮಡಚಿ ತೀಡಿದನೆಂದರೆ ಆ ಕಿತ್ತಳೆ ಕೆಂಪು ಬಣ್ಣದ ಚೀಟಿ ಹರಿದು ತುಂಡಾಯಿತು. ಸಿಟ್ಟಿನಿಂದ ಜೋರಾಗಿ ಉಸಿರಾಡಿ ತನ್ನ ದೋಣಿಯಲ್ಲಿ ಸುಮ್ಮನೆ ಕೂತ. ಒಣಗಿದ ಎಲೆಗಳು, ಹಳೆಯ ಟಿನ್ನುಗಳು ಮತ್ತು ಆಹಾರದ ಗುಡ್ಡೆಗಳು ದೋಣಿಯ ಸುತ್ತಬಂದು ಬಡಿಯುತ್ತಿದ್ದವು, ಅವನಿಗೆ ಸಂತೈಸಲೆಂಬಂತೆ. ನಂತರ ಅವು ಮತ್ತೆ ತಮ್ಮ ಸಮುದ್ರದೆಡೆಗಿನ ಪ್ರಯಾಣವನ್ನು ಮುಂದುವರಿಸುತ್ತಿದ್ದವು.

ತಾಯೋ ಹುಟ್ಟುಹಾಕಿ ದಡಕ್ಕೆ ಬಂದ. ದೋಣಿಯನ್ನು ಕಟ್ಟಿಹಾಕಿಡಲು ಹುಡುಗನಿಗೆ ಹೇಳಿ ತನ್ನ ಕೋಣೆಗೆ ವಾಪಸ್ಸು ಹೋದ. ಪ್ಯಾಕ್ ಮಾಡಲು ಹೆಚ್ಚು ಸಾಮಾನುಗಳೇನೂ ಇದ್ದಿಲ್ಲ. ಕೆಲವು ಕಾದಂಬರಿಗಳು, ಎರಡು ಮೂರು ಷರ್ಟುಗಳು, ಕೆಲವು ಹೊದಿಕೆಗಳು ಅಷ್ಟೆ. ಯಜಮಾನನಿಗೆ ಆತ ತನ್ನ ಕೆಲಸದಿಂದ ವಾಪಸ್ಸು ಬಂದಾಗ ಓದಲೆಂದು ಒಂದು ಚೀಟಿಯನ್ನು ಬರೆದಿಟ್ಟ. ಆ ಮಂಕು ಕವಿದ ಸಣ್ಣ ಮನೆಯಿಂದ ಹೊರಟು ಗಲೀಜಾದ ರಸ್ತೆ ದಾಟಿ ಆ ಊರಿನ ಹಿಂಬದಿಗೆ ನಡೆದ. ಹೊರಟುಬರಲು ಅವನಿಗೆ ವಿಷಾದವೇನೂ ಇರಲಿಲ್ಲ. ಪ್ರತಿಯೊಬ್ಬರೂ ಮೀನಿನ ದೊಡ್ಡದೊಡ್ಡ ಬುಟ್ಟಿಗಳನ್ನು ಹೊತ್ತುಕೊಂಡು ಹೋಗುತ್ತಿರುವ ಹಾಗೆ ಕಾಣಿಸುತ್ತಿತ್ತು. ಬುಟ್ಟಿಗಳನ್ನು ತಲೆಯ ಮೇಲೆ, ಅಲ್ಲಾಡದಂತೆ, ನೆಟ್ಟಗೆ, ಹೊತ್ತುಕೊಂಡು ಹೋಗುತ್ತಿದ್ದ ಹುಡುಗಿಯರು ಅವನಿಗೆ ಜಾಗಬಿಟ್ಟು ನಿಲ್ಲುತ್ತಿದ್ದರು. ಮುದುಕರು ದಾರಿಯಲ್ಲಿ ಬಿದ್ದಿದ್ದ ಮೀನುಗಳನ್ನು ಗುಡಿಸಿ ಬೆಂಕಿಯಿದ್ದ ಸ್ಥಳದೆಡೆ ಸರಿಸುತ್ತಿದ್ದರು. ಅವನು ಕೆಳಗೆ ನೋಡುತ್ತಾ ಸರಸರನೆ ಅವರನ್ನು ಹಾದು ನಡೆದ.

ಅಜಾಕಾ ಹಳ್ಳಿಯ ಹಿಂದುಗಡೆ ಒಂದು ಲಾರಿ ನಿಂತಿತ್ತು. ಅದೊಂದು ಲಾರಿಯ ಅವಶೇಷದಂತಿತ್ತು ಎನ್ನಬಹುದು. ಒಂದು ಗಾಲಿಯು ಜ್ಯಾಕ್ ಮೇಲೆ ನಿಂತಿತ್ತು. ಅದರಡಿ ಇಬ್ಬರು ಹುಡುಗರು ನೆಲದ ಮೇಲೆ ಮಲಗಿ ಸ್ಪ್ಯಾನರ್, ಸ್ಕ್ರೂಡ್ರೈವರ್‌ಗಳನ್ನು ಜಿಡ್ಡಾದ ಕೈಗಳಲ್ಲಿ ಹಿಡಿದು ರಿಪೇರಿ ಮಾಡಲು ಹೆಣಗಾಡುತ್ತಿದ್ದರು. ಆ ಹುಡುಗರಿಂದ ಸ್ವಲ್ಪ ದೂರದಲ್ಲಿ, ಒಂದು ತಾಳೆಮರದಡಿ ಮರದ ದಿಮ್ಮಿಯೊಂದರ ಮೇಲೆ ಒಬ್ಬ ಠೊಣಪ ಕೂತಿದ್ದ. ಅವನ ಕಣ್ಣುಗಳು ಕೆಂಪಾಗಿ ಮಂಜುಮಂಜಾಗಿದ್ದವು. ಕೈಯಲ್ಲಿದ್ದ ಸೋರೆ ಬುರುಡೆಯಿಂದ ಯಾವುದೋ ಬಿಳಿಯ ದ್ರವವನ್ನು ಕುಡಿಯುತ್ತಿದ್ದ. ಲಾರಿ ಇದ್ದ ಕಡಿದಾದ ರಸ್ತೆಯ ಎರಡೂ ಬದಿಯಲ್ಲಿ ಸೂಟ್‌ಕೇಸ್‌ಗಳು, ಕಿಟ್‌ಬ್ಯಾಗುಗಳು, ಧಾನ್ಯದ ಚೀಲಗಳು, ಮರದ ಪೆಟ್ಟಿಗೆಗಳನ್ನು ಸಾಲಾಗಿ ಇಟ್ಟಿದ್ದರು.

ತಾಯೋ ಠೊಣಪನ ಬಳಿ ಬಂದ.

''ಡ್ರೈವರ್, ನಾನು ಪ್ರಯಾಣ ಮಾಡಬೇಕಾಗಿದೆ,'' ಎಂದ. ಡ್ರೈವರನು ಕೊಂಬಿನಲ್ಲಿದ್ದ ಹೆಂಡವನ್ನು ಖಾಲಿ ಮಾಡಿ ತೇಗಿದ. ಅವನ ಕೆಂಪು ಕಣ್ಣುಗಳಲ್ಲಿ ನೀರು ಬಂತು. ತಲೆ ಅಲ್ಲಾಡಿಸಿ, ಸಣ್ಣ ಪೀಪಾಯಿಯಿಂದ ಕೊಂಬನ್ನು ಪುನಃ ನಿಧಾನವಾಗಿ, ತುಂಬಿದ.

''ಛಾನ್ಸ್ ಇಲ್ಲ, ಸಾ. ಎಲ್ಲಾ ಫುಲ್ಲಾಗ್ಯೆತೆ !'' ಎಂದು ಗುರುಗುಟ್ಟುತ್ತಾ ಹೇಳಿದ.

''ನಾನು ಹೋಗಲೇಬೇಕಲ್ಲ?''

''ಬೇರೆ ಯಾವುದಾದರೂ ಲಾರಿ ಹುಡುಕಿ.''

ತಾಳೆ ಮಧ್ಯದಲ್ಲಿದ್ದ ಒಂದು ಇರುವೆಯನ್ನು ತನ್ನ ಕಿರುಬೆರಳು ತುದಿಯಿಂದ ಕೊಡವಿದ ಡ್ರೈವರ್.

''ಬೇರೆ ಯಾವ ಲಾರೀನೂ ಇಲ್ಲ. ಊರಲ್ಲಿ ಎಲ್ಲಾ ಕಡೆ ನೋಡ್ಕೊಂಡು ಬಂದೆ.''

ಹಿಂದಿನ ರಾತ್ರಿ ಮಳೆ ಬಂದಿದ್ದು ಮತ್ತು ತೋಗುನ್ಲೆ ಬಳಿಯ ಸೇತುವೆ ಕೊಚ್ಚಿಕೊಂಡು ಹೋಯ್ತು ಅಂತ ಯಾರೋ ಹೇಳಿದ್ದು ನೆನಪಿಗೆ ಬಂತು ಅಂದರೆ, ಸೇತುವೆ ರಿಪೇರಿ ಆಗುವ ತನಕ ಉತ್ತರ ದಿಕ್ಕಿನಿಂದ ಯಾವ ಲಾರಿಯೂ ಅಜಾಕಾ ಪ್ರವೇಶಿಸಲು ಸಾಧ್ಯವಿಲ್ಲ ಎಂದಾಯಿತು. ಆದರೆ ಅವನು ಕಾಯುವಂತಿರಲಿಲ್ಲ.

ಡ್ರೈವರ್ ಕೊಂಬು ಖಾಲಿ ಮಾಡಿ, ತುಟಿ ಚಪ್ಪರಿಸಿದ. ತೂರಾಡುತ್ತಾ ಎದ್ದು ಗುಡುಗಿದ.

''ಯಪ್ಪೊ, ಛಾನ್ಸಿಲ್ಲ ಅಂತ ಹೇಳ್ಲಿಲ್ವಾ ?''

ತಲೆ ಸುತ್ತುತ್ತಾ ಇತ್ತು, ಹಾಗಾಗಿ ಮತ್ತೆ ತನ್ನ ಸೀಟ್‌ಮೇಲೆ ಬಿದ್ದ.

ಆ ಡ್ರೈವರ್ ಹಳಸಿದ ಹೆಂಡವನ್ನು ಕೊಂಬಿನಿಂದ ಹೀರಿ ಸೊರಸೊರ ಅಂತ ಕುಡಿಯುತ್ತಿದ್ದುದನ್ನು ಕಂಡು ತಾಯೋಗೆ ವಿಪರೀತ ಸಿಟ್ಟು ಬಂತು. ಅವನು ಅಡ್ಡಬೀದಿಯಲ್ಲಿ ಶತಪಥ ಹಾಕಿದ. ಅವನ ಹರಿದ ಕ್ಯಾನ್‌ವಾಸ್ ಷೂಗಳು ಕೊಚ್ಚೆಯಲ್ಲಿ ತೊಯ್ದು ತೊಪ್ಪೆಯಾದವು. ಅವನು ಪ್ರಯಾಣ ಮಾಡಲೇಬೇಕಿತ್ತು. ಅವತ್ತೇ ಮಾಡಬೇಕು, ಇಲ್ಲವೆಂದರೆ ಯಾವತ್ತೂ ಇಲ್ಲ. ತೋಗುನ್ಲೆ ಸೇತುವೆ ರಿಪೇರಿಯಾಗಲು ಎಷ್ಟು ಹೊತ್ತಾಗುತ್ತೆ ಎನ್ನುವುದು ಯಾರಿಗೂ ಗೊತ್ತಿದ್ದಿಲ್ಲ. ಆ ದರಿದ್ರ ಡ್ರೈವರ್ ಜೊತೆ ವಾದಿಸಿ ಪ್ರಯೋಜನವಿಲ್ಲ ಎಂದು ಅವನಿಗೆ ಅರ್ಥವಾಯಿತು. ಆ ಮನುಷ್ಯನಿಗೆ ಅಮಲು ಏರುತ್ತಿತ್ತು, ಎದೆಮೇಲೆ ಕುಸಿದಿದ್ದ ಅವನ ತಲೆ, ಜೀವವಿಲ್ಲದಂತೆ ಇಳಿಬಿದ್ದಿದ್ದ ಅವನ ತೋಳುಗಳನ್ನು ನೋಡಿದಾಗ ಅವನು ಉಬ್ಬಿದ ಕಪ್ಪೆಯಂತೆ ಕಾಣುತ್ತಿದ್ದ. ಅಂಥ ಮನುಷ್ಯ ಎಷ್ಟು ಸುರಕ್ಷಿತವಾಗಿ ಗಾಡಿ ನಡೆಸಬಲ್ಲ?

ತಾಯೋ ಲಾರಿಯನ್ನು ನೋಡಿದ. ಈಗ ಅದು ತನ್ನ ನಾಲ್ಕನೆಯ ಚಕ್ರದ ಮೇಲೆ ನಿಂತಿತ್ತು. ಬೇರೆ ಪ್ರಯಾಣಿಕರೂ ಅದನ್ನು ನೋಡಿ ನಾ ಮುಂದು ತಾ ಮುಂದು ಎನ್ನುವ ರೀತಿಯಲ್ಲಿ ಗಾಡಿಯನ್ನು ಹತ್ತಲು ನುಗ್ಗಿದರು. ಕಳಚಿಟ್ಟಿದ್ದ ಸೀಟುಗಳನ್ನು ಮತ್ತೆ ಅವುಗಳ ಸ್ವಸ್ಥಾನದಲ್ಲಿಡಲು ಎಲ್ಲರೂ ಅವಸರ ಮಾಡಿದರು. ತಾಯೋ ಗಾಡಿಯ ಕಡೆ ಬಂದು ಗಾಡಿಯ ಕೆಲಸ ಕಲಿಯುತ್ತಿದ್ದವರಲ್ಲೊಬ್ಬನ ಕಡೆ ನೋಡಿ ಕಣ್ಣು ಮಿಟುಕಿಸಿದ. ಹರಕಲು, ಕಪ್ಪು ಚಡ್ಡಿ ತೊಟ್ಟಿದ್ದ ಆ ಹುಡುಗ ಹತ್ತಿರ ಬಂದ. ಅವನ ಕಪ್ಪು ಎದೆಯ ಮೇಲೆ ಬೆವರ ಹನಿಗಳೂ ಮಿಂಚುತ್ತಿದ್ದವು. ತಾಯೋ ಅವನ ಕಣ್ಣಿಗೆ ಒಂದು ಅರ್ಥಗರ್ಭಿತ ಸಂದೇಶ ರವಾನಿಸಿ ಹತ್ತು ಷಿಲಿಂಗಿನ ಒಂದು ನೋಟನ್ನು ಅವನ ಜಿಡ್ಡು ಕೈಯಲ್ಲಿ ತುರುಕಿದ. ಎದುರುಗಡೆ ಗುಡಿಸಲ ಮುಂದಿದ್ದ ತನ್ನ ಪುಟ್ಟ ಹಸಿರು ಸೂಟ್‌ಕೇಸನ್ನು ಅವನಿಗೆ ತೋರಿಸಿದ. ಆ ಹುಡುಗ ಎಲ್ಲ ಅರ್ಥವಾಯಿತು ಎನ್ನುವಂತೆ ನೋಡಿದ.

''ಸರಿ, ಸಾ'' ಎಂದು ಮೆಲ್ಲನೆ ಉಸುರಿದ.

ತಾಯೋ ತಲೆಯಾಡಿಸಿ, ಮತ್ತೊಮ್ಮೆ ಕಣ್ಣುಹೊಡೆದ. ಆ ಹುಡುಗ ತನ್ನ ಹರಕಲು ಕಪ್ಪು ಚಡ್ಡಿಯ ಒಳಜೇಬಿನಲ್ಲಿ ನೋಟನ್ನು ಇಟ್ಟುಕೊಂಡ. ಏನೋ ಹೊಳೆದಂತಾಗಿ, ಕಿಸೆಯನ್ನು ಮತ್ತೆ ನೋಡಿಕೊಂಡು, ಗಂಟುಗಂಟಾದ ತಲೆಗೂದಲನ್ನು ಕೆರೆದುಕೊಂಡ.

''ನಂಗೆ ಭಯ, ಸಾ'', ಎಂದ.

''ಯಾಕೆ ?'' – ತಾಯೋ ಕೇಳಿದ.

''ಡ್ರೈವರಿಗೆ ಗೊತ್ತಾದ್ರೆ –'' ಅವನು ಅಂಜುತ್ತಾ ಸುತ್ತಲೂ ನೋಡಿದ – ''ಡ್ರೈವರಿಗ ಗೊತ್ತಾಯ್ತು ಅಂದ್ರೆ ಮುಗೀತು ನನ್ನ ಕಥೆ !''

''ಅಯ್ಯೋ, ಸುಮ್ನಿರು, ಏನಾಗಲ್ಲ!'' ಎಂದ ತಾಯೋ, ಮೆಲ್ಲನೆ.

''ಸರಿ, ಸಾ'', ಎಂದ ಹುಡುಗ. ''ಆದ್ರೆ ನಾನೂ ಅವನೂ, ಇಬ್ಬರೂ ದೊಡ್ಡ ಶತ್ರುಗಳು.''

ತಾಯೋ ಮೆಲ್ಲನೆ ಭುಜ ತಟ್ಟಿ ಹೇಳಿದ : ''ನಡಿ ಈಗ, ಹೋಗೋಣ. ಅವರೆಲ್ಲ ಹೊರಟ್ರು !''

ಲಾರಿ ಈಗಾಗಲೇ ಭರ್ತಿಯಾಗಿತ್ತು. ತಾಯೋ ಒಬ್ಬ ಸೈನಿಕ ಹಾಗೂ ಒಬ್ಬ ಹುಡುಗಿಯ ನಡುವೆ ನುಸುಳಿದ. ಸೈನಿಕ ಒಂದು ಗಾಢ ಹಸಿರು ಬಣ್ಣದ ಯೂನಿಫಾರಂ ತೊಟ್ಟಿದ್ದ. ಎರಡೂ ಭುಜಗಳ ಮೇಲೆ ದೊಡ್ಡದಾಗಿ ಕಾಣುವಂತೆ ಒಂದೇ ರೀತಿಯ ಚಿಹ್ನೆಗಳಿದ್ದವು : ಹಳದಿ ಹೊಲದಲ್ಲಿ ಕಪ್ಪು ಜೇಡ.

''ಎಂಬತ್ತೊಂದನೆಯ ಆಫ್ರಿಕನ್ ಡಿವಿಜನ್'', ತಾಯೋ ಗಮನಿಸಿದ. ಸೈನಿಕ ಅವನನ್ನು ನೋಡಿ ಮುಗುಳ್ನಕ್ಕ. ಎಷ್ಟೋ ಕಾಲದಿಂದ ದಾಡಿ ಮಾಡದಿರುವ ಕಾರಣದಿಂದಾಗಿ ಕಪ್ಪಾಗಿದ್ದ ಅವನ ಮುಖ ಅಗಲ ಅಂಚಿನ ಹ್ಯಾಟಿನಲ್ಲಿ ಎದ್ದು ಕಾಣುತ್ತಿತ್ತು.

''ಮೆಲ್ಲಗೆ, ಮೆಲ್ಲಗೆ, ಮಾರಾಯ !'' ಎಂದ ತಾಯೋ ಸಮತೋಲನವನ್ನು ಪಡೆಯಲು ಪ್ರಯತ್ನಿಸಿದಾಗ ''ಅಯ್ಯೋ, ನಾನಂತೂ ಯಾವತ್ತೂ ಇಂಥ ಮೋಟಾರಿನಲ್ಲಿ ಪ್ರಯಾಣ ಮಾಡಿದ್ದಿಲ್ಲ ಬಿಡು. ಅಬ್ಬಾ, ಏನು ಸೆಖೆ !'' ಎಂದ, ರೋಮಗಳಿಂದ ತುಂಬಿದ್ದ ತನ್ನ ಎದೆಗೆ ಉಫ್ ಎಂದು ಊಬಿಕೊಳ್ಳುತ್ತಾ.

''ಅಯ್ಯೋ, ಅಮ್ಮಾ'', ಎಂದು ಕೂಗಿತು ಒಂದು ಹೆಣ್ಣು ದನಿ. ತಾಯೋ ಹೊರಳಿ ನೋಡಿದಾಗ, ಇಟಾಲಿಯನ್ ಷೂಸ್ ಧರಿಸಿದ್ದ ಆ ಹುಡುಗಿಯ ಕಾಲನ್ನು ತಾನು ತುಳಿದಿದ್ದ ಎಂಬುದು ಗೊತ್ತಾಯಿತು.

''ಕ್ಷಮಿಸಿ'' ಎಂದ.

ಆ ಹುಡುಗಿ ಕೋಪದಿಂದ ಬುಸುಗುಟ್ಟಿ, ತನ್ನ ಷೂಗಳ ಧೂಳೊರೆಸಿ, ತೆಳ್ಳಗೆ ತೀಡಿದ ಹುಬ್ಬುಗಳನ್ನು ಗಂಟಿಕ್ಕಿ ಅವನೆಡೆ ತಿರಸ್ಕಾರದಿಂದ ನೋಡಿದಳು. ಸೈನಿಕ ಹಲ್ಲು ಕಿರಿದು ನಕ್ಕ.

''ಇರ್ಲಿ ಬಿಡು ಅವಳ್ನ,'' ಎಂದ ನಗುತ್ತಾ. ''ಅದೇನು ಪರ್ವಾಯಿಲ್ಲ!''

ಎಂಜಿನ್ನು ಕೆಮ್ಮಿತು, ಗೊರಗೊರ ಶಬ್ದ ಮಾಡಿತು, ಗಸ್ ಗಸ್ ಎಂದು ಉಸಿರಾಡಿತು. ಯಾವುದೋ ಒಂದು ಲೋಹದ ಕ್ಲಿಕ್ ಎಂಬ ಶಬ್ದ. ಲಾರಿ ಗಡಗಡ

ಎಂದು ಅಲುಗಾಡಲು ಪ್ರಾರಂಭಿಸಿತು. ತಾಯೋಗೆ ಖುಷಿ. ಹುಡುಗ ಹ್ಯಾಂಡಲ್ ಹೊಡೆದು, ಅದನ್ನು ಕುಟ್ಟಿ, ಕೂಗಿದ :

''ಓಯಾ – ಓ ! ಓಯಾ !...''

ಲಾರಿ ನಿಧಾನವಾಗಿ ಅಜಾಕಾದಿಂದ ಹೊರಹೊರಟಿತು. ತೆಂಗಿನ ಗರಿಗಳನ್ನು ಹೊದಿಸಿದ್ದ ಗುಡಿಸಲುಗಳು ಎಳೆ ಬಿಸಿಲಲ್ಲಿ ಬೆಳ್ಳಗೆ ಕಾಣುತ್ತಿದ್ದವು; ಗೀಜಗ ಹಕ್ಕಿಗಳೂ ತಾಳೆಮರದಲ್ಲಿನ ತಮ್ಮ ಗೂಡುಗಳಲ್ಲಿ ಚಿಲಿಪಿಲಿಗುಟ್ಟುತ್ತಿದ್ದವು; ನಿತಂಬಗಳು ಅಲ್ಲಾಡುವಂತೆ, ಮೆಲ್ಲಗೆ, ಹೆಂಗಸರು ನಡೆದುಹೋಗುತ್ತಿದ್ದರು.

ತಾಯೋ ಚಡಪಡಿಸುತ್ತಿದ್ದ. ಆದರೆ ಲಂಚ ಕೊಟ್ಟು ಕೊನೆಯ ಸೀಟು ಗಿಟ್ಟಿಸದೇ ಹೋಗಿದ್ದಿದ್ದರೆ ಇನ್ನೂ ಫಜೀತಿಯಾಗಿರ್ತಾ ಇತ್ತು. ಇಂಥ ಟೆಲಿಗ್ರಾಂ ಬಂದಾಗ ತಡಮಾಡುವಂತಿದ್ದಿಲ್ಲ. ಮತ್ತೆ ಅದು ಬಂದದ್ದಾದರೂ ಬಯೋರಾನಿಂದ – ಬೇರೆ ಯಾರಿಂದಲೂ ಅಲ್ಲ. ಅವನಿಗರ್ಥವಾಗಲಿಲ್ಲ – ತಾನು ಅಜಾಕಾಗೆ ಬಂದಿರೋದು ಬಯೋರಾಗೆ ಹ್ಯಾಗೆ ಗೊತ್ತಾಯಿತು ? ಟರ್ಮ್ ಮುಗಿದಾಗ ರಜಕ್ಕೆಂದು ಹೊರಡುವ ಮುನ್ನ ಬಯೋರಾಗೆ ತಾಯೋ ಹೇಳಿದ್ದ: ''ನಾನು ರಜೆಯನ್ನು ತುಂಬ ದೂರದ ಒಂದು ಹಳ್ಳಿಯಲ್ಲಿ ಕಳೀತೀನಿ – ಈ ಲ್ಯಾಬ್‌ಗಳ ವಾಸನೆಯಿಂದ, ಈ ಶವಗಳಿಂದ, ಈ ಅಸ್ಥಿಪಂಜರಗಳಿಂದ ತುಂಬ ದೂರ. ಈ ಮೆಡಿಕಲ್ ಸ್ಕೂಲನ್ನು ಮರೀಬೇಕು ಅನ್ನಿಸ್ತಿದೆ.'' ಆಗ ಬಯೋರಾ ಮುಗುಳ್ನಕ್ಕಿದ್ದ. ಅವನು ತಾಯೋಗೆ ಶುಭ ಕೋರಿದ್ದ. ಆದರೆ ಅವನಿಗೆ ಸ್ವತಃ ಇನ್ನೂ ಒಂದು ಪರೀಕ್ಷೆ ಇತ್ತು. ಹಾಗಾಗಿ ಅವನೆಲ್ಲೂ ಹೋಗುವ ಹಾಗಿದ್ದಿಲ್ಲ. ಅವನು ನಿದ್ದೆಗೆಟ್ಟು ಓದಿ ಓದಿ ಸ್ವಲ್ಪ ಸುಸ್ತಾದವನಂತೆ ಕಾಣುತ್ತಿದ್ದ, ಆದರೂ ಅಂತಹ ಚಿಂತೆಯೇನೂ ಇದ್ದಿದ್ದಿಲ್ಲ.

ತಾಯೋ ಆ ಟೆಲಿಗ್ರಾಂಗೂ, ನಂಬರ್ ೪, ಇಕೆ ಸ್ಟ್ರೀಟ್ – ಇಲ್ಲಿನ ವಾಸಸ್ಥಳದಲ್ಲಿ ಬಯೋರಾನನ್ನು ಕೊನೆಯ ಸಲ ನೋಡಿದ್ದಕ್ಕೂ ಹೊಂದಿಸಿ ನೋಡಲು ಪ್ರಯತ್ನಿಸಿದ. ಆದರೆ ಪ್ರಯೋಜನವಾಗಲಿಲ್ಲ. ಒಂದಕ್ಕೊಂದು ಸಂಬಂಧ ಇಲ್ಲ ಅನ್ನಿಸಿತು.

ಟೆಲಿಗ್ರಾಂ ಹೀಗಿತ್ತು: ''ಟಿ.ಬಿ. ಸೀರಿಯಸ್ ಅಟ್ಯಾಕ್. ಪರಿಸ್ಥಿತಿ ಗಂಭೀರ ಅನ್ನುತ್ತಾರೆ ಡಾಕ್ಟರು. ಲಾಗೋಸ್‌ಗೆ ತಕ್ಷಣ ಹೊರಟುಬರುವುದು.''

ಎಷ್ಟು ಅಸಂಗತ ! ಇದು ಹ್ಯಾಗೆ ಸಾಧ್ಯ ! ಆಮೇಲೆ, ಈ ಟೆಲಿಗ್ರಾಂ ಎಬುಟೆ-ಮೆಟ್ಟಾ ತಲುಪಿ ಈಗಾಗ್ಲೇ ಎರಡು ವಾರ ಆಯ್ತು. ಹದಿನಾಲ್ಕು ದಿನ... ದೇವರೆ, ಅವನನ್ನ ಕಾಪಾಡಪ್ಪ ಎಂದು ಪ್ರಾರ್ಥಿಸಿದ. ನನಗೆ ಗೊತ್ತು ಬಯೋರಾ ಸ್ವಲ್ಪ ನಾಜೂಕು ಪ್ರಕೃತಿಯವನೇ ಅಂತ, ಆದ್ರೆ ಅವನು ಚೇತರಿಸಿಕೊಳ್ಳಲಿ – ಇದೊಂದು ಸಲ. ಆಸ್ಪತ್ರೆಯಲ್ಲಿ ಬಯೋರಾ ಬಿಳೀ ಹೊದ್ದಿಕೆಯನ್ನು ಹೊದ್ದು ಮಲಗಿದ್ದಾನೆ ಎಂಬ ಆಲೋಚನೆ ಬರುತ್ತಲೇ ಅವನ ಹೃದಯ ಭಾರವಾಯಿತು. ಆಗಬಾರದ್ದು ಆಗಬಹುದು ಎಂಬ ಯೋಚನೆಯೂ ಬಂದು ದಿಗಿಲುಂಟಾಯಿತು. ಬಯೋರಾ ಇಲ್ಲದ ಜಗತ್ತು ಎಷ್ಟು ಕರಾಳವಾಗಿರಬಹುದು ! ನಂ. ೪, ಇಕೆ ಸ್ಟ್ರೀಟಿನ ರೂಮು ಮತ್ತು ಪಾರ್ಲರ್‌ಗೆ ಇನ್ನುಮೇಲೆ ತಾನೊಬ್ಬನೇ ಬಾಡಿಗೆ ಕೊಡಬೇಕಾಗುತ್ತೆ. ಮೆಡಿಕಲ್ ಸ್ಕೂಲಿಗೆ ಬಂದಾಗಲಿಂದ ಹೌಸ್‌ಬಾಯ್ಗೆ ಇಬ್ಬರೂ ಸೇರಿ ಕೊಡುತ್ತಿದ್ದ ಹಣ ಈಗ ಒಬ್ಬನೇ ಕೊಡಬೇಕು; ಹುಡುಗಿಯರು, ಹಣ, ವೃತ್ತಿಗೌರವ – ಈ ಎಲ್ಲ ನಿರಂತರ ಸಮಸ್ಯೆಗಳು ಎದುರಾದಾಗ ಮಾತಾಡಲಿಕ್ಕೆ ಇನ್ನು ಮೇಲೆ ಯಾರೂ ಇರಲ್ಲ ಎಂಬ ಯೋಚನೆಯಿಂದ ಚಿಂತಾಕ್ರಾಂತನಾದ. ಓ, ಬಯೋರಾ ! ನೀನು ಕಲ್ಲುಬಂಡೆಯಂತೆ ಗಟ್ಟಿ ಮನುಷ್ಯ, ಅಲ್ವಾ ? ನನಗೋಸ್ಕರ ನೀನು ಕಾಯಬೇಕು.

ಲಾರಿ ಹಳ್ಳಿಯನ್ನು ತೊರೆದು ದೂರ ಬಂದಿತ್ತು. ತಾಯೋ ಈಗ ಸ್ವಲ್ಪ ಆರಾಮವಾಗಿ ಕೂರುವಂಥ ಜಾಗಕ್ಕೆ ಪ್ರಯತ್ನ ಮಾಡಿದ. ಅವನ ಕುಂಡೆ ತನ್ನದಲ್ಲ, ಬೇರೆ ಯಾರದೋ ಅನ್ನುವಷ್ಟರ ಮಟ್ಟಿಗೆ ಸೆಡೆತುಕೊಂಡಿತ್ತು. ಅವನ ಕಾಲುಗಳು ಜೋಮು ಹಿಡಿದಿದ್ದವು. ಲಾರಿ ಜೋರಾಗಿ ಹೋಗ್ತಾ ಇಲ್ಲ ಅನ್ನಿಸಿತು ಅವನಿಗೆ. ಆದರೆ ಜೋರಾಗಿ ಹೋಗು ಅಂತ ಡ್ರೈವರಿಗೇನಾದರೂ ಕೂಗಿ ಹೇಳಿದರೆ ನಾನು ಅಂತ ಅವನಿಗೆ ಗೊತ್ತಾಗಿಬಿಡುತ್ತೆ. ಹಾಗಾಗಿ ಸುಮ್ಮನಿರೋದೇ ವಾಸಿ ಎಂದುಕೊಂಡ. ತನ್ನ

## ಎಲೆಯುದುರೂ ಕಾಲ



ಅವನೆಂದೂ ಹಾಗೆ
ಒಬ್ಬನೆ ಬಾರೆಂದರೆ ವಸಂತವನ್ನು ಜೊತೆ ತರುತ್ತಾನೆ

ಎಲೆಗಳ ನಿಶ್ಶಬ್ದದಲಿ
ಬಯಲಲಿ ಮರಗಳು ಕವಾಯತು ಮಾಡುತಿವೆ
ಹರಿವ ಝರಿಯ ಹರವಿನಲಿ
ಗಗನವೇ ನಿಂತಿದೆ ಘನೀಭವಿಸಿ
ಚುಕ್ಕಿಗಳು ಕರಗಿ ಉದುರುತಿಹ ದೃಶ್ಯ
ಅಸ್ಪಷ್ಟವಾಗಿ ನೆನಪಿದೆ.

ಬೇಡ. ನಂಗೆ ಹುಣ್ಣಿಮೆ ಬೇಡ
ಬೆಳದಿಂಗಳು ಬೇಡ
ಸೂರ್ಯನೊಬ್ಬ ಸಾಕು.

ಅವನ ನಿರೀಕ್ಷೆಯಲಿ ಈ ಕಾಳರಾತ್ರಿ ಹಾಗೇ ಸರಿದು ಹೋಗಲಿ

ಅವನೆಂದೂ ಹಾಗೆ
ಬರುವಾಗ ಜೊತೆಯಲ್ಲಿ ಹಕ್ಕಿಗಳ ಹಾಡ ತರುತ್ತಾನೆ

ಅವನು ಜೊತೆಯಲಿದ್ದರೆ
ಉರುಳಿಹೋದ ಬಾಲ್ಯ ಮರಳಿ ಬರುತ್ತದೆ
ದೇಹ ಅನುಭವಗಳ ಪಾಠಶಾಲೆಯಾಗುತ್ತದೆ
ನಾನು ಅವನೆದೆಯಲಿ ಅಡಗಿ ಮಲಗುತ್ತೇನೆ
ಸರಹೊತ್ತಿನಲಿ ನಿರ್ದಾಕ್ಷಿಣ್ಯವಾಗಿ ಎಬ್ಬಿಸಿ
ಗೆಜ್ಜೆನಾದಗಳನು ಬಂದೂಕುಗಳು ಬೇಟೆಯಾಡಿದ ಕಥೆಯ ಹೇಳುತ್ತಾನೆ.

ಆಗ
ಭಯದಿಂದ ಅವನ ನನ್ನೆದೆಯಲಿ ಅಡಗಿಸಿಕೊಳ್ಳುವೆ

ಅವನೀಗ ಇಲ್ಲ
ಅವಧಿಗೆ ಮುಂಚೆ ಬಂದ
ಎಲೆಯುದುರೂ ಕಾಲಕ್ಕೆ ಸಿಕ್ಕು ಎಲ್ಲಿ ಉದುರಿ ಹೋದನೋ ?

ತೆಲುಗು ಮೂಲ: ಮಹೆಜಬೀನ್; ಕನ್ನಡಕ್ಕೆ: ಚಿದಾನಂದ ಸಾಲಿ, ಸಿರಿವಾರ ಅಂಚೆ, ರಾಯಚೂರು – ೫೮೪ ೧೨೮

ಜೊತೆಗಿದ್ದ ಪ್ರಯಾಣಿಕರನ್ನೊಮ್ಮೆ ನೋಡಿದ. ಅವನ ಸುತ್ತಲಿದ್ದ ಎಲ್ಲರೂ ಹರಟೆ ಹೊಡೆಯುತ್ತಿದ್ದರು. ಹಿಂದಿನ ಸೀಟಿನ ಮೂರನೇ ಸಾಲಿನಲ್ಲಿ ಕುಳಿತಿದ್ದ ದಪ್ಪನೆಯ, ಹಣವಂತಳಂತೆ ಕಾಣುತ್ತಿದ್ದ ಹೆಂಗಸಿನ ಮಾತು ಅವನಿಗೆ ಕೇಳಿಸುತ್ತಿತ್ತು.

''ಈ ಜೀನ್ಸ್ ತಗೊಂಡು ಲಾಗೋಸ್ ತಲ್ಪೋ ಹೊತ್ತಿಗೆ ಅವಕ್ಕೆ ಅಷ್ಟು ಬೆಲೆ ಇರಲ್ಲ. ಕಡಿಮೆ ಬೆಲೆಗೆ ಮಾರ್ಬೇಕಾಗುತ್ತೆ. ವ್ಯಾಪಾರಿಗಳಾದ ನಮ್ಮ ಕಷ್ಟ ಅವರಿಗೇನು ಗೊತ್ತಾಗುತ್ತೆ? ನಮಗೆ ಚಿಂತೆ ತಪ್ಪಲ್ಲ.''

ಅವಳು ತಾಡಪಲ್ಲಿಗೆ ಒರಗಿಕೊಂಡು ಕುಳಿತಿದ್ದಳು. ಒಂದು ಕೈಯಲ್ಲಿ ಹಳದಿ ಬಣ್ಣದ ವೆಲ್ವೆಟ್ ಬ್ಯಾಗ್ ಇತ್ತು. ಅವಳ ಗಲ್ಲಗಳು ಬಾಯಲ್ಲಿ ವಿಪರೀತ ಗಾಳಿ ತುಂಬಿದೆಯೇನೋ ಎನ್ನುವ ರೀತಿಯಲ್ಲಿದ್ದವು. ತಾಯೋ ಅವಳ ಬಗ್ಗೆ ಸರಿಯಾಗಿ ಊಹಿಸಿಕೊಳ್ಳಲು ಸಾಧ್ಯವಿತ್ತು. ಲಾಗೋಸ್‌ನಲ್ಲಿ, ಹಣವಂತಳಾದ ಈ ಮನೆ ಮಾಲೀಕಳು ತನ್ನ ಬಾಡಿಗೆದಾರರಿಂದ ಅನಾರೋಗ್ಯಕರವಾದ ಕಾಂಪೌಂಡಿನಲ್ಲಿನ ಸರಿಯಾದ ಗಾಳಿ-ಬೆಳಕು ಇಲ್ಲದ ಕೋಣೆಗಳಿಗೆ ಅರವತ್ತು ಷಿಲಿಂಗು ವಸೂಲಿ ಮಾಡುತ್ತಿರುವಂತೆ ಅವಳನ್ನು ಅವನು ಕಲ್ಪಿಸಿಕೊಳ್ಳಬಹುದಾಗಿತ್ತು.

''ಈ ಹೊತ್ತು ನನ್ನ ಗಂಡ ಅಲ್ಲಿ ಏನು ಮಾಡ್ತಾ ಇದಾನೆ ಅನ್ನೋದು ನನಗೆ ಗೊತ್ತು.'' ಅವಳು ಮಾತಾಡುತ್ತಲೇ ಇದ್ದಳು. ''ನಾನು ಈ ಥರ ಹೊರಗಡೆ ಹೋದಾಗ, ಅವನೇನ್ಮಾಡ್ತಾನೆ ಅನ್ನೋದೆಲ್ಲ ನನಗೆ ಗೊತ್ತು.'' ಈಗ ದನಿ ತಗ್ಗಿಸಿ, ಬಹಳ ಜಾಣೆಯಂತೆ ಮುಖ ಮಾಡಿದಳು.

ಮಗುವಿಗೆ ಮೊಲೆಯೂಡಿಸುತ್ತಿದ್ದ ಹೆಂಗಸು ಕೇಳಿದಳು : ''ಏನು ಮಾಡ್ತಾನೆ ?''

''ಮನೆಗೆ ಯಾರ್ಯಾರೋ ಹೆಂಗಸರು ಬರ್ತಾರೆ. ನನಗೇನು ಸಿಗಲ್ವೋ ಅದೆಲ್ಲ ಅವರಿಗೆ ಸಿಗುತ್ತೆ! ಅವರು ಮತ್ತು ನನ್ನ ಗಂಡ ಚೆನ್ನಾಗಿ ಮಜಾ ಮಾಡ್ತಾರೆ!''

ಮಗುವನ್ನು ತನ್ನೆದೆಗೆ ಇನ್ನೂ ಹೆಚ್ಚು ಹತ್ತಿರ ತಂದುಕೊಂಡ ಹೆಂಗಸು ಮುಗುಳ್ನಕ್ಕು ಕೇಳಿದರು : ''ಪಾಪ, ನಿನಗೆ ಗಂಡಸರ ಚಿಂತೆ, ಅಲ್ವಾ ?''

''ಗಂಡಸರು ಏನೂ ಪ್ರಯೋಜನ ಇಲ್ಲ. ಅವರಿಗೆ ವಯಸ್ಸು ಎಷ್ಟೇ ಆಗಿರ್ಲಿ, ಹೆಂಗಸರು ಮಾತ್ರ ಅವರ ಬೆನ್ನು ಬೀಳ್ಬೇಕು ಅನ್ನೋ ಆಸೆ ಅವರಿಗೆ!''

ಆ ಹಣವಂತ ಹೆಂಗಸು ತನ್ನ ತುಚ್ಛ ಭಾವನೆಯನ್ನು ಕೆಳತುಟಿಯನ್ನು ಮುಂಚಾಚುವುದರ ಮೂಲಕ ವ್ಯಕ್ತಪಡಿಸಿದಳು.

ತಾಯೋನ ಎಡಬದಿಯಲ್ಲಿದ್ದ ಹುಡುಗಿ ಅವನಿಗೆ ತನ್ನ ಮೊಣಕೈಯಿಂದ ತಿವಿಯಲಿಕ್ಕೆ ಶುರುಮಾಡಿದಳು. ಅವನು ಅವಳ ಕಡೆ ತಿರುಗಿ ಸಿಟ್ಟಿನಿಂದ ನೋಡಿದ. ಸೈನಿಕನು ಹೊಳೆಯುವ ಪ್ಯಾಕ್‌ನಿಂದ ಅವನಿಗೆ ಸಿಗರೇಟು ಕೊಡಲು ಮುಂದಾದ.

''ನಾನು ಸಿಗರೇಟು ಸೇದೋಲ್ಲ'' ಎಂದ ತಾಯೋ.

ಹುಡುಗಿ ಒಂದು ಸಿಗರೇಟನ್ನು ತೆಗೆದುಕೊಂಡಳು. ಅವಳ ಸಿಂಗರಿಸಿದ ಉಗುರುಗಳನ್ನು ನೋಡಿ ತಾಯೋಗೆ ನಂ. ೪, ಇಕೆ ಸ್ಟ್ರೀಟ್‌ನ ಹಿತ್ತಲಲ್ಲಿ ತಾನೊಂದು ಸಲ ತನ್ನ ಕೋಳಿಮರಿಗಳ ಮೇಲೆ ಗಿಡುಗವೊಂದು ಎರಗಿದಾಗ ಅದನ್ನು ಕೊಂದಾಗ ಕಂಡ ಅದರ ಮೊನೆಯುಗುರುಗಳ ನೆನಪಾಯಿತು. ಅವನು ಬೆಚ್ಚಿ, ನಡುಗಿದ.

''ನಾನು ವಾಪಸ್ಸು ಬಂದಿದ್ದಕ್ಕೆ ನನಗೆ ಸಂತೋಷ,'' ಎಂದ ಆ ಸೈನಿಕ. ಕಿಕ್ಕಿರಿದ ಆ ವಾತಾವರಣದಲ್ಲಿ ಅವನು ಸಿಗರೇಟಿನ ಹೊಗೆಯುಗುಳಿದ. ತಾಯೋಗೆ ಉಸಿರು ಕಟ್ಟಿದಂತಾಗಿ ಕೆಮ್ಮಿದ.

''ನನಗೂ ಅಷ್ಟೆ,'' ಎಂದಳು ಹುಡುಗಿ ಮೆಲುದನಿಯಲ್ಲಿ. ಅವಳು ತನ್ನ ಸೀಟಿನ ಮೇಲೆ ಆಕಡೆ ಈಕಡೆ ಸರಿದಳು.

''ಯುದ್ಧ ನಡೆಯೋವಾಗ ನಮಗೆ ನರಕ. ಮಾತಾಡಾಕೆ ಯಾರೂ ಇರಲ್ಲ.''

''ನೀನು ಬರ್ಮಾದವನಾ ?'' ಎಂದು ಕೇಳಿದಳು.

ಸೈನಿಕ ಹೌದೆಂದು ತಲೆಯಾಡಿಸಿದ. ''ಡಿಟ್ಯಾಚ್‌ಮೆಂಟ್ ೭೦೮, ವೆಸ್ಟ್ ಆಫ್ರಿಕನ್ ಫೋರ್ಸಸ್.''

ಸ್ವಲ್ಪ ಹೊತ್ತು ಮೌನ. ಲಾರಿ ಈಗ ಸ್ವಲ್ಪ ವೇಗವಾಗಿ ಹೋಗುತ್ತಿತ್ತು. ಮಡ್‌ಗಾರ್ಡ್ ಮೊದಲಿಗಿಂತ ಹೆಚ್ಚು ಜೋರಾಗಿ ಶಬ್ದ ಮಾಡುತ್ತಿತ್ತು. ರಸ್ತೆಯ ಎರಡೂ ಬದಿಯಲ್ಲಿನ ಹಳದಿಮಿಶ್ರಿತ ಅರಣ್ಯಪ್ರದೇಶ ಗಿರಗಿರನೆ ತಿರುಗಿ ಹಿಂದೆ ಸರಿದಂತೆ ಭಾಸವಾಗುತ್ತಿತ್ತು. ಆಗೊಮ್ಮೆ ಈಗೊಮ್ಮೆ ತಾಳೆಮರವೊಂದರ ತುದಿಯು ಕಣ್ಣಿಗೆ ಬೀಳುತ್ತಿತ್ತು, ಮರುಕ್ಷಣ ಮಾಯವಾಗುತ್ತಿತ್ತು.

''ಆ ಡ್ರೈವರು, ಅವನಿಗೆ ಅಮಲೇರಿದೆ ಈಗ!'' ಎಂದು ಸೈನಿಕ ಎಲ್ಲರಿಗೂ ಕೇಳಿಸುವಂತೆ ಜೋರಾಗಿ ಕೂಗಿದ.

''ಅವನು ಯಾವಾಗ್ಲೂ ಡ್ರೈವ್ ಮಾಡೋದೆ ಹೀಗೆ,'' ಎಂದು ಕೂಗಿದಳು ಹುಡುಗಿ.

''ನೀನು ಅವನ ಜೊತೆ ಮುಂಚೇನೂ ಪ್ರಯಾಣ ಮಾಡಿದೀಯಾ, ಹಾಗಾದ್ರೆ ?''

ಅವಳು ನಕ್ಕು ಹೇಳಿದಳು : ''ಬೇಕಾದಷ್ಟು ಸಲ.''

''ನೀನು ಎಲ್ಲಿಗೆ ಹೋಗ್ತೀಯ ?''

''ಎಲ್ಲಾದ್ರೂ ಆಯ್ತು'' ಎಂದು ಮತ್ತೆ ಕೂಗಿ ಹೇಳಿದಳು. ''ಅಜಾಕಾ, ಇಲ್ಲ ಅಂದರೆ ಇಕೋಡು, ಇಲ್ಲ ಅಂದರೆ ಬಾವೋಲೆ. ನಾನು ಸ್ವತಂತ್ರ ಹುಡುಗಿ ಅಲ್ವಾ ? ಲಾಗೋಸ್ ಬೇಜಾರಾಯ್ತು ಅಂದರೆ ಹೊರಟುಬರ್ತೀನಿ.''

ಸೈನಿಕ ಲಾರಿಯ ಮೇಲ್ಛಾವಣಿಯನ್ನು ಹಿಡಿದುಕೊಂಡು ಸ್ಥಿರವಾಗಿ ನಿಲ್ಲಲು ಪ್ರಯತ್ನಿಸುತ್ತಾ ಅವಳನ್ನೇ ದಿಟ್ಟಿಸಿ ನೋಡಿದ ಅವಳನ್ನು ಪರೀಕ್ಷಿಸುವಂತೆ. ಹಿಂದೆ ಹೊಗೆಯುಗುಳುತ್ತಾ ಲಾರಿ ಮುಂದೆ ಹೊರಟಿತು. ಸೈನಿಕ ಹೇಳಿದ : ''ನಾನು ನಿನಗೆಲ್ಲೋ ನೋಡಿರೋ ಹಾಗೆ ಕಾಣುತ್ತೆ. ೧೯೪೮ರಲ್ಲಿ ನೀನೇನಾದ್ರೂ ಕ್ಲಾರ್ಕ್ಸ್ ಹೋಟಲಿನಲ್ಲಿದ್ಯಾ ?''

ಲಿಪ್‌ಸ್ಟಿಕ್ ಬಳಿದುಕೊಂಡಿದ್ದ ಚೆಂದುಟಿಯ ಹುಡುಗಿ ನಸುನಕ್ಕು ಹೇಳಿದಳು : ''ಹೌದು.''

''ನಿನ್ನ ಗಂಡನ ಸಮಾಚಾರ ಏನು ಮತ್ತೆ ?''

ಅವಳು ಒಂದು ಕ್ಷಣ ಸುಮ್ಮನಿದ್ದು ನಂತರ ಹೇಳಿದಳು : ''ನೀನು ಸುಳ್ಳು ಹೇಳ್ತೀಯ. ನನಗೆ ಯಾವ ಗಂಡಾನೂ ಇಲ್ಲ. ಯಾವತ್ತೂ ಇದ್ದಿಲ್ಲ!''

ಸೈನಿಕನು ಅವಳನ್ನು ನೋಡಿ ನಕ್ಕ.

''ಅಲ್ಲ, ನಾನು ಏನು ಮಾಡಬೇಕು, ಮಾಡಬಾರದು ಅನ್ನೋದನ್ನ ಹೇಳೋಕೆ ಒಬ್ಬ ಗಂಡಸಿಗೆ ಏನು ಅಧಿಕಾರ ಇದೆ ?'' ಎಂದು ಅವಳು ಕಿರುಚಿದಳು.

ಸೈನಿಕನು ನಗುತ್ತಲೇ ಇದ್ದ.

''ನಾನೇನು ಗುಲಾಮಳಾ ?''

ನಕ್ಕು ನಕ್ಕು ಸೈನಿಕನ ಕಣ್ಣಲ್ಲಿ ನೀರು ಬಂತು. ತಲೆ ಅಲ್ಲಾಡಿಸಿದ. ಮತ್ತೆ ನಕ್ಕ.

''ನಾನೀಗ ಸ್ವತಂತ್ರಳಾಗಿರೋದಕ್ಕೇನೇ ನಾನು ಚೆನ್ನಾಗಿರೋದು. ನನಗಿವತ್ತು ಏನಾದ್ರೂ ಬೇಕು ಅಂದ್ರೆ, ನಾನದನ್ನು ಕೊಳ್ಳಬಲ್ಲೆ –''

''ಸರಿ!'' ಎಂದ ಸೈನಿಕ, ಕಣ್ಣೀರು ಒರೆಸಿಕೊಳ್ಳುತ್ತಾ ಮತ್ತು ಸಿಂಬಳ ಸೀನುತ್ತಾ. ''ಆಹ್! ಹ್ಹಹ್ಹಹ್ಹ! –''

''ನೀನು ಮತ್ಯಾವತ್ತೂ ನನಗೆ ಅವಮಾನ ಮಾಡಬೇಡ, ಗೊತ್ತಾಯ್ತಾ ?''

''ಕ್ಷಮಿಸು'' ಎಂದ ಸೈನಿಕ, ತನ್ನ ವಿಶಾಲವಾದ, ಒರಟು ಕೈಗಳಿಂದ ಮುಖ ಮುಚ್ಚಿಕೊಳ್ಳುತ್ತಾ.

ಈಗ ಅವರು ಇನ್ನೊಂದು ಹಳ್ಳಿಯವರೆಗೆ ಬಂದಿದ್ದರು. ತಾಯೋ ರಸ್ತೆಯ ಎರಡೂ ಬದಿಯಲ್ಲಿದ್ದ ಮನೆಗಳನ್ನು ಮತ್ತು ರಸ್ತೆಯನ್ನು ದಾಟುತ್ತಿದ್ದ ಮೇಕೆಗಳನ್ನು ನೋಡುತ್ತಿದ್ದ. ಇದ್ದಕ್ಕಿದ್ದಂತೆ ಆ ಹುಚ್ಚು ಲಾರಿ ಅವುಗಳ ಮೇಲೆ ಹರಿದುಹೋಯಿತು. ಕ್ಷಣಾರ್ಧದಲ್ಲಿ ಅವುಗಳ ಮೈಯಿಂದ ರಕ್ತ-ಮಾಂಸ ಹೊರಚೆಲ್ಲಿತು. ಕೊಳೆಯಾದ, ಕಂದುಬಣ್ಣದ ಜಂಪರುಗಳನ್ನು ತೊಟ್ಟ ಮತ್ತು ಹೆಗಲಿಗೆ ಮರಹತ್ತುವ ಹಗ್ಗವನ್ನು ಇಳಿಬಿಟ್ಟಿದ್ದ ಹೆಂಡ ಇಳಿಸುವವರು, ತೆಳುವಾದ ಗೌನುಗಳನ್ನು ಧರಿಸಿ ಸೈಕಲ್ ಮೇಲೆ ಹೋಗುತ್ತಿದ್ದ ಜನ, ಮಾವಿನ ಹಣ್ಣು ತಿನ್ನುತ್ತಾ ಹೋಗುತ್ತಿದ್ದ ಹುಡುಗರು – ಎಲ್ಲರೂ ಹುಚ್ಚು ಹೊಳೆಯಂತೆ ಹರಿದುಹೋಗುತ್ತಿದ್ದ ಈ ಲಾರಿಯಿಂದ ತಕ್ಷಣ ದೂರ ಸರಿದುನಿಂತು ಅದನ್ನೇ ದಿಟ್ಟಿಸಿ ನೋಡಿದರು.

''ಅವನಿಗೆ ಎಚ್ಚರಿಕೆ ಕೊಡಿ ಯಾರಾದ್ರೂವೆ. ಈ ಹಳ್ಳಿಯ ಹತ್ತಿರ ಒಂದು ರೈಲ್ವೇ ಕ್ರಾಸಿಂಗ್ ಇದೆ. ಎಚ್ಚರಿಕೆ ಕೊಡಿ ಅವನಿಗೆ!'' ಎಂದು ತಾಯೋ ಕೂಗಿದ.

ಯಾರೂ ಮಾತಾಡಲಿಲ್ಲ. ಸೈನಿಕನಿಗೆ ಕೋಪ ಬಂದಿತ್ತು. ಹಣವಂತ ಹೆಂಗಸು ಕಣ್ಣಗಲಿಸಿ ನೋಡುತ್ತಿದ್ದಳು. ಅವಳು ತನ್ನ ಹಣದ ಚೀಲವನ್ನು ಮುಟ್ಟಿ ಮುಟ್ಟಿ ನೋಡಿಕೊಳ್ಳುತ್ತಿದ್ದಳು. ಮಗುವನ್ನೆತ್ತಿಕೊಂಡಿದ್ದ ಹೆಂಗಸು ಗಟ್ಟಿಯಾಗಿ, ಬಳುಕದೆ, ಕುಳಿತಿದ್ದಳು. ಪೊದೆಗಳು ಗಿರಗಿರ ಅಂತ ತಿರುಗುತ್ತಿವೆಯೇನೋ ಎಂಬಂತೆ ಅವಳಿಗೆ ಭಾಸವಾಯಿತು. ಮೆಲ್ಲಗೆ ಅವಳು ತನ್ನ ತಲೆಗೆ ಸುತ್ತಿಕೊಂಡಿದ್ದ ಉದ್ದನೆಯ ವಸ್ತ್ರವನ್ನು ಬಿಚ್ಚತೊಡಗಿದಳು.

''ಡ್ರೈವರ್!'' ತಾಯೋ ಕೂಗಿದ, ''ಡ್ರೈವರ್! ...ಡ್ರೈವರ್!'' ಲಾರಿಯು ಎಡಕ್ಕೆ, ಬಲಕ್ಕೆ ಹೊಯ್ದಾಡುತ್ತಾ ಓಡುತ್ತಿತ್ತು. ಹೆಂಡದ ಮಹಾತ್ಮೆ!

''ನನಗೆ ಗೊತ್ತಿತ್ತು! ಚೆನ್ನಾಗಿ ಕುಡಿದಿದಾನೆ. ಸಖತ್ತಾಗಿ. ನಾವಿನ್ನೇನು ಉರುಳಿ ಕೆಳಗೆ ಪೊದೆಯಲ್ಲಿ ಬೀಳೋದಂತೂ ಖಾತ್ರಿ. ಎಚ್ಚರಿಕೆ ಕೊಡಿ ಅವನಿಗೆ.''

ತಾಯೋ ಸಿಟ್ಟಿನಿಂದ ಲಾರಿಯ ಛಾವಣಿಗೆ ತನ್ನ ಎರಡೂ ಮುಷ್ಟಿಗಳಿಂದ ಗುದ್ದಿದ.

ಮೇಲೇಳಲಿಕ್ಕೆ ಪ್ರಯತ್ನ ಮಾಡಿದ. ಲಾರಿಯಲ್ಲಿ ಕೂಗಾಟ, ಕಿರುಚಾಟ. ಶ್ರೀಮಂತ ಹೆಂಗಸು ಕಿಟಾರನೆ ಕಿರುಚಿದಳು. ಸೈನಿಕನು ಹುಡುಗಿಯ ಸೊಂಟವನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದ. ಅವಳು ಸ್ವಲ್ಪವೂ ನಾಚಿಕೆಯಿಲ್ಲದೆ ಅವನ ಯೂನಿಫಾರಂಗೆ ಅಂಟಿಕೊಂಡು ಅವನ ಎದೆಯಲ್ಲಿ ತನ್ನ ಮುಖವನ್ನು ನೆಟ್ಟಳು.

ಟೈರುಗಳು ಹರಿದ ಶಬ್ದದೊಡನೆ ಲಾರಿಯು ಒಂದು ತಿರುವಿನ ಸುತ್ತ ಗಿರಕಿ ಹೊಡೆಯಿತು. ತಾಯೋ ಆ ಮುದ್ದಿನ ಜೋಡಿಗೆ ಡಿಕ್ಕಿ ಹೊಡೆದ. ಅವನು ಸರಿಯಾಗಿ ನಿಲ್ಲಲು ಪ್ರಯತ್ನಿಸಿದ, ಆದರೆ ಅವನ ತಲೆ ಯಾವುದಕ್ಕೋ ಬಡಿಯಿತು. ಒಮ್ಮೆಲೆ ಕುತ್ತಿಗೆ ನೋಯಲು ಪ್ರಾರಂಭಿಸಿತು.

ಪವಾಡದ ರೀತಿಯಲ್ಲಿ ಲಾರಿ ಮತ್ತೆ ಸೀದಾ ಓಡಲು ಪ್ರಾರಂಭಿಸಿತು. ಆದರೆ ಇದ್ದಕ್ಕಿದ್ದ ಹಾಗೆ ಕಿವಿ ಕೆಪ್ಪಾಗುವಂತೆ ಒಂದು ದೊಡ್ಡ ಶಬ್ದವಾಯಿತು; ಒಂದು ಮಡ್‌ಗಾರ್ಡ್ ರಸ್ತೆಗೆ ಅಪ್ಪಳಿಸಿತು; ದಟ್ಟ ಹೊಗೆಯಿಂದಾಗಿ ಏನೂ ಸರಿಯಾಗಿ ಕಾಣಿಸುತ್ತಿರಲಿಲ್ಲ. ಮಗುವಿನ ಜೊತೆಯಲ್ಲಿದ್ದ ಹೆಂಗಸು ಕಿರುಚಿದಳು.

''ಅಯ್ಯೋ! ...ಅಯ್ಯೋ! ... ಈ ಪಾಪಿ ನಮ್ಮನ್ನು ಸಾಯಿಸಿದ. ಅಯ್ಯೋ!''

ಅವಳು ತಕ್ಷಣವೆ ಮಗುವನ್ನು ತನ್ನ ತಲೆಗೆ ಸುತ್ತಿಕೊಂಡಿದ್ದ ಬಟ್ಟೆಯಲ್ಲಿ ಸುತ್ತಿ, ಆತಂಕದಿಂದ ಪೊದೆಯತ್ತ ನೋಡಿದಳು. ಲಾರಿಯು ಇನ್ನೊಂದು ಸಲ ಸುತ್ತಿತ್ತು; ಅದರ ಪಾರ್ಶ್ವದ ಒಂದು ಭಾಗ ಮುರಿದು ಬಿತ್ತು; ಛಾವಣಿ ಕುಸಿದುಬಿತ್ತು. ಮನುಷ್ಯ ದೇಹಗಳು ಲಾರಿಯ ಮಧ್ಯದಲ್ಲಿ ಸಿಕ್ಕಿಹಾಕಿಕೊಂಡವು – ಬೆಚ್ಚಿದ ಮಕ್ಕಳು ಒಬ್ಬರನ್ನೊಬ್ಬರು ತಬ್ಬಿಕೊಂಡು ಬಿದ್ದಂತೆ.

''ಡ್ರೈವರ್! ಡ್ರೈವರ್! ಓಹ್!''

ಹೆಂಗಸು ತನ್ನ ಮಗುವನ್ನು ಕಿಟಕಿಯಿಂದ ಹೊರ ಎಸೆದಳು. ಅದು ಪೊದೆಯಲ್ಲಿ ಬಿತ್ತು. ಕೂಗಾಟ, ಹೆಂಗಸರ ಆರ್ತನಾದ... ನಂತರ ನೀರವತೆ.

ಜನರು ಜಜ್ಜಿಹೋಗಿದ್ದ ಮೀನುಗಳು, ಬೀನ್ಸ್ ಮತ್ತು ಈರುಳ್ಳಿಗಳ ನಡುವೆ ದಾರಿಮಾಡಿಕೊಂಡು ಹೋಗುತ್ತಿದ್ದರು. ಹಳಿಗಳು ರಕ್ತದಿಂದ ತೊಯ್ದಿದ್ದವು. ಕಲ್ಲುಗಳ ನಡುವೆ ರಕ್ತದ ಮಡುಗಳು.

* * *

''ಅಯ್ಯೋ ದೇವರೇ!'' ಎಂದು ಉದ್ಗರಿಸಿದನು ಡಾಕ್ಟರ್ ಎಮಾ ಜೊತೆ ಬಂದಿದ್ದ ಛಾರ್ಜ್ ನರ್ಸ್, ಡಾಕ್ಟರಿನ ಕಾರಿನಿಂದ ಕೆಳಗಿಳಿಯುತ್ತಾ. ''ಏನು ರಂಪ ಇದು...''

ಡಾಕ್ಟರನೂ ಕೆಳಗಿಳಿದು ಬಂದು ಅವನೊಡನೆ ನಿಂತು ಆ ಭಗ್ನಾವಶೇಷವನ್ನು ನೋಡಿದ. ಲಾರಿಯು ರೈಲ್ವೇ ಕ್ರಾಸಿಂಗಿನಿಂದ ಮೂವತ್ತು ಗಜ ದೂರದಲ್ಲಿ ಒಂದು ಹಳ್ಳದಲ್ಲಿ ಬಿದ್ದಿತ್ತು. ಆವಿಯೆಂಜಿನ್ನು ಆ ಲಾರಿಯನ್ನು ಎಳೆದು ತಂದಿದ್ದ ಹಾದಿಯಲ್ಲಿ ಹಿಸುಕಿದ ಹುಲ್ಲಿನ ಗುರುತುಗಳಿದ್ದವು. ಒಂದು ಮಡ್‌ಗಾರ್ಡ್ ಹರಿದು ಚಿಂದಿಯಾಗಿತ್ತು. ಯಾವುದೋ ಕಬ್ಬಿಣದ ಮುಷ್ಟಿಯಿಂದ ಅಥವಾ ಭಯಂಕರ ರಾಕ್ಷಸನೊಬ್ಬನಿಂದ ಗುದ್ದಲ್ಪಟ್ಟಂತೆ ರೇಡಿಯೇಟರ್ ಜಜ್ಜಿಹೋಗಿತ್ತು. ಮುಂದಿನ ಚಕ್ರಗಳಲ್ಲೊಂದು ಹಳ್ಳದ ಮೇಲೆ ಹೋಗಿ ಬಿದ್ದಿತ್ತು – ವಿಕಾರವಾಗಿ.

''ಭಯಂಕರ!'' ಎಂದನು ಡಾಕ್ಟರ್ – ಗಂಭೀರವಾಗಿ. ''ಎಲ್ಲ ಸತ್ತಿದ್ದಾರಾ?''

''ಎಲ್ಲರೂ ಅಲ್ಲ, ಸರ್'', ಎಂದ ಛಾರ್ಜ್ ನರ್ಸ್. ''ಪೊಲೀಸರಿಗೆ ಪೊದೆಯಲ್ಲಿ ಒಂದು ಮಗು ಸಿಕ್ಕಿದೆ. ಅದರ ಮೈಮೇಲೆ ಒಂದೂ ಗಾಯ ಇಲ್ಲ. ಆಮೇಲೆ, ಇನ್ನೊಬ್ಬ ಮನುಷ್ಯ ಇದಾನೆ. ಯಾರೋ ಮೆಡಿಕಲ್ ಸ್ಟೂಡೆಂಟಂತೆ. ಭಯಂಕರ ಫ್ರ್ಯಾಕ್ಚರ್ ಆಗಿದೆ. ಇನ್ನು ಬಾಕಿಯವರ ಬಗ್ಗೆ ನನಗೇನೂ ಗೊತ್ತಿಲ್ಲ'' ಅವನು ಮಾತನ್ನು ನಿಲ್ಲಿಸಿ ಕೆಳಗೆ ನೋಡಿದ. ಅಲ್ಲಿ ರಕ್ತದ ಮಡುವಿನಲ್ಲಿ ಹೆಂಗಸೊಬ್ಬಳ ಬಿಳಿಯ ಇಟಾಲಿಯನ್ ಷೂ ಬಿದ್ದಿತ್ತು. ಅದು ಎಡಗಾಲಿನದಾಗಿತ್ತು. ಅದರ ಬಕಲ್ ಕಿತ್ತುಬಂದಿತ್ತು.

''ಅಲ್ಲ, ಸ್ವಲ್ಪ ಯೋಚಿಸಿ ನೋಡಿ. ಇದು ಯಾರಿಗೋ ಸೇರಿದ್ದಾಗಿತ್ತು ಅನ್ನೋದನ್ನ!'' ಹುಡುಗರು ಮತ್ತು ಹುಡುಗಿಯರು, ಗಂಡಸರು ಮತ್ತು ಹೆಂಗಸರು ಮೆಲ್ಲಗೆ, ಭಯದಿಂದ ಆ ಅಪಘಾತವನ್ನು ನೋಡುತ್ತಾ ಹೋಗುತ್ತಿದ್ದರು. ''ಇಂಥದನ್ನೇನಾದರೂ ನಾನು ನೋಡಿದಾಗ ನನಗೆ ಕೆಲವೊಮ್ಮೆ ಬದುಕಿನ ಬಗ್ಗೆ ಆಶ್ಚರ್ಯ ಆಗುತ್ತೆ.''

ಡಾಕ್ಟರ್ ಎಮಾ ಹೇಳಿದ: ''ನಾವೀಗ ವಾಪಸ್ಸು ಹೋಗಬೇಕು; ನಾನಿನ್ನೂ ಆ ಶವದ ಬಗ್ಗೆ ರಿಪೋರ್ಟ್ ಬರೆದಿಲ್ಲ.''

ಛಾರ್ಜ್ ನರ್ಸ್ ನಿಟ್ಟುಸಿರುಬಿಟ್ಟ. ''ಈಥರದ್ದೆಲ್ಲ ನೋಡಿದಾಗ ನನಗನ್ನಿಸುತ್ತೆ – ಸಾವು ಅನ್ನೋದು ಒಂದು ಜೇಡರ ಬಲೆ ಅಂತ. ನಾವೆಲ್ಲಾ ಅದರತ್ತ ಸೆಳೆಯಲ್ಪಡುತ್ತೇವೆ – ನೊಣಗಳ ಥರ. ಈ ಜನ ನೋಡಿ. ಯಾರ್‍ಯಾರೋ! ಒಂದು ಲಾರಿಯಲ್ಲಿ ಸಿಕ್ಕುಹಾಕಿಕೊಂಡು ಸತ್ತರು!''

ಡಾಕ್ಟರ್ ಎಮಾ ಹೇಳಿದ: ''ಎಲ್ಲ ಮುಗೀತು ಈಗ.'' ಆ ಅಪಘಾತವನ್ನು ನೋಡುತ್ತಾ ಒಂದು ಕ್ಷಣ ಸುಮ್ಮನಾದ. ''ಆ ಮೆಡಿಕೊ, ತಾಯೋ, ಫ್ರ್ಯಾಕ್ಚರ್ ಆಗಿರೋನು... ಒಂದು ರೀತಿಯಲ್ಲಿ ನತದೃಷ್ಟ. ಸತ್ತುಹೋದ ಬಯೋರಾನ ಕಾಣಲಿಕ್ಕೆ ಅಂತ ಅವಸರದಿಂದ ಹೊರಟ, ಮೂಳೆ ಮುರ್‍ಕೊಂಡ... ಏನೇ ಆಗಲಿ, ಅವನು ಬದುಕಿದಾನೆ ಮತ್ತೆ ಅವನಿನ್ನೂ ತರುಣ. ಅವನು ಸರಿಹೋಗ್ತಾನೆ.''

ಅವರು ನಿಧಾನವಾಗಿ, ಸದ್ದಿಲ್ಲದೆ, ಹೊರಟು ನಿಂತರು. ಸೂರ್ಯ ಮುಳುಗಿದ. ಮಾವಿನ ಮರಗಳ ಮೇಲೆ ಮಂಜು ಕವಿಯಿತು. ದೂರದಲ್ಲಿ ಇನ್ನೊಂದು ಕಾರು ಚೀರ್‍ತಾ ಇತ್ತು. ಮಂಜಿನ ಮೇಲೆ ನಡೆದುಕೊಂಡು ಹೋಗುತ್ತಿದ್ದ ಕಪ್ಪು ಪ್ರೇತಗಳಂತೆ ಗಂಡಸರು, ಹೆಂಗಸರು, ಮಕ್ಕಳು ನಡೆದು ಹೋಗುತ್ತಾ ಲಾಗೋಸ್ ನಗರದ ಕತ್ತಲಲ್ಲಿ ಮಾಯವಾದರು.


ಅನು : ಶ್ರೀನಿವಾಸ್ ವಿ. ಸುತ್ರಾವೆ
ನಂ. ೧೬೪೬/೧೮, ಮಹಡಿ, ವಿದ್ಯಾನಗರ
ದಾವಣಗೆರೆ - ೫೭೭ ೦೦೪

ರೇಣುಕಾ ಮಂಜುನಾಥ್



# ಅರ್ಥವೃತ್ತಿ

**ಆ** ಪ್ರತಿಷ್ಠಿತ ಬಡಾವಣೆಯಲ್ಲಿರುವುವೆಲ್ಲ ಬಹು ವಿನ್ಯಾಸೀ ಸುಂದರ ಬಂಗಲೆಗಳೇ. ನೋಡುತ್ತಾ ಸಾಗಿದರೆ ಒಬ್ಬೊಬ್ಬರಾಗಿ ನಡೆದು ಬರುವ ವಿಶ್ವಸುಂದರಿಯರಂತೆ ಕಾಣುತ್ತವೆ! ನಾಮಫಲಕ, ಗೇಟ್ ಮೊದಲ್ಗೊಂಡು ಮುಂಬಾಗಿಲು, ಕಿಟಕಿ, ಪರದೆ, ಮಂಚ, ರತ್ನಗಂಬಳಿ, ಲೈಟುಗಳು, ಫ್ಯಾನುಗಳು, ಆಸನಗಳು ಕೊನೆಗೆ ಶೌಚಾಲಯಗಳು ಒಂದೊಂದೂ ಮಾಯಾಲೋಕ. ಅರಮನೆಗಳನ್ನೇ ನಾಚಿಸುವಂತಿವೆ!

ನಾಡಾಡಿಯೊಬ್ಬನು ಒಳಗೇನಾದರೂ ಓಡಾಡಿದರೆ, ನೆಲದ ಮೇಲೆ ಕಾಲೂರಲಾರ. ಸೋಫಾದ ಮೇಲೆ ಕೂರಲಾರ. ಒಳಗಿರುವವರ ಮುಖಭಾವನೆ ಅರ್ಥವಾಗದೆ ಬಾಯಿ ತೆಗೆಯಲಾರ. 'ದೇವರೆಲ್ಲೆಲ್ಲೂ ಇದ್ದಾನೆ' ನಿಜ. ಆದರೆ ಸಮಸ್ತ ಸಂಪತ್ತನ್ನು ಇಂತಿಲ್ಲೇ ಒಗ್ಗೂಡಿಸಿ, ಅಲ್ಲಿ ತನಗೊಂದು ವೈಭವೋಪೇತ ಕೋಣೆ ಕಟ್ಟಿಸಿಕೊಂಡು ಕುಳಿತ ಆ ದೇವರೇಕೋ ಇವನಿಗೆ 'ಖದೀಮ'ನಂತೆ ಕಂಡುಬಿಡುತ್ತಾನೆ. ಹೀಗಾಗಿ ಭಕ್ತಿಯಿಂದ ಕೈ ಮುಗಿಯಲೂ ಅವನಿಗೆ ಮನಸ್ಸು ಬಾರದು. ಮೇಜಿನ ಮೇಲಿನ ತರಹೇವಾರಿ ಭಕ್ಷ್ಯಗಳು, ಹಣ್ಣುಗಳನ್ನು ನೋಡುತ್ತಿದ್ದಂತೆ ಅವನ ಹಸಿವು ಅಲ್ಲಿಂದ ಕಾಲ್ಕಿತ್ತಿರುತ್ತದೆ. ಕೊನೆಗೆ ಫಳಫಳಿಸುವ ಆ ಶೌಚಾಲಯಗಳನ್ನು ಹೊಕ್ಕರೆ, ದೇಹದ ಎಲ್ಲ ರಂಧ್ರಗಳೂ ಸಂಪು ಹೊಡೆದಂತೆ ಸ್ಥಗಿತಗೊಂಡು ಮುದುಡಿಹೋಗುತ್ತವೆ.

ಇಂತಹ ಬಂಗಲೆಗಳ ಮಾಲೀಕರು ಮಾಡುವ ಕೆಲಸ ಹುಡುಗಾಟದ್ದೇನಲ್ಲ. ಇಷ್ಟೆಲ್ಲ ಆಸ್ತಿ ಜಮಾಯಿಸಿ, ಅಂತಸ್ತು ಏರಿಸಿ, ಅಧಿಕಾರ ಗಳಿಸಿರುವ ಇವರಿಗೆಲ್ಲ ಅದನ್ನು ಕಾಪಾಡುವುದು ಸಹ ಅಷ್ಟೇ ತ್ರಾಸದಾಯಕ. ಹಾಲಿ ಶಾಸಕರು, ಮಾಜಿ ಮಂತ್ರಿಗಳು, ಸಂಸದರ ನೆಂಟರು, ಕಂಟ್ರಾಕ್ಟರುಗಳು, ಚಿತ್ರ ನಿರ್ಮಾಪಕರು, ಷೇರು ದಲ್ಲಾಳಿಗಳು, ಡಿಸ್ಟಿಲ್ಲರಿ ಮಾಲೀಕರು... ಹೀಗೆ, ಸದಾ ಅವರೆಲ್ಲ ಮನೆ ಹೊರಗೆ 'ಬ್ಯುಸಿ.'

ಮನೆಯೊಂದು ಮಾಯಾಲೋಕ ಎಂದ ಮೇಲೆ ಅದಕ್ಕನುಗುಣವಾಗಿ ತಂದ ಮಡದಿಯರೂ ಸಹ ಮಾಯಾಂಗನೆಯರಂತಿರುತ್ತಾರೆ. ಅಡಿಯಿಂದ ಮುಡಿಯವರೆಗೆ ಏಳುಸುತ್ತಿನ ಮಲ್ಲಿಗೆ ರಾಜಕುಮಾರಿಯಂತಹ ಸುಕೋಮಲೆಯರು! ಗಂಡಸರು ಹೊರಗೆ ಹೋದ ಮೇಲೆ ಈ ಅಂತಃಪುರವಾಸಿಗಳು ಸುಮ್ಮನೆ ದಿನ ನೂಕಲು ಅವರೇನು ನಿರ್ಜೀವ ವಸ್ತುಗಳೆ! ಒಡವೆ ಅಂಗಡಿಗಳು, ಜರತಾರಿ ಸೀರೆಗಳು, ಕಾರ್ಡ್ಸ್ ಕ್ಲಬ್, ಜಿಮ್ ಕ್ಲಬ್, ಬ್ಯೂಟಿ ಪಾರ್ಲರ್ ಎಂದು ಎಷ್ಟೆಲ್ಲ ಅಲೆದರೂ ಹೆಂಗಳೆಯರಲ್ಲವೆ! ಒಂಟಿತನ ಕಾಡುತ್ತದೆ. ಎಷ್ಟೇ ಖರ್ಚು ಮಾಡಿದರೂ ತಾವೇ ಸೇರಿಸಿದ ಹಣ ಎನಿಸುವುದಿಲ್ಲ. ಹೀಗಾಗಿ, ಪ್ರತಿ ತಿಂಗಳೂ ಒಬ್ಬೊಬ್ಬರ ಮನೆಯಲ್ಲಿ ಎಲ್ಲ ಸೇರಿ, ಚೀಟಿ ಹಾಕಿ, ಊಟ ಮಾಡಿ, ಕೇಕೆ ಹಾಕಿ ಖುಷಿ ಪಡೋಣ ಎಂದು ಬಡಾವಣೆಗನುಗುಣವಾದೊಂದು ಮಹಿಳಾ ಯೋಜನೆ ಸಿದ್ಧಮಾಡುತ್ತಾರೆ. ಇಂದಿನ ದಿನಗಳಲ್ಲಿ ಇದಕ್ಕೆ 'ಕಿಟ್ಟಿಪಾರ್ಟಿ' ಎನ್ನುತ್ತಾರೆ.

ಆ ತಿಂಗಳೂ ಸಹ ಹಾಗೇ. ಒಂದು ಮನೆಯಲ್ಲಿ ಎಲ್ಲರೂ ಜಮಾಯಿಸಿದ್ದರು. ಅಂದು ಆ ಗುಂಪಿಗೆ ಹೊಸಬಳೊಬ್ಬಳ ಸೇರ್ಪಡೆಯಾಗಿದೆ. ಸ್ವಲ್ಪ ಓದಿಕೊಂಡವಳಂತೆ ಕಾಣುತ್ತಾಳೆ. ಅಂದು ನಡೆದ ಎಲ್ಲ ಚಟುವಟಿಕೆಯನ್ನು ಅವಳು ಮೊದಲೇ ನೋಡಿದಳು. ಎಂತೆಂತಹ ಒಡವೆ ವಸ್ತ್ರ! ನೋಡಲೆರಡು ಕಣ್ಣು ಸಾಲದು. ಎಂತೆಂತಹ ಭಕ್ಷಭೋಜ್ಯ! ತಿನ್ನಲೊಂದು ಬಾಯಿ ಸಾಲದು. ಎಷ್ಟೆಲ್ಲ ಕೇಕೆ, ಮಾತು! ಕೇಳಲೆರಡು ಕಿವಿ ಸಾಲದು. ಆದರೂ ಅವಳಿಗೆ ಅಲ್ಲಿನ್ನೇನೋ ಸಾಲದೆನಿಸಿತು. ಜೊತೆಗೆ ತನ್ನ ಬುದ್ಧಿಯ ಛಾಪನ್ನಲ್ಲಿ ಮೂಡಿಸುವ ತವಕ ಇರಾದೆ ಅವಳಿಗೆ! ''ನೋಡಿ, ಈ ಬಾರಿ ನಾವೆಲ್ಲ ಒಂದೊಂದು ವಿಷಯ ಆರಿಸಿಕೊಂಡು ಮಾತನಾಡಿ ನಮ್ಮ ಭಾಷಣ ಕಲೆ ಬೆಳೆಸಿಕೊಳ್ಳೋಣ'' ಎಂದಳು. ಸರಿ, ಈ ಹೊಸ ಪ್ರಯೋಗಕ್ಕೆ ಎಲ್ಲರೂ ಕೂಡಲೇ ಸಜ್ಜು.

ಮೊದಲಿಗೆ ಆ ಡಿಸ್ಟಿಲರಿ ಮಾಲೀಕನ ಹೆಂಡತಿ ಎದ್ದು ನಿಂತಳು. ಸರ್ವಾಲಂಕಾರ ಭೂಷಿತೆ, ಅಡಿಯಿಂದ ಮುಡಿವರೆಗೆ ಝುಗಮಗಿಸುವ ಮೇಕಪ್. ತನ್ನ ಸುಂದರ ಮುಖವನ್ನು ಕರ್ಚೀಫಿನಿಂದ ಮೆತ್ತಗೆ ಒತ್ತುತ್ತಾ, ಮತ್ತೊಂದು ಕೈನ ಸುಂದರ ಬೆರಳುಗಳಿಂದ ಮುಂಗುರುಳನ್ನು ಮೆಲ್ಲನೆ ಹಿಂದಕ್ಕೆ ಸರಿಸದೆಯೇ ಸರಿಸುವಂತೆ ಮಾಡಿ ಮಾತಿಗಾರಂಭಿಸಿದಳು:

''ಗೆಳತಿಯರೆ, ನಾನಿಂದು ನನ್ನ ಭಾಷಣಕ್ಕೆ ಆರಿಸಿಕೊಳ್ಳುವ ವಿಷಯ 'ನಮ್ಮ ಮನೆ ಕೆಲಸದವಳು'. ಇಂದು ನನಗೆ ನಿಜಕ್ಕೂ ಮನಸ್ಸು ಭಾರವಾಗಿದೆ. ಅವಳದು ನಿತ್ಯ ಗೋಳು. ನಿನ್ನೆ ನಾನವಳಿಗೆ ಕೊಟ್ಟ ತಿಂಗಳ ಸಂಬಳವನ್ನೆಲ್ಲಾ ಅವಳ ಗಂಡ ಅವಳಿಂದ ಕಸಿದುಕೊಂಡು ಹೋಗಿ ಸಾರಾಯಿ ಅಂಗಡಿಗೆ ಸುರಿದನಂತೆ. ತಿಂಗಳೆಲ್ಲಾ ನಿಮ್ಮನೇಗೆ ಬಂದು ಗೇದಿದ್ದು ಒಂದೇ ದಿನ್ದಾಗೆ ಕುಡ್ದು ಹಾಳ್ ಮಾಡ್ಬಿಟ್ಟ. ಆ ಸಾರಾಯಿ ಅಂಗ್ಡಿ ಎಕ್ಕುಟ್ಹೋಗ. ನಾಳಿಂದ ನನ್ನ ಮಕ್ಕಳ ಗಂಜಿ-ಬಟ್ಟೆಗೆ ಏನು ಮಾಡ್ಲಿ ನೀವೇ ಹೇಳಿ ಅಮ್ಮಾರೇ... ಅಂತ ಗೋಳಾಡ್ತಾ ಇದ್ಲು. ಈ ಕುಡಿತ ಸಮಾಜವನ್ನು ಎಂತಹ ಪಾಪಕೂಪಕ್ಕೆ ತಳ್ಳುತ್ತಿದೆ ಅಂದರೆ.. ನಾವು ಮಹಿಳೆಯರು.. ನಿಜಕ್ಕೂ... ಈ ನಿಟ್ಟಿನಲ್ಲಿ'' ಎಂದು ಸಾಗುತ್ತಿದ್ದ ಅವಳ ಭಾಷಣ ಮುಗಿದಾಗ ಎಲ್ಲರೂ ಈ ಹೊಸ ಪ್ರಯೋಗಕ್ಕೆ ಸ್ಪಂದಿಸುತ್ತಾ, ಕೆಲಸದವಳ ಬಗೆಗೆ ಅನುಕಂಪ ವ್ಯಕ್ತಪಡಿಸುತ್ತಾ, ಭಾಷಣ ಮನಮುಟ್ಟುವಂತೆ ಇತ್ತೆಂದು ಚಪ್ಪಾಳೆ ತಟ್ಟಿದರು. ಅದೇಕೋ ಈ ಹೊಸಬಳಿಗೆ ತಾನು ತಟ್ಟಿದ ಚಪ್ಪಾಳೆ ಮನಸ್ಸನ್ನು ತಟ್ಟುತ್ತಿಲ್ಲ, ಮನಸ್ಸು ಚಪ್ಪಾಳೆಯನ್ನು ಮುಟ್ಟುತ್ತಿಲ್ಲ ಎಂಬಂತಾಗಿ ಮುಖದಲ್ಲಿ ಗಲಿಬಿಲಿ ಚಡಪಡಿಕೆಗಳ ಗೆರೆಗಳು ನರ್ತನವಾಡತೊಡಗಿತು. ಇಡೀ ಪರಿಸರ ಅರ್ಥ ವೃತ್ತಾಂತ ಸಾರುತ್ತಿತ್ತು.

ರೇಣುಕಾ ಮಂಜುನಾಥ್
ಸಂ-೧೦೧೪, ೧೦ನೇ ಮುಖ್ಯರಸ್ತೆ, ೧ನೇ ಬ್ಲಾಕ್,
೩ನೇ ಸ್ಟೇಜ್, ಬಸವೇಶ್ವರನಗರ, ಬೆಂಗಳೂರು – ೫೬೦ ೦೭೯

# ರಾತ್ರಿ

ವಿಜಯಾ ಶ್ರೀಧರ್

ಸಾಮಾನ್ಯವಾಗಿ ಸೂರ್ಯಾಸ್ತದಿಂದ ಸೂರ್ಯೋದಯದವರೆಗಿನ ಕಾಲವನ್ನು ರಾತ್ರಿ ಎನ್ನುತ್ತೇವೆ. ಋತುಗಳಿಗನುಗುಣವಾಗಿ ರಾತ್ರಿಯ ಅವಧಿ ಹೆಚ್ಚು-ಕಡಿಮೆಯಾದರೂ, ಸಾಮಾನ್ಯನ ಪಾಲಿಗೆ, ಸೂರ್ಯ ಮುಳುಗಿದೊಡನೆ, ಕತ್ತಲು ಕವಿದೊಡನೆ ರಾತ್ರಿಯಾಗುತ್ತದೆ, ಸೂರ್ಯ ಹುಟ್ಟಿದೊಡನೆ, ಬೆಳಕು ಹರಿದೊಡನೆ ಹಗಲಾಗುತ್ತದೆ. ರಾತ್ರಿಯಾದೊಡನೆ ಹಾಲು ಕೊಡುವೆನೆಂದು ಅಮ್ಮ ಯಶೋಧೆ ಹೇಳಿದಾಗ, ರಾತ್ರಿ ಎಂದರೆ ಯಾವಾಗ ಎಂದು ಮುಗ್ಧ ಕೃಷ್ಣ ಕೇಳಿದನಂತೆ. ಕತ್ತಲಾದಾಗ ಎಂದು ಯಶೋಧೆ ಉತ್ತರಿಸಿದರೆ ತನ್ನ ಕಣ್ಣು ಮುಚ್ಚಿಕೊಂಡು ಈಗ ಕತ್ತಲಾಗಿದೆ, ಹಾಲು ಕೊಡು ಎಂದನಂತೆ ಮುದ್ದು ಕೃಷ್ಣ. ಅದೊಂದು ಬಾಲಲೀಲೆ!

ಸಾಧಾರಣವಾಗಿ ಪಶು-ಪಕ್ಷಿ-ಜೀವ-ಜಂತುಗಳಿಗೆಲ್ಲ ರಾತ್ರಿಯೆಂದೊಡನೆ ವಿಶ್ರಮಿಸುವ ಕಾಲ. ದಿನವಿಡೀ ದುಡಿದು ದಣಿದ ಜೀವ-ದೇಹಗಳು ವಿಶ್ರಾಂತಿ ಬಯಸುವ ಕಾಲ ರಾತ್ರಿ. ರಾತ್ರಿ ವಿಶ್ರಮಿಸಿದ ದೇಹ ಹೊಸ ಉತ್ಸಾಹ-ಶಕ್ತಿಗಳೊಡನೆ ಹೊಸ ದಿನವನ್ನು ಪ್ರಾರಂಭಿಸುತ್ತದೆ.

ಹಗಲು-ಇರುಳು ಎರಡೂ ನಿಸರ್ಗದ ಚೋದ್ಯಗಳು. ಭೂಮಿ ತನ್ನ ಸುತ್ತಲೂ ತಾನು ತಿರುಗುವುದರಿಂದ ರಾತ್ರಿ-ಹಗಲುಗಳಾಗುತ್ತವೆ. ನಿಸರ್ಗದ ಶಿಶುವೇ ಆದ ಮನುಷ್ಯನ ಜೀವನವೂ ಈ ಭೂಮಿಯ ರಾತ್ರಿ ಹಗಲುಗಳಿಗೆ ಸರಿಯಾಗಿ ಹೊಂದಿಕೊಂಡು ನಡೆಯುತ್ತದೆ. ರಾತ್ರಿಯಿದ್ದಾಗಲೇ ಹಗಲಿನ ಮಹತ್ವ, ಸೊಗಸು ನಮಗೆ ಅರಿವಾಗುತ್ತದೆ. ರಾತ್ರಿಯ ವಿಶ್ರಾಂತಿಯ ನಂತರವೇ ಹಗಲಿನ ಕೆಲಸಗಳು ಸುಸೂತ್ರವಾಗಿ ಸಾಗುತ್ತವೆ. ರಾತ್ರಿಯಿಲ್ಲದ ಹಗಲಾಗಲಿ, ಹಗಲಿಲ್ಲದ ರಾತ್ರಿಯಾಗಲಿ ಅನೂಹ್ಯ.

ಯೋಗಿ, ಭೋಗಿ, ರೋಗಿಗಳಿಗೆ ರಾತ್ರಿ ನಿದ್ರೆ ಇಲ್ಲವಂತೆ. ರೋಗಿ ಯಾಕಾದರೂ ರಾತ್ರಿಯಾಯಿತೋ ಎಂದು ಭಯಪಡುತ್ತಾನೆ. ಅವನಿಗೆ ಕತ್ತಲಲ್ಲಿ ಕಷ್ಟಗಳು ಇನ್ನಷ್ಟು ಭಯಂಕರವಾಗಿ ಕಾಣುತ್ತವೆ. ನಾಳೆಯ ಬೆಳಕನ್ನು ತಾನು ಕಾಣಲಾರೆ ಎಂದು ನಿರಾಶನಾಗುತ್ತಾನೆ. ಮರಣದ ಕಲ್ಪನೆಗಳು ಕತ್ತಲಲ್ಲಿ ಕಾಡುತ್ತವೆ. ಸಾಮಾನ್ಯವಾಗಿ ರೋಗಗಳು ಉಲ್ಬಣಿಸುವುದು ರಾತ್ರಿ ಕಾಲದಲ್ಲಿಯೇ! ರಾತ್ರಿ ಸುಖವಾಗಿ ನಿದ್ರಿಸಿದರೆ ಅರ್ಧರೋಗ ವಾಸಿಯಾದಂತೆಯೇ ಸರಿ.

ಭೋಗಿ ರಾತ್ರಿಗಾಗಿ ಹಂಬಲಿಸುತ್ತಾನೆ. ಭೋಗಿಯ ಕನಸುಗಳು ಕಲ್ಪನೆಗಳು, ಭ್ರಮೆಗಳು, ಆಸೆಗಳು ರಾತ್ರಿಯ ಕತ್ತಲಲ್ಲಿ ಗರಿಗೆದರುತ್ತವೆ. ಮದಿರೆ, ಮದಿರಾಕ್ಷಿಯರ ಸಹವಾಸ ರಾತ್ರಿಯಲ್ಲಿಯೇ ಭೋಗಿಗಳಿಗೆ ಸಂತೋಷ ನೀಡುತ್ತದೆ. ನಾಟಕ, ಯಕ್ಷಗಾನ, ಚಲನಚಿತ್ರ, ಜಾತ್ರೆ ಮುಂತಾದವುಗಳಿಂದ ರಂಜನೆ ಪಡೆಯಲು ರಾತ್ರಿಯೇ ಸೂಕ್ತ ಸಮಯ. ಕೆಲವು ದೇವರ ಉತ್ಸವಗಳು ರಾತ್ರಿ ಕಾಲದಲ್ಲಿಯೇ ನಡೆಯುತ್ತವೆ, ಸಂತಸ ನೀಡುತ್ತವೆ. ಪಂಜು ಬೆಳಕು, ದೀಪದ ಬೆಳಕಿನಲ್ಲಿ ರಾತ್ರಿ ನಡೆಯುವ ಸಂಭ್ರಮಗಳೂ ಹಗಲಿನಲ್ಲಿ ಅಸಾಧ್ಯ.

ಯೋಗಿಗಳೂ ರಾತ್ರಿ ಕಾಲವನ್ನು ಇಷ್ಟಪಡುತ್ತಾರೆ. ಅವರ ಸಾಧನೆಗಳಿಗೆ, ಆತ್ಮನಿರೀಕ್ಷಣೆಗೆ ಕತ್ತಲೇ ಸೂಕ್ತ ಕಾಲ. ಆದ್ದರಿಂದಲೇ "ಜಗವೆಲ್ಲ ಮಲಗಿರಲು ಅವನೊಬ್ಬ ನೆದ್ದಿದ್ದ" ಎಂದು ಬುದ್ಧನನ್ನು ಕುರಿತು ಕವಿ ಹಾಡಿರುವುದು. ಯೋಗ ಸಾಧನೆಗಳನ್ನು, ತಾಂತ್ರಿಕ ಸಾಧನೆಗಳನ್ನು ಮಾಡುವವರು ಇಷ್ಟಪಡುವುದು ಕತ್ತಲನ್ನೇ!

ಬೆಳಕೆಂದರೆ ಜ್ಞಾನ, ಕತ್ತಲೆಂದರೆ ತಮಸ್ಸು, ಅಂಧಕಾರ, ಅಜ್ಞಾನ. ಆದ್ದರಿಂದಲೇ ಕತ್ತಲೆಂದರೆ ಹೆದರಿಕೆ. ಕಳ್ಳರು, ದುಷ್ಟರು ತಮ್ಮ ಕಾರ್ಯಾಚರಣೆಗಳನ್ನು ನಡೆಸುವುದು ರಾತ್ರಿಯಲ್ಲಿಯೇ! ಮುಗ್ಧಪ್ರಾಣಿಗಳು, ಪಕ್ಷಿಗಳು ಹಗಲಿಡೀ ಅಲೆದಾಡಿ ರಾತ್ರಿ ನಿದ್ರಿಸಿದರೆ, ದುಷ್ಟ ಜಂತುಗಳು ರಾತ್ರಿ ಬೇಟೆಯಾಡುತ್ತವೆ.

ಎಲ್ಲ ಹೂಗಳೂ ಹಗಲು ಅರಳಿ ರಾತ್ರಿ ಬಾಡಿದರೆ, ರಾತ್ರಿರಾಣಿಯಂತಹ ಕೆಲ ಹೂಗಳು ರಾತ್ರಿ ಅರಳಿ ಸುವಾಸನೆ ಬೀರಿ ಹಗಲು ಮುದುಡುತ್ತವೆ.

ರಾತ್ರಿಯ ವಿಚಿತ್ರವೆಂದರೆ ಅದಕ್ಕೆ ವರ್ಣದ್ವೇಷವಿಲ್ಲ. ಕಡುಕತ್ತಲಲ್ಲಿ ಕಪ್ಪು ಮನುಷ್ಯನೂ ಒಂದೇ, ಗೌರವರ್ಣದವನೂ ಒಂದೇ! ಹಗಲಿಗಿಂತ ರಾತ್ರಿ ಈ ದೃಷ್ಟಿಯಲ್ಲಿ ನಿಷ್ಪಕ್ಷಪಾತಿ!

ರಾತ್ರಿಗಳಲ್ಲೂ ಎಷ್ಟೊಂದು ವಿಧಗಳಿವೆ! ಹುಣ್ಣಿಮೆಯ ರಾತ್ರಿಯ ಸೊಬಗನ್ನು ಸವಿದೇ ತಿಳಿಯಬೇಕು. ವಿರಹಿಗಳಿಗೆ ಹುಣ್ಣಿಮೆಯ ರಾತ್ರಿ ಬಲು ತಾಪದಾಯಕವಂತೆ! ಅಮಾವಾಸ್ಯೆಯ ಕತ್ತಲು ಕಳ್ಳರಿಗೆ ಪ್ರಶಸ್ತ ಕಾಲವಂತೆ! ಬೆಳದಿಂಗಳಿರುವ ಹದಿನೈದು ದಿನಗಳನ್ನು ಶುಕ್ಲಪಕ್ಷವೆಂದೂ, ಕತ್ತಲಾಗಿರುವ ಹದಿನೈದು ದಿನಗಳನ್ನು ಕೃಷ್ಣಪಕ್ಷವೆಂತಲೂ ಹಿರಿಯರು ವಿಂಗಡಿಸಿದ್ದಾರೆ.

ಇತ್ತೀಚೆಗೆ ಹಳ್ಳಿಗಳು ಮಾಯವಾಗಿ, ನಾಗರಿಕತೆ ವಿಪರೀತವಾಗಿ ರಾತ್ರಿ-ಹಗಲುಗಳ ವ್ಯತ್ಯಾಸವೇ ಇಲ್ಲದಾಗುತ್ತಿರುವುದು ನಾವು ಕಾಣುತ್ತಿರುವ ಸತ್ಯ. ರಾತ್ರಿಯಿಡೀ ವಾಹನ ಸಂಚಾರವಿರುತ್ತದೆ. ಜನಸಾಗರವಂತೂ ನಗರಗಳಲ್ಲಿ ರಾತ್ರಿಯಲ್ಲೂ ತನ್ನ ಭೋರ್ಗರೆತವನ್ನು ನಿಲ್ಲಿಸುವುದಿಲ್ಲ. ಶಾಂತವಾದ, ಸ್ತಬ್ಧವಾದ, ಸುಖಕರವಾದ, ಸುರಕ್ಷಿತವಾದ ರಾತ್ರಿಗಳು ಇನ್ನು ಕಲ್ಪನೆಯಲ್ಲಿ ಮಾತ್ರ ಸಾಧ್ಯವೇನೋ?

ಕತ್ತಲಗರ್ಭದಲ್ಲಿಯೇ ಎಷ್ಟೋ ಕರಾಳ ಕೃತ್ಯಗಳು ನಡೆಯುತ್ತವೆ. ಕತ್ತಲಗರ್ಭದಲ್ಲಿಯೇ ಕೃಷ್ಣ ಜನನವೂ ಆಗುತ್ತದೆ. ಈ ಸೃಷ್ಟಿಯಲ್ಲಿ ಎಲ್ಲದರ ರಹಸ್ಯವನ್ನು, ಕತ್ತಲಿನ ಗುಟ್ಟನ್ನು ಸಂಪೂರ್ಣವಾಗಿ ಅರಿಯಲು ಸಾಧ್ಯವಿಲ್ಲ. ಅಲ್ಲವೇ?

ವಿಜಯಾ ಶ್ರೀಧರ್
೧ನೇ ಮುಖ್ಯರಸ್ತೆ, ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೪

# ಗೆದ್ದಲು ಮನುಜ

ವೆಂಕಟಾಚಲ



ವಲ್ಮೀಕ ತಲೆ ತಲಾಂತರದಿಂದ ಚೆನ್ನಾಗಿ, ವಿವಿಧಾ ಕೃತಿಗಳ ಸುಂದರ ಕಲಾ ಸೌರಭವಾಗಿ ಮೂರ್ತಗೊಂಡ ಭವ್ಯ ಗೋಪುರಗಳ, ಬಹು ಬಾಳಿಕೆಯ, ತಾಳಿಕೆಯ ಮತ್ತು ತಲೆದೂಗುವಂತಹ ಮೀನಾರುಗಳ ಸಂಕೀರ್ಣವಾಗಿಹುದು, ಅಂದದ ಚೆಂದದ ಮಣ್ಣಿನ ಗೊಂಬೆಗಳ ಗೊಂಬೆ ಯಾಗಿಹುದು. ಅದು ಮಣ್ಣಿನ ಕುಶಲಕರ್ಮಿ ಕುಂಬಾರನನ್ನು ನಾಚಿಸುವಂತಹ ಮಣ್ಣಿನ ಗೋಪುರಮೂರ್ತಿ. ಕುಂಬಾರನಿಗೆ ಬೇಕು ಸಲಕರಣೆಗಳು, ಒಂದು ಆಯಾಮದ ಜಾಗ. ಕುಶಲಕರ್ಮಿಗಳಿಗೆ ಸೂಕ್ತ ಅನುಕೂಲಗಳಿಲ್ಲದೆ ಇಂತಹ ಚಮತ್ಕಾರ ಕೃತಿ ಅಸಾಧ್ಯವೇನೋ.

ವಲ್ಮೀಕ ಶಿಲ್ಪಿ ಗೆದ್ದಲಣ್ಣಗಳ ನೋಡಿ! ಎಂಥಾ ಟೀಮ್‌ವರ್ಕ್, ಒಬ್ಬರಿಗೊಬ್ಬರಿಗೆ ಮಾತಿಲ್ಲ ಕತೆಯಿಲ್ಲ, ಮೇಸ್ತ್ರೀ ಇಲ್ಲ ಇಂಜಿನಿಯರ್ ಇಲ್ಲ, ಬ್ಲೂಪ್ರಿಂಟ್ ನಕಾಶೆ ಡ್ರಾಯಿಂಗ್, ಪ್ಲಾನ್ ಯಾವುದೂ ಇಲ್ಲ, ಎಲ್ಲ ಕೆಲಸಗಾರರು ಕುಶಲಕರ್ಮಿಗಳೇ. ಅವರವರದೇ ನಿಷ್ಠೆ, ಏಕಾಗ್ರತೆಯ ಕೆಲಸ. ಶುರು ಎಲ್ಲಿ, ಮುಕ್ತಾಯವೆಲ್ಲಿ ಎಲ್ಲವೂ ಎಲ್ಲರ ತೀರ್ಮಾನ. ಅದೂ ಮೂಕಭಾಷೆಯಲ್ಲಿ, ಜಗಳವಿಲ್ಲ, ರಗಳೆಯಿಲ್ಲ, ಸ್ಮಾರಕ ಬಿದ್ದೀತೆಂಬ ಭಯ ಮೊದಲೇ ಇಲ್ಲ, ಎಲ್ಲಾ ಕೆಲಸ ಅಚ್ಚುಕಟ್ಟು. ಮಿಲಿ ಮೀಟರ್, ಸೆಂಟಿಮೀಟರ್, ಇಂಚು ಇಂಚಾಗಿ ಒಪ್ಪ ಓರಣಗಳ ಕಟ್ಟಡ ಕೆಲಸ. ಮರಳಿಲ್ಲ, ಜಲ್ಲಿಯಿಲ್ಲ, ಸಿಮೆಂಟ್ ಇಲ್ಲ, ಮಿಕ್ಸರ್ ಮೊದಲೇ ಇಲ್ಲ, ನೀರಿನ ಟ್ಯಾಂಕ್ ಬೇಕೇ ಇಲ್ಲ, ಕಬ್ಬಿಣ ಇತ್ಯಾದಿ ಆಧುನಿಕ ಅತ್ಯಾಧುನಿಕ ಸಲಕರಣೆಗಳ ಸುಳಿವೇ ಇಲ್ಲ. ಇಷ್ಟಾದರೂ ಮುದಗೊಳಿಸುವ ಗೋಪುರಗಳ ಕಲಾಸೌಧ ನಿರ್ಮಾಣ. ಹಗಲಿರಲಿ, ಕತ್ತಲೆಯಿರಲಿ, ಬಿಸಿಲು, ಮೋಡ ಮಳೆ ಏನೇ ಇರಲಿ, ನಿಲ್ಲದ ತನುಮನ, ಏಕಾಗ್ರತೆಯ ಕೆಲಸ, ನಿರಾಯಾಸ. ಕೆಲಸ ಮುಗಿಯುವವರೆಗೆ ವಿಶ್ರಾಂತಿಯ ಪ್ರಶ್ನೆಯಿಲ್ಲ, ಚಟುವಟಿಕೆಯ ಸ್ಥಗಿತವಿಲ್ಲ, ಮೇಲು ಕೀಳೆಂಬ ಭೇದವಿಲ್ಲ, ಇದೊಂದು ಚಾವಣಿ ಇಲ್ಲದ ಗಟ್ಟಿ ಮೀನಾರುಗಳ ಅರಮನೆ. ಎಷ್ಟೇ ಮಳೆ ಬಿದ್ದರೂ ಒಳಭಾಗ ಪೂರ್ತಿ ನೆನೆಯುವುದಿಲ್ಲ, ಬೀಳುವುದು, ಕರಗುವುದು ಕೊಚ್ಚಿ ಹೋಗುವುದು ಸಾಧ್ಯವೇ ಇಲ್ಲ. ಇನ್ನು ಭೂಕಂಪ ವಾದಾಗ ಪಟ ಪಟ ಬಿದ್ದುಹೋಗುವ ಬಹುಮಹಡಿ ಕಟ್ಟಡಗಳ ಗುಂಪಿಗೆ ವಲ್ಮೀಕ ಸೇರುವುದೇ ಇಲ್ಲ. ಎಷ್ಟೊಂದು ಜಂತು ಕ್ರಿಮಿಗಳಿಗೆ ಇದು ಆಸರೆ. ಇವು ತಮ್ಮನ್ನೇ ತಿಂದು ಮುಗಿಸಿ ತಮ್ಮ ಕುಟೀರದಿಂದ ವಕ್ಕಲೆಬ್ಬಿಸಿದರೂ ಬೇಸರ ವಿಲ್ಲದೆ ಮತ್ತೊಂದೆಡೆ ಮತ್ತೊಂದು ಸುಂದರ ನಿರ್ಮಾಣ ಕಾರ್ಯ ಮುಂದುವರಿಸುತ್ತವೆ. ಎಂತಹ ಪರೋಪಕಾರಿ ಜೀವನ! ತಮ್ಮದೆಂಬ ಚಿಂತೆಯಿಲ್ಲ, ವ್ಯಾಮೋಹವಿಲ್ಲ, ಹಕ್ಕುಗಳ ಚಲಾವಣೆಯಿಲ್ಲ, ದೂರುಗಳ ದಾಖಲಾತಿಯಿಲ್ಲ, ಬೈಗಳ ಸುರಿಮಳೆಯಿಲ್ಲ, ಕಣ್ಣೀರ ಕಾಲುವೆಯಿಲ್ಲ. ಎಂತಹ ನಿರ್ಮೋಹಿ ಜೀವನ! ನಿರಂಜನ ಸಿದ್ಧಿ ಸಾಧಕರಿಗೆ ಇವು ಗುರುಗಳು. ಪರಮಾರ್ಥ, ಮೋಕ್ಷ, ಆತ್ಮಶುದ್ಧಿ, ಸಿದ್ಧಿ, ಎಲ್ಲ ಎಲ್ಲ ಗುಣಶೇಷಗಳ ಪರಿಪೂರ್ಣತೆ ಸಾಧಿಸಿ, ತೋರಿಸಿ, ನೋಡಿ ಕಲಿ, ಮಾಡಿ ಕಲಿ ಎಂಬಂತಿರುವ ನಿರಹಂಕಾರಿ ಗೆದಲ ಗುರುಗಳು. ಇವರಿಗೆ ಆಶ್ರಮ, ಮಠ, ಮಾನ್ಯ, ದೇವಳ, ಅಡ್ಡ ಪಲ್ಲಕ್ಕಿ, ಸಿಂಹಾಸನ, ಶಿಷ್ಯರು, ವಂದಿ ಮಾಗಧರು, ಕೃಷ್ಣಾಜಿನ, ಹಾವುಗೆ, ಕಾವಿ, ಕಮಂಡಲ, ರುದ್ರಾಕ್ಷಿ ಇತ್ಯಾದಿ ಇತ್ಯಾದಿ ಯಾವುದೂ ಇಲ್ಲ. ಇವುಗಳ ಕಾರ್ಯವೈಖರಿಯನ್ನು ಗಮನಿಸಿ ಅನುಷ್ಠಾನಗೊಳಿಸುವ ಅಂತಃಚಕ್ಷು ಬೇಕಷ್ಟೆ, ಹುಲುಮಾನವ ಜೀವಿಗಳಿಗೆ. ಆತ್ಮೋನ್ನತಿ, ಮೋಕ್ಷ, ದೇಹತ್ಯಾಗ, ಪರಮಾತ್ಮ ದೀಕ್ಷೆ, ಪಾರಮಾರ್ಥ, ಶಿವೈಕ್ಯ ಎಲ್ಲವೂ ಎಲ್ಲದಕ್ಕೂ ವಲ್ಮೀಕವೇ ದಾರಿದೀಪ. ಅವುಗಳದು ನಿಷ್ಕಾಮ ಸೇವೆ. ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ಎಂಬಂತೆ. ಪೀಸಾ, ಕುತುಬ್ ಮಿನಾರ್, ತಾಜಮಹಲ್, ಯಾವುದೇ ಸಂಗಮರ್‌ಮರ್ (ಅಮೃತಶಿಲೆ) ಭವ್ಯ, ಭವ್ಯಾತಿಭವ್ಯ ಸ್ಮಾರಕ ದೇವಳಗಳ ವರ್ಣನಾತೀತ ಕಟ್ಟಡಗಳನ್ನು ನೋಡಿ. ಉದಾಹರಣೆಗೆ, ತಾಜಮಹಲು ತಾಜಾ ಮಹಲು ಬೆಳಕನ್ನು ಚೆಲ್ಲಿದರೂ, ಹಾಲನ್ನು ಬಸಿದರೂ ಅದಕ್ಕೆ ವಲ್ಮೀಕದಂಥ ಪರಿಮಳವೆಲ್ಲಿಯದು? ಮಳೆ ಬಿದ್ದಾಗ ವಲ್ಮೀಕದ ಪರಿಮಳ ರಾತ್ರಿ ರಾಣಿಯಂತೆ ಘಮಘಮಿಸುತ್ತದೆ, ಆ ಮಣ್ಣಿನ ವಾಸನೆಗೆ ಸಾಟಿಯುಂಟೆ! ವಲ್ಮೀಕದ ಹಲ ಗುಣ ವಿಶೇಷಣಗಳನ್ನು ನೋಡಿ. ಪಂಚಮಿ ಹಬ್ಬದಲ್ಲಿ ಕರ್ನಾಟಕದ ಹಲವು ಕಡೆ ವಲ್ಮೀಕ ಪೂಜೆ ತಪ್ಪದೇ ನಡೆಯುತ್ತದೆ. ಎಷ್ಟೊಂದು ಶ್ರದ್ಧೆಯಿಂದ ಹಾಲೆರೆದು ಚನ್ನೀನಾಗರ, ಬೆಳ್ಳಿನಾಗರಗಳನ್ನು ಹಾಲಿನ ಜತೆಯಲ್ಲಿ ಹಾಕಿ ವಲ್ಮೀಕಕ್ಕೆ ಪೂಜೆ ಮಾಡುತ್ತಾರೆ! ಹಲವಾರು ಕಡೆ ಹಲವಾರು ರೀತಿಯಲ್ಲಿ ಅದೇ ಪಂಚಮಿ ಹಬ್ಬ ಅಥವಾ ಬೇರೆಯ ಹಬ್ಬಗಳಲ್ಲಿ ವಲ್ಮೀಕ ಪೂಜೆ ಅನಾದಿ ಕಾಲದಿಂದ ನಡೆಯುತ್ತಾ ಬಂದಿದೆ. ಆಚಾರ, ವಿಚಾರ, ಭಿನ್ನ ಭಿನ್ನವಾಗಿರಬಹುದು. ಆದರೆ ಶ್ರದ್ಧೆ ಸರ್ವವ್ಯಾಪಿ. ಯಾವ ಸೌಧಕ್ಕೆ ಈ ಅನೂಚಾನ ವರ್ಷಂಪ್ರತಿ ಪೂಜೆ ಪುನಸ್ಕಾರ ನಡೆಯುತ್ತಿದೆ? ನಿಮ್ಮ ನೆನಪಿನಾಳಕ್ಕೆ ಹೊಕ್ಕಿ ನೋಡಿ! ಗಾತ್ರದಲ್ಲಿ ಕಿರಿದಾದರೂ ಶ್ರೇಷ್ಠತೆಯಲ್ಲಿ ಪೀಸಾ ಗೋಪುರಕ್ಕಿಂತಲೂ ಗುಣಾಢ್ಯ. ಈ ಕಲಾಕುಸುರಿಗೆ ಹೋಲಿಕೆ ಎಲ್ಲಿದೆ? ಇದು ಅಪ್ರತಿಮ ಮಣ್ಣಿನ ಸುಂದರಾತಿ ಸುಂದರಿಯಲ್ಲವೇ? ಇದನ್ನು ಯಾರೂ ನಾಶಪಡಿಸಲು ಇಚ್ಛಿಸುವುದಿಲ್ಲ, ಹುತ್ತವ ಬಡಿದರೆ ಹಾವು ಸಾಯುವುದೆ, ಎಂಬಂತೆ ಇದು ಬಲು ಗಟ್ಟಿಯೂ ಹೌದು. ನಿರ್ಮಾಣದಿಂದ ನಿರ್ಮಾಪಕರನ್ನು ಬೇರ್ಪಡಿಸುವುದು ಅಷ್ಟು ಸುಲಭವಲ್ಲ, ತರವೂ ಅಲ್ಲ, ಕಾಯಾ ವಾಚಾ ಮನಸಾ ನಿರಂತರ ಪರೋಪಕಾರ ಮನೋಭಾವ ಗೆದ್ದಲಿನದು.

ಇನ್ನು ಈ ಗೆದ್ದಲುಗಳ ಹುಟ್ಟು ಜೀವನಕ್ರಮದ ಬಗ್ಗೆ ಯೋಚಿಸಿದ್ದೇ ಆದರೆ, ಇವು ಇರುವೆಗಳಿಗಿಂತ ಭಿನ್ನ. ಕೆಂಪು ಮುಖದ ಬಿಳಿ ದೇಹದ ಈ ಕೀಟಗಳು ಮಣ್ಣನ್ನು ಇರುವೆಗಳಂತೆ ಸಣ್ಣ ಸಣ್ಣ ಕಣಗಳಾಗಿ ರವೆಯಂತೆ ಕತ್ತರಿಸುವುದಿಲ್ಲ. ಅದೇ ಮಣ್ಣನ್ನು ಬೆಣ್ಣೆಯಂತೆ ನುಣುಪಾಗಿಸಿ ತಮ್ಮ ಶರೀರದಂತೆಯೇ ಕೋಮಲಗೊಳಿಸಿ ತಮ್ಮ ನಿರ್ಮಿತಿಗಳಿಗೆ ಮೆತ್ತಿ ಮೆತ್ತಿ ಗಟ್ಟಿ

ಸೌಧ, ಪ್ರಾಸಾದಗಳನ್ನು ನಿರ್ಮಿಸುತ್ತವೆ. ಹುತ್ತ (ವಲ್ಮೀಕ) ವಿದ್ದೆಡೆ ಆಳದಲ್ಲಿ ನೀರಿನ ಸೆಲೆ ಇರುತ್ತದೆ ಎಂಬ ಮಾತೊಂದಿದೆ. ಹಾಗಾಗಿ ಅಲ್ಲಿ ಬಾವಿ ತೆಗೆದರೆ ಯಾ ಕೊರೆದರೆ ನೀರು ಗ್ಯಾರಂಟಿ. ಎಂತಹ ನಿಖರ ಜಾಣತನದ ಬುದ್ಧಿ!

ಇನ್ನು ಈ ಸಾವಿರಾರು ಅಥವಾ ಲಕ್ಷಗಟ್ಟಲೆ ಕೀಟಗಳು ಒಂದೇ ಕಡೆ ಒಗ್ಗಟ್ಟಿನಿಂದ ಕೆಲಸ ಮಾಡುತ್ತಾ ವಾಸಿಸುತ್ತವೆ. ಆದರೆ ಮನುಜರಿಗೆಲ್ಲಿದೆ ಈ ದೊಡ್ಡಗುಣ ? ಮನುಜರು ಹಳ್ಳಿ, ಊರು, ಪಟ್ಟಣ ಮಾಡಿಕೊಂಡು ವಾಸಿಸಬಹುದು. ಆದರೆ, ಅಲ್ಲಿ ಒಗ್ಗಟ್ಟಿದೆ ಎನ್ನಲು ಸಾಧ್ಯವೇ ? ಭದ್ರತೆಯ ದೃಷ್ಟಿಯಿಂದಲೋ ಅಥವಾ ಮತ್ಯಾವುದೋ ಸ್ವಾರ್ಥಕ್ಕಾಗಿ ಮನುಜರು ಒಂದೇ ಕಡೆ ಪ್ರಾಸಾದಗಳಲ್ಲಿ ವಾಸಿಸಬಹುದು, ಅಷ್ಟೇ ವಿನಃ ಖಂಡಿತಾ ಅಲ್ಲಿ ಒಗ್ಗಟ್ಟು ಮೂಡಿರುವುದಿಲ್ಲ ಎಂಬುದನ್ನು ಚರಿತ್ರೆಯೂ ಹೇಳುತ್ತದೆ, ಅಲ್ಲವೇ ? ನಾಗರಿಕರೆನಿಸಿಕೊಂಡವರ ಮನೆ ಮನೆಗಳಲ್ಲಿ ಒಗ್ಗಟ್ಟಿದೆಯೇ ? ಒಗ್ಗಟ್ಟಿದ್ದಿದ್ದರೆ ದೇಶ ಇಷ್ಟೊಂದು ವಿಭಜನೆ ವಿಂಗಡಣೆ ಹಾಗೂ ಭೂಮಿ ಜಲ ಇತ್ಯಾದಿಗಳಿಗಾಗಿ ರಗಳೆ ಎಲ್ಲಿರುತ್ತಿತ್ತು ?

ಇನ್ನು ಜಾತಿ, ಕುಲ, ಮತ ಇವೆಲ್ಲಾ ಬಂದುದೆಲ್ಲಿಂದ ? ಯಾರ ಕುತಂತ್ರ ನೀಚ ಬುದ್ಧಿ ಇದಕ್ಕೆ ಕಾರಣವಿರಬಹುದು ? ಇದು ಇಷ್ಟೊಂದು ಪ್ರಮಾಣದಲ್ಲಿ ಬೆಳೆದು ಸಂತೃಪ್ತಿ ಸುಖ ನೆಮ್ಮದಿ ಹಾಳು ಮಾಡುತ್ತಿದೆಯಲ್ಲ, ಇದಕ್ಕೆ ಕೊನೆಯುಂಟೆ ? ಸಾಧ್ಯವೇ ಇಲ್ಲ ಅನ್ನುವಷ್ಟರ ಮಟ್ಟಿಗೆ ಬೆಳೆದಿದೆ, ಬೆಳೆಯುತ್ತಿದೆಯಲ್ಲವೆ ? ಗೆದ್ದಲು ಗೆಳೆಯರಂತೆ ಮನುಜರು ತಮ್ಮ ಜೀವನ ಕ್ರಮವನ್ನರಿಯರು. ಅದರ ಬಗ್ಗೆ ಎಂದೂ ಚಿಂತಿಸುವ ಪುರುಸೊತ್ತು, ವ್ಯವಧಾನ ಅವರಿಗೆಲ್ಲಿಯದು ? ಈ ಕೋಮು ಅನ್ನುವ ಬೀಜ ಬಿತ್ತಿದವರಾರು ? ಎಲ್ಲಿಯದು ಈ ಕೋಮು ? ಸಾಧ್ಯವಾದರೆ ದರ್ಶನ ಪುಸ್ತಕವನ್ನು ತಿರುವಿ ಹಾಕಿ ನೋಡಿ. ಇನ್ನು, ಭೂ ಕಬಳಿಕೆಗಾಗಿ ನಿಲ್ಲದ ಯುದ್ಧ, ತನ್ನ ಬಲ ಹೆಚ್ಚು ತಾನು ಹೆಚ್ಚು ಎಂಬ ಹುಚ್ಚಿಗೆ ಕೊನೆಯೆಲ್ಲಿ? ಎಲ್ಲರೂ ಮನುಜರೆ, ಎಲ್ಲರೂ ಸರಿಸಮಾನರೆ, ಎಲ್ಲರ ಪ್ರಾಣಕ್ಕೂ ಬೆಲೆಯುಂಟು ಎಂದು ತಿಳಿದೊಡೆ ಎಷ್ಟೊಂದು ನೆಮ್ಮದಿ, ಶಾಂತಿ ಈ ಜಗತ್ತಿಗೆ ! ಈ ಗೆದ್ದಲು ಸೈನ್ಯ ನಿಸ್ವಾರ್ಥದಿಂದ ನಿರ್ಮಿಸಿದ ಸುಂದರ ಪ್ರಾಸಾದದಲ್ಲಿ ವಿಷಜಂತುಗಳು ಸೇರಿ ಸೌಮ್ಯ ಮೂರ್ತಿಗಳಾದ ಗೆದ್ದಲುಗಳನ್ನು ಒಕ್ಕಲೆಬ್ಬಿಸುತ್ತವೆ. ಆದರೆ ದ್ವೇಷಕ್ಕೆ ಎಡೆಕೊಡದೆ ಗೆದ್ದಲು ಮತ್ತೊಂದು ಕಡೆ ತಮ್ಮ ನಿರ್ಮಾಣಕಾರ್ಯವನ್ನು ಮುಂದುವರಿಸುತ್ತವೆ, ಅಲ್ಲವೆ ? ಇದನ್ನು ಪಲಾಯನವಾದ ಅಂತ ಹೀಗಳೆವ ಮನುಜರಿಲ್ಲದಿಲ್ಲ. ಇದರ ಬಗ್ಗೆ ಸಾಕಷ್ಟು ಚರ್ಚೆಗಳು ಆಗಬಹುದು. ಆದರೂ ಗೆದ್ದಲಣ್ಣಗಳ ಅನೂಚಾನ ರೀತಿ ಇದು. ಅವು ಹಾಗೆಯೇ ಬದುಕುಳಿಚ್ಚಿಸುತ್ತವೆ, ಬದುಕುತ್ತಿವೆ ನೆಮ್ಮದಿಯಿಂದ. ನೆಮ್ಮದಿ ಹಾಳು ಮಾಡಿಕೊಂಡು ಸ್ವಾರ್ಥ ಚಿಂತನೆಯಲ್ಲೇ ಜೀವನ ಸವೆಸುವ ಮನುಜರು ಎಂದಾದರೂ, ಎಲ್ಲಾದರೂ ಸೌಖ್ಯದಿಂದಿದ್ದಾರಾ ? ದುರ್ಬೀನು ಹಾಕಿ ಹುಡುಕಬೇಕೇನೋ !

ಇನ್ನು, ಮನುಜರು ತಮ್ಮ ಅಳತೆಗೂ ಊಹೆಗೂ ಮೀರಿ ಸಂಪತ್ತು ಗಳಿಸುವುದು, ಕಬಳಿಸುವುದು ಎಲ್ಲಾ ಸರ್ವೇಸಾಮಾನ್ಯವಾಗಿಬಿಟ್ಟಿದೆ. ದೇಶ-ವಿದೇಶಗಳಲ್ಲಿ ಅದನ್ನು ಬಚ್ಚಿಡುವುದು, ಶೇಖರಿಸುವುದು ಇತ್ಯಾದಿ ಎಲ್ಲಾ ಸಾಮಾನ್ಯವಾಗಿಬಿಟ್ಟಿದೆ. ಅಗತ್ಯಕ್ಕಿಂತ ಹೆಚ್ಚು ಉಣ್ಣುವುದು, ಗಳಿಸುವುದು ಪ್ರಕೃತಿ ನಿಯಮವೇನಲ್ಲ ಎಂದು ಗೆದ್ದಲು ಗುರುಗಳು ತೋರಿಸುತ್ತಾರೆ. ಇನ್ನು ಮಠ ಮಾನ್ಯ ಮಾಡುವುದು, ಎಲ್ಲೋ ಒಂದು ದೇವಳ ನಿರ್ಮಿಸುವುದು, ಮನೆ ಮಾಡುವುದು, ಅದರ ಆಸುಪಾಸು ಸುತ್ತಮುತ್ತ ಇರುವವರನ್ನು ಒಕ್ಕಲೆಬ್ಬಿಸುವುದು, ಧಮಕಿ ಹಾಕುವುದು, ಬೇರಾರಿಗೂ ತಮ್ಮ ಆಸ್ತಿಯನ್ನು ಪರಭಾರೆ ಮಾಡದೆ ತಮಗೇ ಕೊಡಮಾಡಬೇಕೆಂದು ಅಲಿಖಿತ ಶಾಸನ ಜಾರಿ ಮಾಡುವುದು ಒಂದು ಪರಿಯಾದರೆ, ದುಪ್ಪಟ್ಟು ಹತ್ತುಪಟ್ಟು ಹಣ ಸುರಿಸಿ ಖರೀದಿಸಿ ಚಾಲ್ತಿಯಲ್ಲಿರುವ ಏಕಾನಮಿಯನ್ನೇ ಹಾಳುಗೆಡುವುದು ಮತ್ತೊಂದು ಪರಿ. ಈ ಪಿರಿಪಿರಿಗಳನ್ನು ತಾಳಲಾರದೆ ಒಕ್ಕಲೆದ್ದು ಹೋದ ಕುಟುಂಬಗಳ 'ಇಲ್ಲಿರಲಾರೆ ಅಲ್ಲಿ ನೆಲಸಲಾರೆ' ಎಂಬ ಸಂದಿಗ್ಧಗಳಲ್ಲಿ ಹಾಳಾದ ಕುಟುಂಬಗಳೆಷ್ಟು? ಇದೂ ಒಂಥರ ಪಲಾಯನವಾದವಲ್ಲವೆ ? ಎಂದು ಅಣಕಿಸುತ್ತಿವೆ ಗೆದ್ದಲು ಮಿತ್ರರು.

ಇನ್ನು ಮಾನವರಲ್ಲಿನ ಹೊಟ್ಟೆಕಿಚ್ಚು, ಮತ್ಸರ ಎಂತಹ ನೆಮ್ಮದಿ ಜೀವನಕ್ಕೂ ಕಿಚ್ಚು ಹಚ್ಚಬಲ್ಲದು. ಯಶಸ್ಸಿಗಾಗಿ, ಕುರ್ಚಿಗಾಗಿ ಕಾಲೆಳೆವ ಪ್ರಕ್ರಿಯೆ ಅವ್ಯಾಹತವಾಗಿ ಸಾಗುತ್ತಲೇ ಇದೆ. ಇದು ಅವರ ಜೀವನಕ್ರಮವೇ ಆಗಿಹೋಗಿರುವುದು ಒಂದು ವಿಪರ್ಯಾಸವಲ್ಲವೇ ?

ಅನ್ಯ ನಿಂದನೆ, ಕಿಡಿಕಾರುವುದು ಇವು ಸೌಜನ್ಯ ಎಂಬ ಪದವನ್ನೇ ಅಳಿಸಿಹಾಕಿವೆ. ಗುಣಕ್ಕೆ ಮತ್ಸರ ಉಂಟೇ ? ಅಯ್ಯೋ ಅದು ಎಲ್ಲಿಗೆ ಪಲಾಯನಗೈದಿದೆಯೋ ಅರಿತವರಾರು ? ಸರ್ವಪ್ರಿಯರಲ್ಲದಿರಬಹುದು, ಆದರೂ ಬಹುಪ್ರಿಯರೆನಿಸಿಕೊಂಡವರ ಮೇಲೂ ಕಿಡಿ ಕಾರುವುದು, ಅವರ ಗುಣಗಳನ್ನು ತಿಳಿದೇ ಮತ್ಸರ ಪಡುವುದು ಇವೆಲ್ಲಾ ಅವ್ಯಾಹತವಾಗಿ ಅನೂಚಾನವಾಗಿ ನಡೆದೇ ಇದೆ. ಜಾತಿ, ಮತ ಈಗೀಗ ಈ ಪಾರ್ಟಿ ಆ ಪಾರ್ಟಿ, ರಾಜಕೀಯ ಬಣ್ಣ ಹಚ್ಚಿ ಮರೆಯುವುದು, ತನ್ನತನವನ್ನು ಮರೆಯುವುದು, ಈ ದುರ್ಗುಣಗಳು ನಿರ್ಲಜ್ಜಾಭಾವನೆಯ ಪ್ರತೀಕವಾಗಿ ಬೆಳಕಿಗೆ ಬರುತ್ತಿವೆ.

ಇದು ಧರೆಯ ಸಿದ್ಧಾಂತ ಅನ್ನುವುದಕ್ಕಿಂತ ಧರೆಯಲ್ಲಿ ಚಲಾವಣೆಯಲ್ಲಿರುವ ಒಂದು ಭಾಷಾ ಭಾವನೆ. ಮಾನವ ಜೀವಿ ಸಕಲ ಜೀವಿಗಳಲ್ಲೂ ಶ್ರೇಷ್ಠ. ಆನೆ ಸಿಂಹ ಹುಲಿ ಇತ್ಯಾದಿ ಕಾಡು ಪ್ರಾಣಿಗಳಿಗಿಂತ ಉತ್ತಮ ಎಂದು ಒಪ್ಪಿಕೊಂಡರೂ ಇಂದು ಮಾನವ ಕಾಡಿನ ಕ್ರೂರ ಪ್ರಾಣಿಗಳಿಗಿಂತ ಕ್ರೂರನಾಗಿದ್ದಾನೆ. ಆ ಕ್ರೂರ ಪ್ರಾಣಿಗಳಿಗೂ ಭಯಂಕರ ಕ್ರೂರನಾಗಿದ್ದಾನೆ. ಸಾಧುಪ್ರಾಣಿಗಳಿಗೂ ಸಿಂಹಸ್ವಪ್ನವಾಗಿ ಭಯಭೀತಿಗೊಳಿಸಿದ್ದಾನೆ. ಅಷ್ಟೇ ಅಲ್ಲದೆ, ಪ್ರಕೃತಿ ಪೀಡಕನಾಗಿ ಮುಂದುವರೆದಿದ್ದಾನೆ. ಇವನದು ಅಂತ್ಯವಿಲ್ಲದ ಕ್ರೌರ್ಯ ಎನ್ನುವ ಮಾತನ್ನು ಸಾಬೀತುಪಡಿಸುತ್ತಾ ಸಾಗುತ್ತಿದ್ದಾನೆ ಎನ್ನುವ ಚರಾಚರಗಳ ಗೊಂದಲವಿಲ್ಲದ ಭಾಷಾ ಇಂಚರ ಕೇಳಿಸಿಕೊಂಡಾಗ ಮನುಜರು ಕಪಟಿಗಳು ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ಗೆದ್ದಲೂ ಕೂಡ ಹಲವೊಮ್ಮೆ ಅಳುತ್ತವೆ, ಮನುಜ ಸನಿಹಿಸುವ ಸಪ್ಪಳಕ್ಕೆ ಭಯಭೀತಿಗೊಳ್ಳುತ್ತವೆ.

ಇನ್ನು, ಮನುಜ ಸಮಾಜವನ್ನು ಹೊಕ್ಕಿನೋಡಿದರೆ ಕಣ್ಣಿಗೆ ರಾಚುವುದು ಬರಿಯ ಭ್ರಷ್ಟಾಚಾರ. ಅದು ಹಂತ ಹಂತವಾಗಿ ಎತ್ತರೆತ್ತಕ್ಕೆ ಯಾವ ಪ್ರಮಾಣದಲ್ಲಿ ಬೆಳೆಯುತ್ತಿದೆಯೆಂದರೆ ಕಾಂಚನಗಂಗಕ್ಕಿಂತಾ ಎತ್ತರ ಅನ್ನಬಹುದೇನೋ ? ಮಾಧ್ಯಮಗಳು ಎಷ್ಟು ಬಣ್ಣಿಸಿದರೂ ಎಷ್ಟು ಬಿತ್ತರಿಸಿದರೂ ಈ ನಿರ್ಲಜ್ಜಮುಖಗಳು ಶಿರತ್ರಾಣ, ಮುಖವಾಡ ಧರಿಸಿ ಬೆಣ್ಣೆಮಾತು ಬೀಸುತ್ತಾ ತಮ್ಮ ದುಷ್ಕೃತ್ಯಗಳನ್ನು ಮುಂದುವರೆಸುತ್ತವೆ. ಭ್ರಷ್ಟಾಚಾರದ ಪೀಡೆ ಭಯೋತ್ಪಾದಕತೆಗಿಂತ ಹೆಚ್ಚು ಕೆಡಕಾಗಿ ಹೊಮ್ಮುತ್ತಿದೆ. ಯಾವ ದೇಶದಲ್ಲಿ ರಾಜ್ಯದಲ್ಲಿ ಭ್ರಷ್ಟಾಚಾರವಿಲ್ಲ ಹೇಳಿ ಅನ್ನೋ ಉಡಾಫೆ ಮಾತುಗಳು ಬೇರೆ. ಅಬ್ಬಬ್ಬಾ, ಜೀವನ ಎಷ್ಟೊಂದು ಭಯಾನಕ! ಹೇ ಗೆದ್ದಲೇ, ನೀನೇ ಸಂತುಷ್ಟ! ಪ್ರಜಾಪೀಡಕರು ಹಲವು ಗೋಮುಖ ವ್ಯಾಘ್ರರೂ ನಿಜ ಜೀವನದಲ್ಲಿ ವ್ಯಭಿಚಾರಿಗಳು, ಸುಖಲೋಲುಪರು, ಲೂಟಿ ಜುಗಾರಿಗಳು, ಭಾಷಣಕೋರರು, ಕಾಮುಕರು, ಇತ್ಯಾದಿ. ಸೋಗಲಾಡಿಗಳ ಪ್ರವಚನಗಳಿಗಿಂತ ನಿರ್ಮಿತಿಯ ಹಂತದಲ್ಲಿರುವ ವಲ್ಮೀಕದ ಮುಂದೆ ತಾಸುಗಟ್ಟಲೆ ಕೂತರೂ ಅವುಗಳ ನಿರ್ವಿಕಾರ, ನಿರ್ಮೋಹಿ ಸತ್ಯ ಸಂಘಟಿತ, ಚುರುಕಿನ ಜೀವನ ನಿರ್ಮಿತಿ ಕಾಯಕಕ್ಕೆ ಸಾಟಿ ಈ ಜಗತ್ತಿನಲ್ಲೆಲ್ಲಿದೆ ? ಅವುಗಳ ಗೊಂದಲವಿಲ್ಲದ ಸಪ್ರೇಮ, ಸಮನ್ವಯ, ಸಮಚಿತ್ತ, ಸಮಯೋಚಿತ, ಸಂತುಷ್ಟ ಸದ್ಭಾವನಾ, ಸಮನ್ವಯತ್ವ, ಸಾಕಾರ ಭಾಷಾಮಾಧುರ್ಯ ಮೋಡಿಗೆ ಮರುಳಾಗದ ಮನುಜರಿರಲು ಸಾಧ್ಯವೇ? ಹೋ ಗೆದ್ದಲು ಗುರುಗಳೇ ನಿಮ್ಮಿಂದ ತಿಳಿದದ್ದು ಕಲಿತದ್ದು ಅತ್ಯಲ್ಪ, ಕಲಿಯಬೇಕಾದ್ದು, ತಿಳಿಯಬೇಕಾದ್ದು ಬಹಳಷ್ಟು. ಇದು ಅಲ್ಪ ವಿರಾಮ ಮಾತ್ರ.

ಎಲ್ಲಾ ಅಂತ್ಯದಲ್ಲಿ ಮಣ್ಣಾಗುವುದು ಧರೆಯ ಸಿದ್ಧಾಂತ. ಅಂತಹ ಮಣ್ಣಿನಲ್ಲೇ ಎಲ್ಲ ಅವಶೇಷಗಳ ಸಂಮಿಶ್ರಣದ ಅನಾದಿಯ ಅವಶೇಷದಲ್ಲೇ ಭವ್ಯ, ದಿವ್ಯ, ಮೀನಾರು ಮಹಲುಗಳ ನಿರ್ಮಿಸುವ ಯುಗಪುರುಷರೇ, ಅನೂಚಾನ ಚೇತನ ಬಂಧುಗಳಾದ ಗೆದ್ದಲು ಗೆಳೆಯರೇ, ನಿಮಗೆ ವಂದನೆ, ಅಭಿವಂದನೆ, ಪಾದಾಭಿವಂದನೆ. ಗೆದ್ದಲು ಚಿರಾಯು: ವಲ್ಮೀಕ ಶತಾಯು: ಸಹಸ್ರಾಯು: ಬಹುಶಃ ಮನುಜರು ಎಂದೂ ಈ ಗೆದ್ದಲ ನಿಸ್ವಾರ್ಥ ಬುದ್ಧಿಮಟ್ಟಕ್ಕೆ ತಲುಪುವುದು ಅಸಾಧ್ಯವೇನೋ ?

ವೆಂಕಟಾಚಲ
ದೊಡ್ಡಭಜನ ಮಂದಿರ ರಸ್ತೆ, ಸರ್ಜಾಪುರ - ೫೬೨ ೧೨೫

## ಬಸವ-ಭೀಮ

ಜಾತಿ ಮತ ವರ್ಗರಹಿತ
ಸಮಾಜ ಕಟ್ಟಿದ ಬಸವ-ಭೀಮರನ್ನು
ಬಸವ-ಭೀಮನಿಷ್ಠರೇ ಕಟ್ಟಿದ್ದಾರೆ
ನಾಲ್ಕು ದಿಕ್ಕಿನ ಕಪ್ಪು ರೋಡುಗಳ ಸಂಗಮದಲ್ಲಿ
ಸುತ್ತಲೂ ಬಿಗಿದಿದ್ದಾರೆ
ಜಾತಿ-ಮತ-ಪಂಥಗಳ
ಕಬ್ಬಿಣದ ಬೇಲಿ

ಡಾ. ಗುರುಲಿಂಗಪ್ಪ ಧಬಾಲೆ
ಅಕ್ಕಲಕೋಟ (ಮಹಾರಾಷ್ಟ್ರ)

ಈಚಿನ ದಿನಗಳಲ್ಲಿ ನಮ್ಮ ರಾಜ್ಯದಲ್ಲಿ ಪ್ರಾದೇಶಿಕ ಅಸಮಾನತೆಯ ಕೂಗು ಮುಗಿಲು ಮುಟ್ಟಿದೆ. ಇದನ್ನು ಅನೇಕ ಪ್ರಾಜ್ಞರು ಅಂಕಿ-ಅಂಶಗಳ ಆಧಾರದಿಂದಲೂ ಸಾಬೀತುಪಡಿಸಿದ್ದಾರೆ. ಕನ್ನಡ ನಾಡಿನ ಹಿರಿಯ ಅರ್ಥಶಾಸ್ತ್ರಜ್ಞರೂ, ತಮ್ಮ ನಿಷ್ಪಕ್ಷಪಾತ ನಡತೆಗೆ ಹೆಸರಾದ ಡಾ|| ನಂಜುಂಡಪ್ಪನವರು ಈ ತಾರತಮ್ಯವನ್ನು ಎತ್ತಿಹಿಡಿದು, ಇದಕ್ಕೆ ಪರಿಹಾರೋಪಾಯಗಳನ್ನೂ ಸೂಚಿಸಿದ್ದಾರೆ.

ಆದರೆ ಒಂದು ಸತ್ಯಾಂಶವು ಮಾತ್ರ ಇದುವರೆಗೆ ನಾಡವರ ಯಾರ ಗಮನಕ್ಕೂ ಬರದೇ ಉಳಿದುಕೊಂಡಿದೆ. ತುಂಗಭದ್ರೆಯ ಉತ್ತರಕ್ಕಿರುವ ಈ ಉತ್ತರ ಕರ್ನಾಟಕ ಭಾಗ ಎಲ್ಲಾ ರಂಗಗಳಲ್ಲೂ ತೀರ ಹಿಂದುಳಿದಿದೆ ಎಂಬುದೂ, ರಾಜ್ಯ ರಚನಾ ನಂತರವೂ ಈ ಅಸಮತೋಲನವನ್ನು ನಿವಾರಿಸುವ ಪ್ರಾಮಾಣಿಕ ಪ್ರಯತ್ನಗಳಾಗದೇ ಈ ಕಂದರ ಇನ್ನೂ ಹೆಚ್ಚು ಹೆಚ್ಚುತ್ತಲೇ ಸಾಗಿದೆ ಎಂಬುದೂ ನಿರ್ವಿವಾದವೇ. ಆದರೆ ಕರ್ನಾಟಕದ ಈ ಉತ್ತರಾರ್ಧದಲ್ಲಿಯೂ ನಮ್ಮ ಉತ್ತರದ ಗಡಿಯ ಸೀಮಾಪ್ರದೇಶ ಎಲ್ಲಾ ಕ್ಷೇತ್ರಗಳಲ್ಲೂ ತೀರ ಹಿಂದುಳಿದಿದ್ದು, ಇದು ಕಣ್ತಪ್ಪಿನಿಂದ ಡಾ|| ನಂಜುಂಡಪ್ಪನವರ ಗಮನಕ್ಕೂ ಬಾರದೇ ಹೋದುದು ದುರದೃಷ್ಟಕರ ಅಥವಾ ಡಾ|| ನಂಜುಂಡಪ್ಪನವರಿಗೆ ವಹಿಸಿಕೊಟ್ಟ ಹೊಣೆಗಾರಿಕೆಯ ಪರಿಧಿಯ ಹೊರಗೆ ಈ ವಿಷಯವಿದ್ದಿರಲೂ ಸಾಕು.

ಆರೋಗ್ಯ, ಶಿಕ್ಷಣ, ರಸ್ತೆ, ಸಾರಿಗೆ, ನೀರಾವರಿ, ವಿದ್ಯುತ್ ಮುಂತಾದ ಎಲ್ಲಾ ಅಭಿವೃದ್ಧಿ ಕಾರ್ಯಗಳಲ್ಲೂ, ಜನತೆಯ ಪ್ರಾಥಮಿಕ ಮೂಲಭೂತ ಅವಶ್ಯಕತೆಯ ವಿಷಯಕ್ಕೂ ಈ ಪ್ರದೇಶ ವಂಚಿತವಾಗಿರುವ ಸಂಗತಿ ನಮ್ಮಲ್ಲಿ ಯಾರ ಗಮನಕ್ಕೂ ಇದುವರೆಗೆ ಬಾರದೇ ಹೋದುದಕ್ಕೆ ಮುಖ್ಯ ಕಾರಣ ತಮ್ಮ ಈ ಸೀಮಾ ಪ್ರದೇಶ ಇಡೀ ರಾಜ್ಯದಲ್ಲಿಯೇ ತೀರ ಹಿಂದುಳಿದ ಪ್ರದೇಶ ಎಂಬ ಸತ್ಯ ಸಂಗತಿ ಇಲ್ಲಿಯ ಸ್ಥಳೀಯ ಜನರ ಗಮನಕ್ಕೂ ಬಾರದೇಹೋದುದು. ಇದು ಈ ಸೀಮಾಭಾಗದ ಸಾರ್ವಜನಿಕರ ಮುಗ್ಧತೆಯನ್ನೂ, ಪ್ರಜ್ಞಾವಂತಿಕೆಯ ಕೊರತೆಯನ್ನೂ ಎತ್ತಿ ತೋರಿಸುವುದರ ಜತೆ ಜತೆಗೆ ಇಲ್ಲಿಯ ಸಾರ್ವಜನಿಕ ವಲಯದ ನಾಯಕ ಗಣದ ನಿರಾಸಕ್ತಿ, ಅಸಮರ್ಥತೆಗಳ ಮೇಲೂ ಬೆಳಕು ಬೀರುತ್ತದೆ.

# ಹೊಸ್ತಿಲಲ್ಲಿ ಹುಲ್ಲು ಹುಟ್ಟಿ...

ಈಚಿನ ದಿನಗಳಲ್ಲಿ ನಮ್ಮ ರಾಜ್ಯದಲ್ಲಿ ಪ್ರಾದೇಶಿಕ ಅಸಮಾನತೆಯ ಕೂಗು ಮುಗಿಲು ಮುಟ್ಟಿದೆ. ಇದನ್ನು ಅನೇಕ ಪ್ರಾಜ್ಞರು ಅಂಕಿ-ಅಂಶಗಳ ಆಧಾರದಿಂದಲೂ ಸಾಬೀತುಪಡಿಸಿದ್ದಾರೆ. ಕನ್ನಡ ನಾಡಿನ ಹಿರಿಯ ಅರ್ಥಶಾಸ್ತ್ರಜ್ಞರೂ, ತಮ್ಮ ನಿಷ್ಪಕ್ಷಪಾತ ನಡತೆಗೆ ಹೆಸರಾದ ಡಾ|| ನಂಜುಂಡಪ್ಪನವರು ಈ ತಾರತಮ್ಯವನ್ನು ಎತ್ತಿಹಿಡಿದು, ಇದಕ್ಕೆ ಪರಿಹಾರೋಪಾಯಗಳನ್ನೂ ಸೂಚಿಸಿದ್ದಾರೆ.

**ಡಾ|| ಅನಿಲ ಕಮತಿ**

ಈ ಹಿಂದುಳಿಯುವಿಕೆ ಈ ಪ್ರದೇಶಕ್ಕೆ ದೈವದತ್ತವಾದ ನೈಸರ್ಗಿಕ ಕೊಡುಗೆಯಂತೂ ಅಲ್ಲವೇ ಅಲ್ಲ. ಈ ಕಂದರ ಮಾನವನಿರ್ಮಿತವಾದುದು ಮತ್ತು ಕರ್ನಾಟಕದ ನಮ್ಮ ಇದುವರೆಗಿನ ಸರಕಾರಗಳು ಈ ಭಾಗದ ಜನರಿಗೆ ಎಸಗಿದ ವಂಚನೆಯ ಫಲಿತಾಂಶವೆಂದರೆ ತಪ್ಪಾಗಲಾರದು.

ಬೆಳಗಾವಿ, ವಿಜಾಪುರ, ಗುಲಬರ್ಗಾ, ಬೀದರ ಜಿಲ್ಲೆಗಳಿಗೆ ಸೇರಿದ ಈ ಗಡಿಪ್ರದೇಶ ನೈಸರ್ಗಿಕ ಸಂಪನ್ಮೂಲಗಳ ದೃಷ್ಟಿಯಿಂದ ತುಂಬ ಸಂಪದ್ಭರಿತ ಪ್ರದೇಶವೇ. ಇಡೀ ರಾಜ್ಯದಲ್ಲಿಯೇ ಉತ್ಕೃಷ್ಟ ಎನ್ನಬಹುದಾದಂಥ ಫಲವತ್ತಾದ ಭೂಮಿ ಇಲ್ಲಿಯದು. ದೂದಗಂಗೆ-ವೇದಗಂಗೆ, ಹಿರಣ್ಯಕೇಶಿ, ಘಟಪ್ರಭೆ-ಮಲಪ್ರಭೆ, ಭೀಮೆ-ಕೃಷ್ಣೆಯರು ಸಹ್ಯಾದ್ರಿಯ ತಪ್ಪಲಿಂದ ಇಲ್ಲಿಗೆ ವಿಪುಲ ನೀರಿನೊಂದಿಗೆ ಫಲವತ್ತಾದ ರೇವೆಮಣ್ಣನ್ನು ತಂದು ಸುರಿಯುತ್ತವೆ. ಕಬ್ಬು, ತಂಬಾಕು, ಹತ್ತಿ, ಜೋಳ, ಕಡಲೆ, ಎಣ್ಣೆಕಾಳುಗಳನ್ನು ಬೆಳೆಯಲು ಇಡೀ ದೇಶದಲ್ಲಿಯೇ ಅತ್ಯುತ್ಕೃಷ್ಟ ಭೂಮಿ ಇಲ್ಲಿಯದು ಎಂದರೂ ಉತ್ಪ್ರೇಕ್ಷೆಯಲ್ಲ. ಆದರೂ ಈ ಪ್ರದೇಶ ವರುಷದಿಂದ ವರುಷಕ್ಕೆ ಬರಡಾಗುತ್ತ, ಬರಿದಾಗುತ್ತ, ಬಡವಾಗುತ್ತಲೇ ಸಾಗಿದೆ.

ಕೃಷಿಯೇ ಪ್ರಮುಖ ಕಸುಬಾಗಿರುವ ಈ ಪ್ರದೇಶವು ಇಷ್ಟು ಫಲವತ್ತಾಗಿದ್ದೂ, ದಿನದಿಂದ ದಿನಕ್ಕೆ ಹಿಂದೂಡಲ್ಪಟ್ಟು ಸರಕಾರಗಳ ತೀವ್ರ ಅಲಕ್ಷ್ಯಕ್ಕೆ ಗುರಿಯಾಗುತ್ತಿದೆ.

ನೆರೆಯ ಮಹಾರಾಷ್ಟ್ರದಲ್ಲಿ ನದಿ ಹುಟ್ಟಿನ ಮೂಲದಲ್ಲಿ ಅತಿ ಮುಖ್ಯ ಬೃಹತ್ ಅಣೆಕಟ್ಟೆಯೊಂದನ್ನು ಕಟ್ಟಿ (ಉದಾ : ಕೊಯ್ನಾ ಅಣೆಕಟ್ಟು, ಕಾಳಮ್ಮವಾಡಿ ಡ್ಯಾಮ್) ನಂತರದ ನದಿ ಹರವಿನಗುಂಟ ಪ್ರತಿ ಮೂರು-ನಾಲ್ಕು ಮೈಲಿಗಳಿಗೊಂದರಂತೆ ಮೆಟ್ಟಿಲು-ಮೆಟ್ಟಿಲೋಪಾದಿ ಚಿಕ್ಕ ಚಿಕ್ಕ ಬ್ಯಾರೇಜುಗಳನ್ನು ಕಟ್ಟುತ್ತ ಬಂದಿದೆ. ದುರಾದೃಷ್ಟದ ಸಂಗತಿ ಎಂದರೆ ಈ ಪ್ರದೇಶದಲ್ಲಿ ಹರಿದಿರುವ ಮೇಲೆ ಹೆಸರಿಸಿದ ಚಿಕ್ಕ-ದೊಡ್ಡ ನದಿಗಳೆಲ್ಲವೂ ಮಹಾರಾಷ್ಟ್ರದಲ್ಲಿಯೇ ಹುಟ್ಟಿವೆ.

ಮಳೆಗಾಲದಲ್ಲಿ ಅಣೆಕಟ್ಟಿನಲ್ಲಿ ಶೇಖರಿಸಿದ ನೀರನ್ನು ಅಗತ್ಯಕ್ಕೆ ತಕ್ಕಂತೆ ಪ್ರತಿ ತಿಂಗಳಿಗೊಂದೆರಡಾವರ್ತಿ ಹೊಳೆಯ ಪಾತ್ರಕ್ಕೆ ಮಹಾರಾಷ್ಟ್ರದ ಕೊನೆಯ ಬ್ಯಾರೇಜು ತುಂಬುವವರೆಗೂ ಮಹಾರಾಷ್ಟ್ರ ಸರಕಾರ ಬಿಡುಗಡೆ ಮಾಡುತ್ತ ಬರುತ್ತದಾದುದರಿಂದ, ನದಿ ತೀರದ ಪ್ರತಿ ಹಳ್ಳಿಯ ಕುಡಿಯುವ ನೀರಿನ ಮತ್ತು ನೀರಾವರಿಯ ಅವಶ್ಯಕತೆಗಳನ್ನು ವರುಷದುದ್ದಗಲಕ್ಕೂ ಕೊರತೆಯಿಲ್ಲದಂತೆ ಪೂರೈಸಿದಂತಾಗುತ್ತದೆ. ಆದರೆ ನಮ್ಮಲ್ಲಿ...? ನೀರಾವರಿಯ ಮಾತು ಹಾಗಿರಲಿ, ವರುಷದ ಆರು ತಿಂಗಳು ನದಿಯೆಲ್ಲಾ ಬತ್ತಿ ಹೋಗುವುದರಿಂದ ಕುಡಿಯುವ ನೀರಿಗಾಗಿಯೂ ಪರದಾಡುವ ಪರಿಸ್ಥಿತಿ!

ಕರ್ನಾಟಕದಲ್ಲಿಯೂ ಅಣೆಕಟ್ಟುಗಳನ್ನು ಕಟ್ಟಿದ್ದಾರೆ. ಇವುಗಳನ್ನು ನೆನೆಸಿಕೊಂಡಾಗ ವಿಜಾಪುರದವರ ಬಗ್ಗೆ ನಮ್ಮಲ್ಲಿ ಚಾಲ್ತಿಯಲ್ಲಿರುವ ಒಂದು ರೂಢಿಮಾತು ನೆನಪಿಗೆ ಬರುತ್ತದೆ – ''ಕಟ್ಟಿದರ ಗೋಲಗುಮ್ಮಟ, ಇಲ್ಲಾಂದರ ಬಾರಾಕಮಾನ್.'' ನಮ್ಮಲ್ಲಿರುವ ಬೃಹತ್ ಅಣೆಕಟ್ಟುಗಳಿಂದ ಕೆಲಪ್ರದೇಶಗಳಿಗಷ್ಟೇ ಸೀಮಿತವಾಗಿ ಪ್ರಯೋಜನ ಆಗುತ್ತಿದ್ದು, ಇನ್ನುಳಿದಂತೆ ಒಣಭೂಮಿ ಭಣಭಣ ಎನ್ನುತ್ತದೆ. ಈ ಬೃಹತ್ ಅಣೆಕಟ್ಟುಗಳಿಂದ ಬಹಳಷ್ಟು ಕಡೆ ಅರಣ್ಯಪ್ರದೇಶ ಮುಳುಗಡೆಯಾಗಿ, ಇದರ ಪರಿಣಾಮವಾಗಿ ಮಳೆ ಕಡಿಮೆಯಾಗಿ, ಅಲ್ಪಸ್ವಲ್ಪ ಬಿದ್ದ ಮಳೆಯೂ ಮಣ್ಣನ್ನು ಸೆಳೆದುತಂದು ಅಣೆಕಟ್ಟಿನ ಪಾತ್ರಕ್ಕೆ ಹೂಳು ತುಂಬಿಕೊಂಡು ವರುಷದಿಂದ ವರುಷಕ್ಕೆ ನೀರಿನ ಸಂಗ್ರಹದ ಪ್ರಮಾಣ ಕಡಿಮೆಯಾಗುತ್ತಿರುವುದರಿಂದ ಕಮಾಂಡ್ ಏರಿಯಾದಲ್ಲಿಯೂ ನೀರಿಗಾಗಿ ಹಾಹಾಕಾರವಾದರೆ, ರಾಜ್ಯದಲ್ಲಿ ವಿದ್ಯುತ್ ಕೊರತೆ ಹೆಚ್ಚುತ್ತಲೇ ಸಾಗಿದೆ.

ಹಲವಾರು ವರುಷಗಳಿಂದ ಪ್ರಪಂಚದ ಅನೇಕ ತಜ್ಞರು ಚಿಕ್ಕ ಚಿಕ್ಕ ಚೆಕ್ ಡ್ಯಾಂಗಳ ಮಹತ್ವ ಮತ್ತು ಉಪಯುಕ್ತತೆಯ ಬಗ್ಗೆ ಹೇಳುತ್ತಲೇ ಬಂದಿದ್ದರೂ ನಮ್ಮ ಸರಕಾರದಲ್ಲಿರುವವರು ಇದರತ್ತ ಸಾಕಷ್ಟು ಲಕ್ಷ್ಯ ಹರಿಸಿಲ್ಲವೆಂದೇ ಹೇಳಬೇಕಾಗುತ್ತದೆ.

''ವಿಜಾಪುರ ಒಂದೇ ಜಿಲ್ಲೆ ಬೆಳೆದರೆ ಇಡೀ ನಾಡಿಗೇನೇ ಅನ್ನ ಬಡಿಸೀತು'' ಎಂಬ ಮಾತು ಪೂರ್ವಕಾಲದಿಂದಲೂ ಪ್ರಚಲಿತದಲ್ಲಿದ್ದರೂ, ಈ ಕರ್ನಾಟಕದ ''ಪಂಜಾಬ''ನತ್ತ ಇದುವರೆಗಿನ ರಾಜ್ಯದ ಯಾವುದೇ ಸರಕಾರವೂ ಆ ನಿಟ್ಟಿನಲ್ಲಿ ಒಲವು ತೋರಿಲ್ಲ. ಇದರ ಪರಿಣಾಮವಾಗಿ ಹಲವಾರು ವರುಷಗಳಿಂದ ಈ ಜಿಲ್ಲೆಯಲ್ಲಿ ಬರಗಾಲದ ಛಾಯೆ ಮುಂದುವರಿದುಕೊಂಡೇ ಬಂದಿದೆ. ಇಂದು ದೂರ ದೂರದ ಮುಂಬೈ-ಪುಣೆಗಳಲ್ಲೂ, ಸಮೀಪದ ಮಹಾರಾಷ್ಟ್ರದ ನಗರ ಪಟ್ಟಣಗಳಲ್ಲೂ, ಗೋವಾದಲ್ಲೂ ಕೂಲಿ ಕೆಲಸ ಮಾಡುವವರು ಯಾರಾದರೂ ಕನ್ನಡಿಗರಿದ್ದರೆ ಅವರು ವಿಜಾಪುರ ಜಿಲ್ಲೆಯವರೇ ಇರಬೇಕು ಎಂಬ ಮಾತಿದೆ. ಪಂಜಾಬದ ರೈತರು ತಮ್ಮ ಹೊಲಗಳಲ್ಲಿ ಹೊನ್ನನ್ನೇ ಬೆಳೆದು ದೇಶ - ವಿದೇಶಗಳಲ್ಲೂ ಹೆಸರು ಗಳಿಸಿದ್ದರೆ, ನಮ್ಮ ಈ ಕರ್ನಾಟಕದ ''ಪಂಜಾಬ''ದ ರೈತರು

ದೇಶದ ತುಂಬೆಲ್ಲ ಹಮಾಲರಾಗಿ ''ಹೆಸರುವಾಸಿ'' ಯಾಗುತ್ತಿದ್ದಾರೆ !!

ಪಂಚವಾರ್ಷಿಕ ಯೋಜನೆಗಳು ನೆಹರೂರವರ ಕನಸು. ಕೃಷ್ಣಾ ಮೇಲ್ದಂಡೆ ಯೋಜನೆಯನ್ನು ನೆನೆಸಿಕೊಂಡರೆ ನಮ್ಮ ರಾಜ್ಯ ಸರಕಾರವೇನಾದರೂ ಈ ಯೋಜನೆಯನ್ನು ಪೂರ್ಣಗೊಳಿಸಲು ಇಡೀ ಶತಮಾನದ ಯೋಜನೆ ಹಾಕಿಕೊಂಡಿದೆಯೇನೋ ಎಂಬ ಗುಮಾನಿ ಮನದಲ್ಲಿ ಹುಟ್ಟುವುದು ಸಹಜ. ಇಂಥ ಬೃಹತ್ ಯೋಜನೆಯೊಂದು ವಿಜಾಪುರ ಜಿಲ್ಲೆಯ ಪರಿಸರದಲ್ಲಿಯೇ ಕಾರ್ಯರೂಪಕ್ಕೆ ಬರುತ್ತಿದ್ದರೂ ಈ ಜಿಲ್ಲೆಗೆ ಮಾತ್ರ ದೀಪದ ಕೆಳಗಿನ ಕತ್ತಲೆಯ ಸ್ಥಿತಿಯೇ !

**ಈ ಹಿಂದುಳಿಯುವಿಕೆ ಈ ಪ್ರದೇಶಕ್ಕೆ ದೈವದತ್ತವಾದ ನೈಸರ್ಗಿಕ ಕೊಡುಗೆಯಂತೂ ಅಲ್ಲವೇ ಅಲ್ಲ. ಈ ಕಂದರ ಮಾನವ ನಿರ್ಮಿತವಾದುದು, ಮತ್ತು ಕರ್ನಾಟಕದ ನಮ್ಮ ಇದುವರೆಗಿನ ಸರಕಾರಗಳು ಈ ಭಾಗದ ಜನರಿಗೆ ಎಸಗಿದ ವಂಚನೆಯ ಫಲಿತಾಂಶವೆಂದರೆ ತಪ್ಪಾಗಲಾರದು.**

ತಮಿಳುನಾಡು ಸರಕಾರ ಮುಂಗಾರು-ಹಿಂಗಾರು ಎನ್ನುತ್ತ ವರುಷದಲ್ಲಿ ಎರಡು-ಮೂರು ಬೆಳೆ ಬೆಳೆಯಲು ಕರ್ನಾಟಕದ ಮೇಲೆ ನಾನಾ ಬಗೆಯ ಒತ್ತಡ ತಂದು ಕಾಲು ಕೆದರಿ ಜಗಳ ತೆಗೆದು ಕಾವೇರಿಯಲ್ಲಿ ನಿರಂತರ ನೀರು ಹರಿಯುವಂತೆ ಮಾಡುತ್ತಿದ್ದರೆ, ಕೃಷ್ಣೆಯ ತಟದ ಹಳ್ಳಿ-ಪಟ್ಟಣಗಳ ಕುಡಿಯುವ ನೀರಿಗಾಗಿಯೂ ಮಹಾರಾಷ್ಟ್ರದೆದುರು ಪ್ರತಿವರುಷ ಹಲವಾರು ಬಾರಿ ಕರ್ನಾಟಕ ಸರಕಾರ ಮಂಡಿಯೂರಿ ಅಂಗಲಾಚುತ್ತದೆ.

ನದಿಯಲ್ಲಿ ನೀರಿರುವ ನಾಲ್ಕು ತಿಂಗಳೂ ಸಹ ನಮ್ಮಲ್ಲಿಯ ರೈತರ ಪಂಪ್‌ಸೆಟ್ಟುಗಳಿಗೆ ದಿನಕ್ಕೆ ಆರು ತಾಸು ಮಾತ್ರ ವಿದ್ಯುತ್ ಪೂರೈಕೆ. ಅದೇ ಹೊಲದ ಆಚೆಬದಿಗೆ ದಿನದ ಇಪ್ಪತ್ನಾಲ್ಕು ತಾಸು ಪಂಪ್‌ಸೆಟ್ಟುಗಳು ನಿರಂತರವಾಗಿ ನೀರನ್ನು ಎಳೆದುಹಾಕುತ್ತವೆ. ಹೀಗಾಗಿ ಅಲ್ಲಿ ತೆನೆಗಳು ತಲೆದೂಗುತ್ತಿದ್ದರೆ ಇಲ್ಲಿಯ ಹೊಲಕ್ಕೆ ಹಸುರಿನ ಹೊದಿಕೆಯೂ ಇಲ್ಲ.

ಹೀಗೆ ವರುಷದುದ್ದಕ್ಕೂ ನೈಸರ್ಗಿಕ ವೈಪರೀತ್ಯಗಳೊಂದಿಗೆ ಜೂಜಾಡುತ್ತ ಬೆವರು ಹರಿಸಿ ಕಷ್ಟಪಟ್ಟು ಬೆಳೆದ ಮುಷ್ಟಿ ಕಾಳುಗಳನ್ನು ಮಾರಲೂ ಮತ್ತೆ ಈ ರೈತ ಮಹಾರಾಷ್ಟ್ರದತ್ತಲೇ ಮುಖ ಮಾಡಬೇಕು.

ನಮ್ಮ ಈ ಸೀಮಾಪಟ್ಟಿಯ ಜನಕ್ಕೆ ಒಳ್ಳೆಯ ರಸ್ತೆಯೂ ಗಗನಕುಸುಮವೇ! ಒಳ್ಳೆಯ ಶಿಕ್ಷಣಕ್ಕಾಗಿ ಶಾಲೆ-ಕಾಲೇಜುಗಳಿಗೆ ಹರದಾರಿ ನಡೆದುಹೋಗಬೇಕು. ಉದ್ಯೋಗಾವಕಾಶಗಳಂತೂ ಸೊನ್ನೆ! ಹೊಟ್ಟೆಹೊರೆಯಲು ಇರುವ ಒಂದೇ ಉದ್ಯೋಗಾವಕಾಶವೆಂದರೆ ಆಗಲೇ ಹೇಳಿದ ಹಮಾಲಿ ಕೆಲಸ, ಅದೂ ನೆರೆ ರಾಜ್ಯಗಳಲ್ಲಿ!

ಇಷ್ಟೊಂದು ಸಂಪನ್ಮೂಲಗಳಿರುವ ಈ ಪ್ರದೇಶವನ್ನು ಕಳೆದ ನಾಲ್ಕು ದಶಕಗಳಿಂದ ಕರ್ನಾಟಕ ಸರಕಾರ ಸಲುಹಿದ ಬಗೆಯನ್ನು ನೆನೆಸಿಕೊಂಡರೆ, ಸರಕಾರ ಈ ಪ್ರದೇಶವನ್ನು ಪೋಷಿಸುವುದಕ್ಕೆ ಬದಲು ಶೋಷಿಸುತ್ತಿದೆ ಎಂಬ ಸಂದೇಹ ಮೂಡದೇ ಇರದು. ಈ ಸೀಮಾಪಟ್ಟಿಯಲ್ಲಿ ವಸೂಲಾಗುವ ಕರಾಕರಣೆ ಮತ್ತು ಇನ್ನಿತರ ಸಂಪತ್ತನ್ನಷ್ಟೇ ಇಲ್ಲಿ ಸುರಿದರೆ ಸಾಕು ಈ ಪ್ರದೇಶ ನಂದನವನವಾದೀತು.

ಮನೆಯೊಡೆಯನಾದವನಿಗೆ ಮನೆಮಂದಿಯನ್ನೆಲ್ಲ ಸಮನಾಗಿ ನೋಡುವ ದೃಷ್ಟಿ ಬೇಕು. ತನ್ನವರು ನನ್ನವರೆಂದು ಭೇದಭಾವ ಬಗೆಯದ ನ್ಯಾಯನಿಷ್ಠುರತೆ ಬೇಕು. ಒಟ್ಟಾರೆ ಕುಟುಂಬದ ಒಳಿತಿಗಾಗಿ, ಭವಿಷ್ಯತ್ತಿಗಾಗಿ ದೂರದೃಷ್ಟಿ ಉಳ್ಳವನಾಗಬೇಕು.

ಆದರೆ ಕಳೆದ ಇಪ್ಪತ್ತೈದು ವರುಷಗಳಿಂದ ಕಾರಣಾಂತರದಿಂದ ಈ ಗಡಿ ಪ್ರದೇಶವನ್ನು ಅಲೆಯುತ್ತಿರುವ, ಇಲ್ಲಿಯ ಆಗು-ಹೋಗುಗಳಿಗೆ ಪ್ರತ್ಯಕ್ಷ ಸಾಕ್ಷಿಯಾಗಿರುವ ನನಗೆ ಆಗಾಗ ಅಣ್ಣ ಬಸವಣ್ಣನ ಒಂದು ವಚನ ನೆನಪಿಗೆ ಬರುತ್ತದೆ (ಭಕ್ತಿಭಂಡಾರಿ ಬಸವಣ್ಣ ಈ ವಚನವನ್ನು ಉದ್ಗರಿಸುವಾಗಿನ ಉದ್ದೇಶ, ಪ್ರಸಂಗ, ಆಗ ಆತನ ಮನದ ಹಿಂಬದಿಯಲ್ಲಿದ್ದ ಪ್ರತಿಮೆ ಭಿನ್ನವಾದುದು ಎಂಬ ಅರಿವಿದ್ದು ಸೀಮಾಭಾಗದ ಸ್ಥಿತಿಯ ಸೀಮಿತ ಉದ್ದೇಶಕ್ಕೆ ನಾನಿದನ್ನು ಬಳಸಿಕೊಳ್ಳುತ್ತಿರುವುದಕ್ಕೆ ಕ್ಷಮೆ ಇರಲಿ).

ಮನೆಯಲ್ಲಿ ಮನೆಯೊಡೆಯನಿದ್ದಾನೋ ಇಲ್ಲವೋ ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ...

ನಿಜಕ್ಕೂ ಈ ನಾಡಿನ ಹೊಸ್ತಿಲಂತಿರುವ ಈ ಸೀಮೆಯಲ್ಲಿ ಹುಲ್ಲಿನ ಕಳೆ, ಕಸಕಡ್ಡಿ ಹುಟ್ಟಿ ದಿನದಿಂದ ದಿನಕ್ಕೆ ಪಸರಿಸುತ್ತಿರುವುದನ್ನು ಪರಿಪರಿಯಾಗಿ ಬಣ್ಣಿಸಿದರೂ ಇತ್ತ ಆಡಳಿತವರ್ಗದ ಅಲಕ್ಷ್ಯವನ್ನು ಕಣ್ಣಾರೆ ಕಂಡಾಗ ಕನ್ನಡ ನಾಡೆಂಬ ಈ ಮನೆಯಲ್ಲಿ ''ಮನೆಯೊಡೆಯ''ನಿದ್ದಾನೋ ಇಲ್ಲವೋ ಎಂಬ ಸಂದೇಹ ಮೂಡುವುದಂತೂ ಸತ್ಯ.

ಒಬ್ಬ ರೈತನ ಬೆಳೆಯ ಸಿರಿಯನ್ನು, ಹೊಲದ ಬಗೆಗಿನ ಆತನ ಅಕ್ಕರಾಸ್ಥೆ ಆತನ ದುಡಿಮೆಯ ಪರಿಯನ್ನು ನೋಡಬೇಕೆಂದರೆ ಆತನ ಹೊಲದ ಸೀಮೆಯನ್ನು ಲಕ್ಷ್ಯಕೊಟ್ಟು ಪರೀಕ್ಷಿಸು ಎಂಬುದು ಹಿರಿಯರು ಹೇಳುವ ಅನುಭವದ ಮಾತು, ಹೌದು. ಕೃಷಿ ಮಾಡುವ ಪ್ರತಿಯೋರ್ವ ಅನಕ್ಷರಸ್ಥ ರೈತನಿಗೂ ಗೊತ್ತು – ''ಹೊಲದಲ್ಲಿ ಮೊದಲು ಹುಲ್ಲುಗರಿಕೆಗಳು ಹುಟ್ಟಿಕೊಳ್ಳುವುದು ಆ ಹೊಲದ ಸೀಮೆಯಲ್ಲಿಯೇ'' ಎಂದು. ಆತ ತಕ್ಕ ಸಮಯಕ್ಕೆ ರೆಂಟೆ-ಕುಂಟೆ ಹೊಡೆದು, ಉಳುಮೆ ಮಾಡಿ, ಅದನ್ನು ತೊಡೆದುಹಾಕದಿದ್ದರೆ, ಈ ಹುಲ್ಲುಗರಿಕೆ ಇಡೀ ಹೊಲವನ್ನೆಲ್ಲ ಆವರಿಸೀತು ಮತ್ತು ಇದೇ ಹುಲ್ಲುಗರಿಕೆ ಇಡೀ ಹೊಲದ ಬೆಳೆಗೇನೇ ಚ್ಯುತಿ ತಂದೀತು.

ಇಂದು ಕನ್ನಡ ನಾಡಿನ ಸೀಮೆಯಲ್ಲೂ ಆಗುತ್ತಿರುವುದು ಅದೇ. ಆದರೆ ಆಶ್ಚರ್ಯದ ಮತ್ತು ಅಷ್ಟೇ ವಿಷಾದದ ಸಂಗತಿ ಎಂದರೆ ಒಬ್ಬ ಅನಕ್ಷರಸ್ಥ ರೈತನಿಗೆ ಗೊತ್ತಿರುವ ಈ ಸತ್ಯ ನಮ್ಮ ಸರಕಾರದಲ್ಲಿರುವ ಅತಿರಥ ಮಹಾರಥ ಮೇಧಾವಿಗಳಿಗೂ ಗೋಚರಿಸದೇ ಹೋಗಿರುವುದು, ಅಥವಾ ತಿಳಿದಿದ್ದೂ ತಮ್ಮ ಹಿತಾಸಕ್ತಿಗಳನ್ನೇ ಪೋಷಿಸಿಕೊಂಡು ಬರುತ್ತಿರುವುದು.

ಡಾ॥ ಅನಿಲ ಕಮತಿ
ಯಕ್ಸಂಬಾ - ೫೯೧ ೨೪೪



## ಮೌನ

ಮೌನ ಒಂದು ಕನಸು;
ನೋವುಗಳ ಎಚ್ಚರಿಕೆ;
ಹೃದಯದ ಕತ್ತಲೆಗೆ
ಹಿಡಿದ ಕಂದೀಲು.
ತುಟಿಗಳು ಉಸರದ
ನಾಲಿಗೆ ಉಚ್ಚರಿಸದ
ಶಬ್ದಗಳು.

ಬಯಕೆಗಳ ತೋಟದಲಿ
ವಸಂತ ಕಾಲಿಟ್ಟಾಗಷ್ಟೇ
ಹಾಡುವ ಕೋಗಿಲೆಗಳು.
ಹೇಳಲಾಗದ, ಆಕಾರ ಪಡೆಯದ
ಶಬ್ದಗಳು.
ಇಂದು
ಕೇವಲ ಶಬ್ದಗಳು
ಆತ್ಮದ ವೀಣೆಯ ಮೇಲೆ
ಕುಣಿಯುವ ಬೆರಳು
ಬಯಕೆಯ ಶ್ರುತಿ
ನಿಶ್ಶಬ್ದ, ನಿರಾಕಾರ.

ಅಲಿ ಸರ್ದಾರ್ ಜಾಫ್ರಿ
ಕನ್ನಡಕ್ಕೆ ವಿಭಾ

# ಗುಟಕಾ ಗುಲಾಮನಾಗದ ತನಕ ದೊರೆಯದಣ್ಣ ಮುಕುತಿ

ಭಾಲಚಂದ್ರ ಜಯಶೆಟ್ಟಿ

ಆಸೂರಿನ ಹೈವೇ ಮೇಲಿನ 'ಗಂಗಾಲಾಭ ಚಾ ಫರಾಳ' ಹೋಟಳನಲ್ಲಿ ಮೊನ್ನೆ ಒಂದು ಬೋರ್ಡ ಹಾಕಿದ್ದಾರೆ. ಅದರ ಒಕ್ಕಣೆ ಹೀಗಿದೆ:

ಹುಟ್ಟೋದು ಆಕಸ್ಮಿಕ: ಸಾಯೋದು ಖಂಡಿತ
ತಡವೇಕೆ ? ಬಾ ಗೆಳೆಯ, ಇಲ್ಲಿ ನಿನ್ನ ಮುಕ್ತಿ ನಿಶ್ಚಿತ.

ಇದೊಂದು ಗುಟಕಾ ಕುರಿತಾದ ಜಾಹಿರಾತು. ಇದರಲ್ಲಿ ಎಷ್ಟೊಂದು ಅರ್ಥ ಅಡಗಿದೆ ಎಂದು ನಾನು ಯೋಚನಾಮಗ್ನನಾದೆ. ಜೀವನ ಶಾಶ್ವತ ಅಲ್ಲ, ಸಾವು ನಿಶ್ಚಿತ ಎಂದು ನಮಗೆಲ್ಲ ಗೊತ್ತು. ಆದರೂ ಬದುಕಲು ಒದ್ದಾಡುತ್ತೇವೆ. ರೈತನಿಂದ ಹಿಡಿದು ರಾಜನವರೆಗೆ, ಪ್ಲೀಡರನಿಂದ ಹಿಡಿದು ಲೀಡರನವರೆಗೆ, ಕೋಟ್ಯಧೀಶನಿಂದ ಹಿಡಿದು ಕಂಗಾಲನವರೆಗೆ, ಮತದಾರನಿಂದ ಹಿಡಿದು ಮಂತ್ರಿಯವರೆಗೆ, ಸೇವಕನಿಂದ ಹಿಡಿದು ಸೆಕ್ರೆಟರಿಯವರೆಗೆ ಎಲ್ಲರಿಗೂ ಸಾಯುವುದು ಬೇಡವಾಗಿದೆ. ಯಾಕೆಂದರೆ ಸತ್ತಮೇಲೆ ಸ್ವರ್ಗ ಸಿಗುತ್ತದೆ ಎಂಬ ಗ್ಯಾರಂಟಿ ಯಾರಿಗೂ ಇಲ್ಲ. ಅಂಥ ಗ್ಯಾರಂಟಿ ಕೊಡುವುದೆಂದರೆ ಗುಟಕಾ ಮಾತ್ರ. ಗುಟಕಾ ಚಟ ಆಕಸ್ಮಿಕ, ಆ ಚಟ ಹತ್ತಿದಮೇಲೆ ಸಾವು ಎಂಬ ಮುಕ್ತಿ ನಿಶ್ಚಿತ. ಮೇಲೆ ಉಲ್ಲೇಖಿಸಿದ ಘೋಷಣೆಗೂ ಈ ಮಾತಿಗೂ ಎಷ್ಟು ಸಾಮ್ಯವಿದೆ! ಸಾವು ಎಂದರೆ ಚಿರ ಶಾಂತಿ, ಆಧ್ಯಾತ್ಮಿಕ ಸುಖ ಕೊಡುವಂಥ ಸ್ಥಿತಿ. ಅದು ಗುಟಕಾದಿಂದ ಸಾಧ್ಯ.

ಹರಿದಾಸರು ಒಂದು ಮಾತು ಹೇಳಿದ್ದಾರೆ: 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎಂದು. ಅಂದರೆ ಎಲ್ಲಿಯವರೆಗೆ ನೀವು ಗುರುವಿಗೆ ಗುಲಾಮರಾಗಿರುತ್ತೀರೋ ಅಲ್ಲಿಯವರೆಗೆ ನಿಮಗೆ ಮುಕ್ತಿಯೆಂಬುದು ಇಲ್ಲವೆಂದೆ ? ಹಾಗಾದರೆ ಯಾರ ಗುಲಾಮರಾದರೆ ಮುಕ್ತಿ ಇದೆ, ಎಂಬ ಮಾತನ್ನು ಅವರು ತಮ್ಮ ಅನುಪಲ್ಲವಿಯಲ್ಲಿ ಹೇಳಿಯೇ ಹೇಳಿದ್ದಾರೆ. ಆದರೆ ಆ ಹಾಡನ್ನು ಎಡಿಟ್ ಮಾಡಿದ ನಮ್ಮ ಪಂಡಿತೋತ್ತಮರು ಆ ಸಾಲನ್ನೇ ಹಾರಿಸಿ ಬಿಟ್ಟಿದ್ದಾರೆ. ಆ ಸಾಲು ಹೀಗಿದೆ: 'ಗುಟಕಾ ಗುಲಾಮನಾಗದ ತನಕ ದೊರೆಯದಣ್ಣ ಮುಕುತಿ.' ಎಂಥ ಸತ್ಯವಾದ ಮಾತನ್ನು ನಮ್ಮ ದಾಸರು ನುಡಿದಿದ್ದಾರೆ!

'ಗಂಗಾಲಾಭ ಚಾ ಫರಾಳ ಹೋಟಳ'ನಲ್ಲಿ ಹಾಕಿದ್ದ ಜಾಹಿರಾತಿನ ಬಗ್ಗೆ ಶುರುವಾದ ಮಾತಿನ ಜಾಡು ತಪ್ಪುತ್ತಿದೆ. ಆ ಜಾಹಿರಾತು ಯಾವುದೋ ಸ್ಪರ್ಧೆಯ ಬಗ್ಗೆ ಹೇಳುತ್ತದೆ. ಅದು ಈ ರೀತಿ ಮುಂದುವರಿಯುತ್ತದೆ:

ಗುಟಕಾ ಸೇವಿಸುವವರ ಭಾರಿ ಸ್ಪರ್ಧೆ

ಈ ಸ್ಪರ್ಧೆಗೆ ಎಲ್ಲರಿಗೂ ಸ್ವಾಗತ-ಸುಸ್ವಾಗತ

ಇಲ್ಲಿ ಗಂಡು-ಹೆಣ್ಣಿನ ಭೇದವಿಲ್ಲ, ಹುಡುಗ- ಮುದುಕ ಭೇದವಿಲ್ಲ, ಆಫೀಸರ-ಚಪರಾಸಿ ಭೇದವಿಲ್ಲ, ಗಂಡ-ಹೆಂಡತಿ ಭೇದವಿಲ್ಲ, ಬಡವ-ಬಲ್ಲಿದ ಭೇದವಿಲ್ಲ, ಬ್ರಾಹ್ಮಣ-ಶೂದ್ರ ಭೇದವಿಲ್ಲ, ರಾಮ-ರಹೀಮ ಭೇದವಿಲ್ಲ, ಯೇಸು-ಈಶ್ವರ ಭೇದವಿಲ್ಲ, ಕರಿಯ- ಬಿಳಿಯ ಭೇದವಿಲ್ಲ. ಒಟ್ಟಾರೆ ಇದೊಂದು ಸೆಕ್ಯುಲರ್ ಚಟ, ಸೆಕ್ಯುಲರ್ ಹವ್ಯಾಸ, ಸ್ವರ್ಗಕ್ಕೆ ಸೆಕ್ಯುಲರ್ ಹಾದಿ.

ಈ ಸ್ಪರ್ಧೆಯಲ್ಲಿ ಭಾಗಿಯಾದವರಿಗೆ ಒಂದಿಲ್ಲ ಒಂದು ಬಹುಮಾನ ಗ್ಯಾರಂಟಿ. ಯಾವುದೇ ಮೋಸವಿಲ್ಲ.

ಮೊದಲನೆಯ ಬಹುಮಾನ – ಸಾವು

ಎರಡನೆಯ ಬಹುಮಾನ – ಕ್ಯಾನ್ಸರ್

ಮೂರನೆಯ ಬಹುಮಾನ – ಷಂಡತ್ವ (ಪೌಣೇ ಆಠ)

ಪ್ರೋತ್ಸಾಹದ ಬಹುಮಾನಗಳು – ಕೆಮ್ಮು, ದಮ್ಮು, ಕುರುಡುತನ, ಲಕವಾ, ಹೃದಯವಿಕಾರ, ಗರ್ಭಪಾತ, ಕೆಪ್ಪುತನ ಇತ್ಯಾದಿ, ಇತ್ಯಾದಿ...

(ವಿಶೇಷ: ಗರ್ಭಿಣಿ ಸ್ತ್ರೀಯರು ನಿರಂತರವಾಗಿ ಗುಟಕಾ ಸೇವನೆ ಮಾಡುತ್ತಿದ್ದರೆ ಮುಂದೆ ಹುಟ್ಟಲಿರುವ ಮಗುವಿಗೆ ಪುಕ್ಕಟೆಯಾಗಿ ತಾಯಿ ಗಳಿಸಿದ ಪುಣ್ಯ ಟ್ರಾನ್ಸಫರ್ ಆಗುತ್ತದೆ. ಆಕೆಯ ತಪಸ್ಸಿನ ಫಲ ಆ ಮಗುವಿಗೆ ರಕ್ತಗತವಾಗಿ ಲಭಿಸಿ ಗರ್ಭಿಣಿ ತಾಯಿಯು ತನ್ನ ಹೊಟ್ಟೆಯಲ್ಲಿ ಹುಟ್ಟಲಿರುವ ಮಗುವಿಗೆ ಕೈವಲ್ಯ-ಲಾಭ ಮಾಡಿಕೊಡುತ್ತಾಳೆ)

ಬೆಲೆ – ಕೇವಲ ರೂ. ೧-೦೦, ೨-೦೦, ೩-೦೦, ೪-೦೦ ಮತ್ತು



೫-೦೦ ಗುಟಕಾ ಚೀಟಿಯ ರೂಪದಲ್ಲಿ.

ಈ ಚೀಟಿಗಳು ಎಲ್ಲಾ ಕಡೆಗೂ ಲಭ್ಯ. ಹತ್ತಿರದ ಬೀಡಾ ಅಂಗಡಿ, ಪಾನ-ಡಬ್ಬಾ, ಕಿರಾಣಿ ಯಾ ದಿನಸಿ ಅಂಗಡಿಗಳಲ್ಲಿ ವಿಚಾರಿಸಿ. ಗ್ರಾಹಕರಿಗೆ ಚೀಟಿಗಳನ್ನು ಪಡೆಯುವಲ್ಲಿ ಯಾವುದೇ ತೊಂದರೆಯಾದರೆ ನೇರವಾಗಿ ನಮಗೆ ಬರೆದು ತಿಳಿಸಿ ಅಥವಾ ಸಮೀಪದ ಅಬಕಾರಿ ಕಚೇರಿಯಲ್ಲಿ ದೂರು ದಾಖಲಿಸಿ.

ಇದು ನಿರಂತರವಾಗಿ ನಡೆಯುವ ಸ್ಪರ್ಧೆಯಾದ್ದರಿಂದ ಇದಕ್ಕೆ ಕಾಲಮಿತಿ ಇಲ್ಲ. ಯಾರು, ಯಾವಾಗ, ಎಲ್ಲಿ ಬೇಕಾದರೂ ಈ ಸ್ಪರ್ಧೆಯಲ್ಲಿ ಭಾಗಿಗಳಾಗಬಹುದು. ಅವರವರ ಹೂಡಿಕೆಗೆ ಅನುಗುಣವಾಗಿ ಬಹುಮಾನಗಳು ಗ್ಯಾರಂಟಿ. ಯಾರಿಗಾದರೂ ಬಹುಮಾನಗಳು ತಲುಪದಿದ್ದರೆ ಕೂಡಲೇ ತಿಳಿಸುವುದು. ಈ ಹೇಳಿಕೆಯ ಕುರಿತು ಯಾರಿಗೆ ಏನೇ ತಕರಾರುಗಳಿದ್ದರೆ ಹತ್ತಿರದ ಯಾವುದೇ ದೊಡ್ಡ ಆಸ್ಪತ್ರೆಯಲ್ಲಿ ದೂರನ್ನು ದಾಖಲಿಸಬಹುದು. ಅಂಥ ದೂರು ದಾಖಲಿಸುವವರಿಗೆ ವಿಶೇಷ ಪ್ರೋತ್ಸಾಹ ಧನ ನೀಡಲಾಗುವುದು. ಮತ್ತು ಗುಟಕಾ ಉತ್ಪಾದನೆಯ ಗುಣಮಟ್ಟ ಸುಧಾರಿಸುವಲ್ಲಿ ಹೆಚ್ಚಿನ ಕಾಳಜಿ ವಹಿಸಲಾಗುವುದು (ವಿವರಗಳಿಗೆ ಬರೆದು ತಿಳಿದುಕೊಳ್ಳಿರಿ).

ಇದು ನಿತ್ಯ ನಡೆಯುವ ಮಹಾಕುಂಭ-ಸಮಾರಂಭ. ಸಾರ್ವಜನಿಕ ಸ್ಥಳಗಳಿಂದ ಪ್ರಾರಂಭವಾಗಿ ಸ್ಮಶಾನಭೂಮಿಯಲ್ಲಿ ಅಂತ್ಯಗೊಳ್ಳುವುದು. ಈ ಮಹಾಕುಂಭದ ಹೋತೃಗಳು ಕೈಲಾಸ ಪರ್ವತದಲ್ಲಿ ಅನಂತಕಾಲದಿಂದ ತಪಸ್ಸಮಾಧಿಯಲ್ಲಿದ್ದ ಶ್ರೀ ಶ್ರೀ ಮೃತ್ಯುವಾನಂದಜೀ ಮಹಾರಾಜ.

ಈ ಕುಂಭಯಜ್ಞದಲ್ಲಿ ಸ್ವಾಮಿ ಚಟ್ಟಾನಂದಜೀ ಮಹಾರಾಜ, ಗ್ರಂಥಿಕಾನಂದಜೀ ಮಹಾರಾಜ, ಯಕ್ಷ್ಮಾನಂದಜೀ ಮಹಾರಾಜ, ಜರ್ಜರಾನಂದಜೀ ಮಹಾರಾಜ ಮುಂತಾದ ಅಸಂಖ್ಯಾತ ಸಾಧು ಸಂತರು ಭಾಗವಹಿಸುತ್ತಾರೆ. ಬೋಡುತಲೆ ಮಹಾಸ್ವಾಮಿಗಳು ರಚಿಸಿದ 'ಗುಟಕಾ ಗೀತಾ' ಗ್ರಂಥ ಎಲ್ಲ ಕಡೆಗೂ ಲಭ್ಯ. ಬೆಲೆ ಕೇವಲ 'ತ್ರಿಕಾಲ ಗುಟಕಾ ಭಕ್ತನಾಗುತ್ತೇನೆ' ಎಂದು ಆಣೆ ಮಾಡುವುದು ಮತ್ತು ಅದನ್ನು ತ್ರಿಕರಣಪೂರ್ವಕ ಪಾಲಿಸುವುದು. ಶ್ರದ್ಧಾ-ಭಕ್ತಿಯಿಂದ ಈ ಗ್ರಂಥದ ಪಾರಾಯಣ ಮತ್ತು ಅನುಷ್ಠಾನ ಮಾಡುವುದರಿಂದ ಕೈಲಾಸಾರೋಹಣದ ಫಲಪ್ರಾಪ್ತಿಯ ಭಾಗ್ಯ ಗ್ಯಾರಂಟಿ.

ಮದುವೆಯಾಗಲಿರುವ ತರುಣ-ತರುಣಿಯರಿಗೆ ಇದೊಂದು ಸುವರ್ಣಾವಕಾಶ. ಗುಟಕಾಭಕ್ತನ(ಳ)ನ್ನು ತನ್ನ ಜೀವನದ ಸಂಗಾತಿಯನ್ನಾಗಿ ಮಾಡಿಕೊಂಡರೆ ಸಾಕು, 'ಕುಟುಂಬ ನಿಯೋಜನ'ದ ತಾಪತ್ರಯವಿಲ್ಲ. ಅಂಥವರಿಗೆ ಮಕ್ಕಳಾಗುವುದು ತಾನೇ ತಾನಾಗಿ ನಿಂತುಹೋಗುತ್ತದೆ. ಅಂಥವರಿಗೆ 'ಜನಸಂಖ್ಯಾನಿಯಂತ್ರಕ ರತ್ನ' ಎಂಬ ಗೌರವ ಪುರಸ್ಕಾರ ನೀಡಲಾಗುವುದು.

ಗುಟಕಾಕ್ಕೆ ಮೂರು ಜನ ಸೋದರಿಯರಿದ್ದಾರೆ: ೧. ಸೀನಮ್ಮ (ನಶ್ಯದಿಂದ ಹುಟ್ಟುವವಳು) ೨. ಉಗುಳಮ್ಮ (ಜರ್ದಾ, ಹೊಗೆಸೊಪ್ಪಿನಿಂದ ಹುಟ್ಟುವವಳು) ಮತ್ತು ೩. ಉರುಬಮ್ಮ (ಸಿಗರೇಟು, ಬೀಡಿ, ವಗೈರೆಗಳಿಂದ ಹುಟ್ಟುವವಳು). ಈ ಮೂರೂ ಸೋದರಿಯರು ಸರ್ವಗುಣ ಸಂಪನ್ನೆಯರು. ಹುಡುಕಿದರೂ ಸಿಗಲಾರದಂಥ ಕನ್ಯೆಯರು. ಇವರ ಮದುವೆ ಮಾಡಬೇಕಾಗಿದೆ. ಮಾಡಿಕೊಂಡವರಿಗೆ ಯಾವತ್ತೂ ಸರ್ವಸುಖ ಕೊಡುವುದರಲ್ಲಿ ಇವರು ಎಂದೂ ಜಿಪುಣತನ ಮಾಡಲಾರರು. ಇವರಿಗಾಗಿ ಸರಿಯಾದ ವರಗಳ ಹುಡುಕಾಟವಿದೆ. ಸ್ವಯಂವರಕ್ಕೆ ಎಲ್ಲ ವರ್ಗದ, ಎಲ್ಲ ವರ್ಣದ, ಎಲ್ಲ ಸ್ತರದ, ಎಲ್ಲ ವಯಸ್ಸಿನ ಅಭ್ಯರ್ಥಿಗಳಿಗೆ ಮುಕ್ತ ಸ್ವಾಗತವಿದೆ.

ಕೊನೆಯದಾಗಿ: ಗುಟಕಾದ ಜೊತೆಗೆ ತಾಡಿಯ ಕಾಂಬಿನೇಶನ್ ಮಾಡಿದರೆ ಸೊಕ್ಕಿದ ಆನೆಯ ಬಲ ನಿಮ್ಮ ತೋಳುಗಳಿಗೆ ಬರುವುದು. ನೀವು ತ್ರಿಲೋಕಗಳನ್ನು ಗೆದ್ದ ವೀರರಾಗುತ್ತೀರಿ. ಚಟ್ಟದ ಮೇಲೆ ನಿಮ್ಮ ವಿಜಯಯಾತ್ರೆ ಬಹಳ ವೈಭವದಿಂದ ನೆರವೇರಿಸಲಾಗುವುದು. ಗುಟಕಾ ಸೇವನೆಯಿಂದ ಇಹಲೋಕದಲ್ಲಿ ಎಲ್ಲ ಭೋಗ ಭಾಗ್ಯಗಳು ಪ್ರಾಪ್ತವಾಗಿ ಪರಲೋಕದಲ್ಲಿ ಶಾಶ್ವತವಾದ ಮುಕ್ತಿ ದೊರಕುವುದು. ಈ ಮಾತು ಸುಳ್ಳಾದರೆ 'ಸ್ವಾಮಿ ರೋಗಾನಂದ ಜೀ ಮಹಾರಾಜ'ರ ಮೇಲೆ ನೀವು ಕೇಸು ಹಾಕಬಹುದು. ಆದರೆ ಈ ಮಾತು ಹುಸಿಯಾಗಲು ಸಾಧ್ಯವೇ ಇಲ್ಲ. ಯಾಕೆಂದರೆ ಇದು ದಯಾಮಯನಾದ ಯಮದೇವನಿಂದ ಹರಿದುಬಂದ ವಾಣಿಯಾಗಿದೆ, ರೋಗಾನಂದ ಮಹಾರಾಜರು ಆ ವಾಣಿಯ ಸಂದೇಶವಾಹಕರಾಗಿದ್ದಾರೆ.

ಜೈ ಗುಟಕಾ ಗುಣಾರ್ಣವ, ಸರ್ವಸಿದ್ಧಿ ಕಲ್ಪವಲ್ಲರಿ, ತತ್ಕಾಲ ಮುಕ್ತಿ ಪ್ರದಾಯಿನಿ. ಜೈ! ಜೈ!

**ಭಾಲಚಂದ್ರ ಜಯಶೆಟ್ಟಿ**
ನಮ್ಮ ಮನೆ, ಜಯನಗರ, ಸೇಡಂ ರಸ್ತೆ, ಗುಲಬರ್ಗಾ – ೫೮೫ ೧೦೫

ಡಾ|| ಯು. ಆರ್. ಅನಂತಮೂರ್ತಿಯವರು 'ದಿವ್ಯ'ದ ಮುಖೇನ ಜಾಗತೀಕರಣಕ್ಕೆ ಪರ್ಯಾಯವನ್ನು ಹುಡುಕಹೊರಟಿದ್ದಾರೆ ಎನ್ನುವ ವಿಮರ್ಶೆ ಬೇಕಷ್ಟು ಬಂದಿವೆ. ಅದನ್ನು 'ದಿವ್ಯವೆಂಬ ದ್ವಿಜಭಾರತ' ಅಂತ ಕರೆದವರೂ ಇದ್ದಾರೆ. ಎರಡನೆ ಅಭಿಪ್ರಾಯ ಸ್ವಲ್ಪ ಒರಟಾಗಿ ಬಂದಿದೆ ಎನ್ನುವುದನ್ನು ಬಿಟ್ಟರೆ ಮೊದಲ ಅಭಿಪ್ರಾಯವೂ ಎರಡನೇ ಅಭಿಪ್ರಾಯವೂ ಸೂಕ್ಷ್ಮವಾಗಿ ಒಂದೇ ಆಗಿದೆ. ಇಲ್ಲಿ ಜಾಗತೀಕರಣಕ್ಕೆ ಪರ್ಯಾಯದ ಹುಡುಕಾಟ ನಡೆದಿರುವುದು ಆರ್ಥಿಕತೆಯ ತಳಹದಿಯಲ್ಲಲ್ಲ; ಸಂಸ್ಕೃತಿಯ ತಳಹದಿಯಲ್ಲಿ. ಸಂಸ್ಕೃತಿ ಮತ್ತು ಸಂಪ್ರದಾಯಗಳ ವಸ್ತುನಿಷ್ಠ ವ್ಯಾಖ್ಯಾನದಲ್ಲಿ ವ್ಯತ್ಯಾಸವಿದೆಯಾದರೂ ಅವು ಪ್ರತ್ಯೇಕಿಸಲಾಗದಷ್ಟು ನಿಕಟ ಸಂಬಂಧ ಉಳ್ಳವು. ಸರಳವಾಗಿ ಹೇಳುವುದಾದರೆ ಆಯಾ ಕಾಲಘಟ್ಟದ ಆರ್ಥಿಕ, ಸಾಮಾಜಿಕ, ರಾಜಕೀಯ ಅವಶ್ಯಕತೆಗಳನ್ನು ಭರಿಸಿಕೊಡಲಾರದ ಮತ್ತು ಕಾಲಘಟ್ಟಕ್ಕೆ ಅಪ್ರಸ್ತುತವಾಗುವ ಸಾಂಸ್ಕೃತಿಕ ಅಂಶಗಳನ್ನು ಉಳಿಸಿಕೊಳ್ಳುವ ಪ್ರಯತ್ನವನ್ನು ಸಂಪ್ರದಾಯಶೀಲತೆ ಎಂದು ಕರೆಯಬಹುದು. ಇಂಥಲ್ಲಿ ಅನಂತಮೂರ್ತಿಯವರ ಹುಡುಕಾಟ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ನಡೆದಿರದೆ ಸಂಪ್ರದಾಯದ ನೆಲೆಗಟ್ಟಿನಲ್ಲಿ ನಡೆದಿದೆ ಎನ್ನಲು 'ದಿವ್ಯ'ದಲ್ಲಿ ಬೇಕಷ್ಟು ಪುರಾವೆ ದೊರಕುತ್ತದೆ. 'ವಿದ್ಯುತ್ ಬಳಸಬಾರದು, ಟಾರ್ಚ್ ತರಬಾರದು, ಹೋಟೇಲು ಇಡಬಾರದು' ಎನ್ನುವ ಅವಧಾನಿ ಪಾತ್ರದ ಮುಖೇನ ಅನಂತಮೂರ್ತಿ ಜಾಗತೀಕರಣಕ್ಕೆ ಸಾಂಸ್ಕೃತಿಕ ಪರ್ಯಾಯದ ಮುನ್ನೋಟ ಕೊಡುತ್ತಿದ್ದಾರೋ, ಅಲ್ಲ ವಿಡಂಬನೆ ಮಾಡುತ್ತಿದ್ದಾರೋ ಎನ್ನುವುದು ಅರ್ಥವಾಗುವುದಿಲ್ಲ ಇದು ನೇರವಾಗಿ ಗಾಂಧಿಯನ್ ಇಕಾನಮಿಯಿಂದ ಪಡೆದುಕೊಂಡ ತಿಳಿವಳಿಕೆಯಾಗಿದೆ. ಗಾಂಧಿ ಅವರ ಕಾಲಘಟ್ಟದಲ್ಲಿ ಹೇಳಿದ ಈ ವೈಚಾರಿಕ ಸಂದರ್ಭದ ಕೃತಿಯಾದ 'ದಲಿತರು ಮತ್ತು ಜಾಗತೀಕರಣ'ದಲ್ಲಿ ಜಾಗತೀಕರಣವನ್ನು ಸ್ವೀಕರಿಸುವ ಮುಖೇನ ಈ ದೇಶದ ಪುರೋಹಿತಶಾಹಿ ವ್ಯವಸ್ಥೆಯ ನಿರಾಕರಣೆಗೆ ಯತ್ನಿಸಿದ್ದಾರೆ. ಇಲ್ಲಿ ಪುರೋಹಿತಶಾಹಿ ನಿಲುಮೆಯ ನಿರಾಕರಣೆ ಇದೆಯೆನ್ನುವುದಕ್ಕಾಗಿ ಮೊಗಳ್ಳಿ ಅಭಿನಂದನಾರ್ಹರು. ಆದರೆ ಪ್ರಸ್ತುತ ಕೃತಿ ಎರಡು ರೀತಿಯಲ್ಲಿ ಸ್ಥಾಪಿತ ಹಿತಾಸಕ್ತಿಯನ್ನು ಬೇರೊಂದು ರೀತಿಯಲ್ಲಿ ಭದ್ರಪಡಿಸುವ ಕೆಲಸವನ್ನು ಮಾಡುತ್ತದೆ. ಬಂಡವಾಳಶಾಹಿ ವ್ಯವಸ್ಥೆಯನ್ನು ಪುಷ್ಟೀಕರಿಸುವ ಮುಖೇನ ಒಂದು ಕೆಲಸ ನಡೆಯುತ್ತದೆ. ಇನ್ನೂ ಸ್ಪಷ್ಟಪಡಿಸಬೇಕಾದರೆ ಮೊಗಳ್ಳಿಯವರ ಧ್ವನಿಯನ್ನು ಗಮನಿಸಬೇಕು. 'ಜಾಗತೀಕರಣದ ವಿರೋಧಿಗಳು ಮೇಲು ಜಾತಿಯವರಾಗಿದ್ದು ದಲಿತರಿಗೆ ಒಳಿತಾಗಬಾರದೆಂಬ ಕಾರಣಕ್ಕಾಗಿ ಜಾಗತೀಕರಣವನ್ನು ವಿರೋಧಿಸುತ್ತಿದ್ದಾರೆ' ಎನ್ನುವ ಅವರ ವಾದಕ್ಕೆ ಯಾವುದೇ ಸಾಕ್ಷ್ಯಾಧಾರ ನೀಡಲು ಅವರು ಅಸಮರ್ಥರಾಗಿರುವುದರಿಂದ ಅಲ್ಲಿ ದಟ್ಟವಾದ ಅಸಹನೆ ಇದೆ ಎಂದು ಹೇಳಲೇಬೇಕಾಗುತ್ತದೆ. ನಿಮ್ನ ಜಾತೀಯ ಅಸಹನೆ ಎನ್ನುವಂಥದ್ದು ಮೂಲತಃ ಪುರೋಹಿತಶಾಹಿ ಸಿದ್ಧಾಂತವಾಗಿದ್ದು ಮೊಗಳ್ಳಿಯವರ ವಾದ ಬೇರೊಂದು ಸ್ವರೂಪದಲ್ಲಿ ಬೇರೊಂದು ನೆಲೆಯ ಪುರೋಹಿತಶಾಹಿ ನಿಲುವನ್ನು ಸ್ಥಾಪಿಸುವ ಪ್ರಯತ್ನ ಮಾಡುತ್ತದೆ. ಒಟ್ಟಾಗಿ ಹೇಳುವುದಾದರೆ ಇಲ್ಲಿ ಪ್ರಸ್ತಾಪಿಸಿರುವ ಬರಹಗಾರರಲ್ಲದೆ ಇನ್ನೂ ಬೇಕಷ್ಟು ಮಂದಿ ಹುಡುಕಾಡಿರುವ ಜಾಗತೀಕರಣಕ್ಕೆ ಪರ್ಯಾಯ ಎನ್ನುವಂಥದ್ದು ಬಹುಮಟ್ಟಿಗೆ ಸಾಂಸ್ಕೃತಿಕ ಹಿಮ್ಮುಖ ಚಲನೆಯ ಪರಿಣಾಮವನ್ನು ಉಂಟುಮಾಡುತ್ತದೆ.

ಇಂಥಲ್ಲಿ ಸೃಜನಶೀಲ ಸಾಹಿತ್ಯದ ಮುಖೇನ ಪರ್ಯಾಯದ ಹುಡುಕಾಟ ನಡೆಸುವವರು ಗಮನಿಸಬೇಕು. ಬಹುಮಟ್ಟಿಗೆ ಸೃಜನಶೀಲ ಸಾಹಿತ್ಯ ಎನ್ನುವಂಥದ್ದು

# ಸಾಂಸ್ಕೃತಿಕ ಪರ್ಯಾಯವೆಂಬ ಹಿಮ್ಮುಖ ಚಲನೆಯ ಧೋರಣೆ

ನಿಮ್ನ ಜಾತೀಯ ಅಸಹನೆ ಎನ್ನುವಂಥದ್ದು ಮೂಲತಃ ಪುರೋಹಿತಶಾಹಿ ಸಿದ್ಧಾಂತವಾಗಿದ್ದು ಮೊಗಳ್ಳಿಯವರ ವಾದ ಬೇರೊಂದು ಸ್ವರೂಪದಲ್ಲಿ ಬೇರೊಂದು ನೆಲೆಯ ಪುರೋಹಿತಶಾಹಿ ನಿಲುವನ್ನು ಸ್ಥಾಪಿಸುವ ಪ್ರಯತ್ನ ಮಾಡುತ್ತದೆ. ಒಟ್ಟಾಗಿ ಹೇಳುವುದಾದರೆ ಇಲ್ಲಿ ಪ್ರಸ್ತಾಪಿಸಿರುವ ಬರಹಗಾರರಲ್ಲದೆ ಇನ್ನೂ ಬೇಕಷ್ಟು ಮಂದಿ ಹುಡುಕಾಡಿರುವ ಜಾಗತೀಕರಣಕ್ಕೆ ಪರ್ಯಾಯ ಎನ್ನುವಂಥದ್ದು ಬಹುಮಟ್ಟಿಗೆ ಸಾಂಸ್ಕೃತಿಕ ಹಿಮ್ಮುಖ ಚಲನೆಯ ಪರಿಣಾಮವನ್ನು ಉಂಟುಮಾಡುತ್ತದೆ.

ವಿಚಾರಗಳು ಪ್ರಶ್ನಾರ್ಹವಾಗಿರುವಾಗ ಇಂದು ಅನಂತಮೂರ್ತಿ ಅದೇ ಸಂಗತಿಯನ್ನು ಜಾಗತೀಕರಣಕ್ಕೆ ಪರ್ಯಾಯವೆಂದು ಸೂಚಿಸುವುದಾದರೆ ಒಪ್ಪಿಕೊಳ್ಳಲು ಕಷ್ಟವಾಗುತ್ತದೆ.

ಅನಂತಮೂರ್ತಿಯವರ ಜಾಡಿನಲ್ಲೇ ಸಾಗುವ ಡಾ|| ನಾ. ಮೊಗಸಾಲೆಯವರ ಮಾಸ್ತಿ ಪ್ರಶಸ್ತಿಯಲ್ಲಿ ಎರಡನೆ ಸ್ಥಾನ ಪಡೆದ ಕೃತಿ 'ಅರ್ಥ'ದಲ್ಲಿ ಸಾಂಸ್ಕೃತಿಕ ಪರ್ಯಾಯದ ಹುಡುಕಾಟ ಪ್ರಜಾಪ್ರಭುತ್ವಕ್ಕೆ ತಕರಾರು ಎತ್ತಿ ರಾಜಪ್ರಭುತ್ವಕ್ಕೆ ತಾತ್ವಿಕ ಒಲವು ತೋರುವ ಮಟ್ಟಕ್ಕೂ ಹೋಗಿದೆ. ಮುಗ್ಧ ವೇಶ್ಯೆಯನ್ನು ಒಳ್ಳೆಯ ಕೃತ್ಯಕ್ಕಾಗಿ ಬಳಸಿಕೊಳ್ಳುವ ಮೂಲಕ ಸ್ತ್ರೀ ಶೋಷಣೆಗೆ ತಾತ್ವಿಕ ಸಮರ್ಥನೆ ಒದಗಿಸುವ ಪಾತ್ರವಿದೆ. ಸಾಂಸ್ಕೃತಿಕ ಪರ್ಯಾಯದ ಹುಡುಕಾಟ ಎಂದಾಗ ಈ ಎಲ್ಲ ಸಾಂಪ್ರದಾಯಿಕ ದೌರ್ಬಲ್ಯಗಳನ್ನು ಸಹನೀಯವಾಗಿ ಕಾಣುವುದು ಅನಿವಾರ್ಯವೇನೋ. ಅಥವಾ ಜಾಗತೀಕರಣ ಮತ್ತು ಆಧುನೀಕರಣದ ಭಿನ್ನತೆಗಳನ್ನು ಗಮನಿಸುವಲ್ಲಿ ತೊಂದರೆ ಎದುರಿಸಿದಾಗ ಅನಂತಮೂರ್ತಿಯಂಥವರಿಗೂ ಸಹ ಇಂತಹ ತೊಂದರೆಗಳು ಎದುರಾಗಿರಬಹುದು (ಜಾಗತೀಕರಣ-ಆಧುನೀಕರಣದ ವ್ಯತ್ಯಾಸವನ್ನು ವಿಷದಪಡಿಸುವುದು ಇಲ್ಲಿನ ಉದ್ದೇಶವಲ್ಲವಾದ್ದರಿಂದ ಈ ವಿಚಾರವನ್ನು ಎತ್ತಿಕೊಳ್ಳುತ್ತಿಲ್ಲ.)

ಇದಕ್ಕಿಂತ ಭಿನ್ನವಾಗಿ ಡಾ|| ಮೊಗಳ್ಳಿ ಗಣೇಶ್ ಅವರು ತಮ್ಮ

ಸಿದ್ಧಾಂತಗಳಿಗೆ ಅತೀತವಾದದ್ದು ಎಂಬ ಅಭಿಪ್ರಾಯವೂ ಇದೆ. ಅನ್ವಯವೂ ಇದೆ. ಆದರೆ ಜಾಗತೀಕರಣ ಎನ್ನುವಂಥದ್ದು ಸಿದ್ಧಾಂತಕ್ಕೆ ಅತೀತವಾದ ಆಧುನೀಕರಣದ ಸಹಜ ಪ್ರಕ್ರಿಯೆಯಾಗಿ ಬಂದಿರುವುದಲ್ಲ. 'ವಸುಧೈವ ಕುಟುಂಬಕಂ' ಎಂಬ ಸಾಂಸ್ಕೃತಿಕ ಅಭಿವ್ಯಕ್ತಿಯಾಗಿಯೂ ಬಂದಿರುವುದಿಲ್ಲ, ಬದಲು ಪ್ರಸ್ತುತ ಜಾಗತೀಕರಣದ ಹಿಂದೆ ಆ್ಯಡಂ ಸ್ಮಿತ್ ಅವರ ಸ್ವಹಿತಾಸಕ್ತಿ ಪರಿಕಲ್ಪನೆಯ ಸಿದ್ಧಾಂತವೊಂದಿದೆ. ಅದಕ್ಕೆ ಹಲವಾರು ಕವಲುಗಳ ಸೇರ್ಪಡೆಯಾಗಿದೆ ಎಂಬುದು ಬೇರೆ ಮಾತು. ಆದರೂ ಮೂಲತಃ ಅದು ಸ್ಮಿತ್ ಸಿದ್ಧಾಂತದ ಆಶ್ರಯದಲ್ಲೇ ಬೆಳೆದಿರುವಂಥದು. ಅಂಥಲ್ಲಿ ಸಿದ್ಧಾಂತಕ್ಕೆ ಅತೀತವಾದ ಶುದ್ಧ ಸಾಹಿತ್ಯದ ಮುಖೇನ ಹುಡುಕುವ ಪರಿಹಾರ ಎಷ್ಟರಮಟ್ಟಿಗೆ ಸಫಲವಾದೀತು ಎನ್ನುವುದು ಮುಖ್ಯ ಸಂಗತಿ. ಅದಕ್ಕಾಗಿ ಸೃಜನಶೀಲ ಸಾಹಿತಿ ಕೂಡ ಪ್ರತಿಸಿದ್ಧಾಂತವನ್ನು ಆಶ್ರಯಿಸಲೇಬೇಕಾಗುತ್ತದೆ. ಅನಂತಮೂರ್ತಿಯವರೂ ಆ ಕೆಲಸ ಮಾಡಿದ್ದಾರೆ. ಮೂಲತಃ ಅವರು ಸೋಷಿಯಲಿಸ್ಟ್. ಆದರೆ 'ದಿವ್ಯ'ದಲ್ಲಿನ ಸ್ಥಿತಿಗತಿಗಳು ಸಂಪ್ರದಾಯಮುಖಿಯಾಗಿ ಅಲ್ಲಿ ಅವರ ಸೋಷಿಯಲಿಸ್ಟ್ ನಿಲುವುಗಳೇ ಕಾಣಿಸುತ್ತಿಲ್ಲ ಎನ್ನುವ ವಿಮರ್ಶೆ ಬಂದಿದೆ. ಆದರೆ ಅಲ್ಲಿಯೂ ಸೋಷಿಯಲಿಸಂ ಇದೆ ಎಂಬುದನ್ನು ಗಮನಿಸಬಹುದು. ಆದರದು ಆಧುನಿಕ ಸೋಷಿಯಲಿಸಂ ಆಗಿರದೆ ಟ್ರೆಡಿಷನಲ್ ಸೋಷಿಯಲಿಸಂ ಆಗಿದೆ. ವೇದಕಾಲೀನ ಸ್ಥಿತಿಯ ಸಾಮುದಾಯಿಕ ಜೀವನ ಪದ್ಧತಿ ಟ್ರೆಡಿಷನಲ್

ಅರವಿಂದ ಚೊಕ್ಕಾಡಿ

ಸೋಷಿಯಲಿಸಂ ಅಲ್ಲದೆ ಬೇರೇನಲ್ಲ ವ್ಯಕ್ತಿ ಸ್ವಾತಂತ್ರ್ಯಕ್ಕೆ ಈ ದೇಶದ ಪಾರಂಪರಿಕ ವ್ಯವಸ್ಥೆ ಎಂದೂ ಮಾನ್ಯತೆ ಕೊಟ್ಟಿಲ್ಲ. ಅನಂತಮೂರ್ತಿಯವರ ಸೋಲು ಸಂಭವಿಸುವುದೇ ಇಲ್ಲಿ. 'ದಿವ್ಯ'ದ ಅಂತಿಮ ಕ್ಷಣದಲ್ಲಿ ದಲಿತ ದುರುಗನನ್ನು ಹತ್ಯೆ ಮಾಡಿದ ಈ ಸಾಂಪ್ರದಾಯಿಕ ವ್ಯವಸ್ಥೆ ಸರಿಯೇ ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಉತ್ತರಿಸಬಲ್ಲ ಸಮರ್ಥ ಪಾತ್ರ ಕೃತಿಯಲ್ಲಿ ಇಲ್ಲ. ಬಹುಶಃ ಉದ್ದೇಶಪೂರ್ವಕವಾಗಿಯೇ ಅನಂತಮೂರ್ತಿ ಘನಶ್ಯಾಮನ ಪಾತ್ರವನ್ನು ಕೃತಿಯಲ್ಲಿ ದುರ್ಬಲಗೊಳಿಸಿದ್ದಾರೇನೋ ಅಂತ ಅನಿಸುತ್ತದೆ. ಅದರಿಂದಾಗಿ ಪಾತ್ರಮುಖೇನ ಉತ್ತರಿಸಲಾಗದೆ ಚಡಪಡಿಸುವ ಅನಂತಮೂರ್ತಿಯವರು ಪಾತ್ರವನ್ನು ಹಿಂದಿಕ್ಕಿ ತಾವೇ ಮುಂದೆ ಬಂದು 'ಅಮೆರಿಕ ಅಣ್ವಸ್ತ್ರ ಆಸ್ಫೋಟಿಸಿದ್ದು ಸರಿಯಾ ?' ಅಂತ ಪ್ರಶ್ನಿಸುತ್ತಾರೆ. ಅದನ್ನು ಸರಿಯೆಂದು ಬುದ್ಧಿ ಇರುವ ಯಾರೂ ಹೇಳುವುದಿಲ್ಲ. ಆದರೆ ಅಮೆರಿಕ ಜಗತ್ತನ್ನು ವಿನಾಶದ ಅಂಚಿಗೆ ತಂದಿದೆ ಎಂಬ ಮಾತ್ರಕ್ಕೆ ಈ ದೇಶದಲ್ಲಿ ನಡೆದ ದಲಿತ ದೌರ್ಜನ್ಯ ಸರಿ ಅಂತ ಅನಿಸುವುದಿಲ್ಲ. ಪ್ರಶ್ನೆಗೆ ಪ್ರಶ್ನೆ ಎಂದೂ ಉತ್ತರವಾಗುವುದಿಲ್ಲ ಎಂಬುದನ್ನು ಗಮನಿಸದ ಅನಂತಮೂರ್ತಿ ಪ್ರಶ್ನೆಗೆ ಪ್ರಶ್ನೆ ಎತ್ತಿ ಬಾಯಿ ಮುಚ್ಚಿಸುವ ಕೆಲಸ ಮಾಡುತ್ತಾರೆಯೇ ಹೊರತು ಉತ್ತರಿಸುವುದಿಲ್ಲ. ಸಾಂಸ್ಕೃತಿಕ ನೆಲೆಗಟ್ಟಿನ ಪರ್ಯಾಯದ ಹುಡುಕಾಟದ ಫಲ ಇದು. ಅಂತಿಮವಾಗಿ ಅದು ಸಾಂಪ್ರದಾಯಿಕ ವ್ಯವಸ್ಥೆಯನ್ನು ಪುಷ್ಟೀಕರಿಸಿ ಜಾಗತೀಕರಣದ ದಾಳಿಯನ್ನು ಮುಗ್ಧವಾಗಿ ಸ್ವೀಕರಿಸುವಂತೆ ಮಾಡುತ್ತದೆ. ಉದಾಹರಣೆಯ ಮೂಲಕ ಹೇಳಿದರೆ ಈ ಅಂಶ ಸ್ಪಷ್ಟವಾದೀತು. ಇತ್ತೀಚೆಗೆ ಸರಕಾರದ ಹಲವಾರು ನಿರ್ಧಾರಗಳು, ಜಾಗತೀಕರಣದ ದಾಳಿ ಮುಂತಾದ ನಾನಾ ಕಾರಣಗಳಿಗಾಗಿ ರೈತರ ಆತ್ಮಹತ್ಯೆ ನಡೆದಿದೆ. ಅಸಹಾಯಕ ರೈತ ಇಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ ಹೊರತು ಜಾಗತಿಕ ಆರ್ಥಿಕ ಮುಗ್ಗಟ್ಟಿನ ಸಂದರ್ಭದಲ್ಲಿ ಅಮೆರಿಕನ್ ರೈತರು ಮಾಡಿದಂತೆ ದ್ವಿತೀಯ ಮತ್ತು ತೃತೀಯ ರಂಗಗಳಿಗೆ ನುಗ್ಗಿ ಅಲ್ಲಿ ಆರ್ಥಿಕ ಅಧ್ವಾನಗಳನ್ನು ಸೃಷ್ಟಿಸುವ ಮುಖೇನ ಪ್ರತಿಭಟನೆ ಒಡ್ಡಿಲ್ಲ. ಯಾಕೆಂದರೆ ಈ ದೇಶದ ರೈತರಿಗೆ ಇಲ್ಲಿ ಸಿಗದ ಸುಖವನ್ನು 'ಪರ'ದಲ್ಲಿ ಅರಸುವ ನಂಬಿಕೆ ಇದೆ. ಭೂಮಿಯೊಂದಿಗೆ ಭಾವನಾತ್ಮಕ ಸಂಬಂಧವಿದೆ. ಇದು ಸಂಸ್ಕೃತಿಯೋ ಸಂಪ್ರದಾಯವೋ ಬೇರೆ ಮಾತು. ಆದರೆ ಈ ನಂಬಿಕೆಯಿಂದಾಗಿ ಅವರು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆಯೇ ಹೊರತು ಭೂಮಿಯನ್ನು ವಿಕ್ರಯಿಸುವುದಿಲ್ಲ. ಎಲ್ಲಿಯತನಕ ಈ ದೇಶದ ಪ್ರಧಾನ ಆರ್ಥಿಕ ಮೂಲವಾದ ಕೃಷಿರಂಗವನ್ನು ಜಾಗತಿಕ ಬಂಡವಾಳಶಾಹಿಗಳು ಹಿಡಿಯಲು ಅಸಮರ್ಥರಾಗುತ್ತಾರೋ ಅಲ್ಲಿಯ ತನಕ ಜಾಗತೀಕರಣವನ್ನು ಎದುರಿಸುವ ಶಕ್ತಿ ದೇಶಕ್ಕೆ ಇರುತ್ತದೆ. ಭೂ ಒಡೆತನವನ್ನು ಜಾಗತಿಕ ಬಂಡವಾಳಶಾಹಿಗಳು ಪಡೆಯುವ ತನಕ ದೇಶದ ಆರ್ಥಿಕ ವ್ಯವಸ್ಥೆಯನ್ನು ತಮ್ಮ ಮುಷ್ಟಿಯೊಳಗಿಟ್ಟುಕೊಳ್ಳಲು ಅವರಿಂದ ಸಾಧ್ಯವಿಲ್ಲ. ದೇಶದ ಪಾರಂಪರಿಕ ನಂಬಿಕೆ ದೇಶದ ಹಿತವನ್ನು ಕಾಯುತ್ತಲೇ ಇರುವುದು ಹೀಗೆ. ಇಲ್ಲಿಯ ತನಕ ಅನಂತಮೂರ್ತಿಯವರ ಹುಡುಕಾಟ ಯಶಪ್ರದವಾಗುತ್ತದೆ. ಆದರೆ ಆತ್ಮಹತ್ಯೆ ಮಾಡಿಕೊಳ್ಳುವ ರೈತರ ಜೀವಕ್ಕೆ ಬೆಲೆ ಇದೆಯಲ್ಲವೇ ? ಅವರ ಪ್ರಾಣ ರಕ್ಷಣೆ ಆಗಬೇಕಾದರೆ ತಮ್ಮ ನೋವುಗಳ ಪರಿಹಾರಕ್ಕಾಗಿ ಅವರು ಕ್ರಾಂತಿಗೆ ಸಿದ್ಧರಾಗುವ ವಾತಾವರಣ ನಿರ್ಮಾಣವಾಗಬೇಕು. ಅದಾಗಬೇಕಾದರೆ ಅವರು ತಮ್ಮ ಪಾರಂಪರಿಕ ನಂಬಿಕೆಗಳಿಂದ ಕಳಚಿಕೊಳ್ಳಬೇಕು. ಆ ಕೆಲಸವನ್ನು ಅನಂತಮೂರ್ತಿಯವರ ಹುಡುಕಾಟ ಮಾಡುವುದಿಲ್ಲ. ಈ ದೇಶದ ಟ್ರೆಡಿಷನಲ್ ಸೋಷಿಯಲಿಸಂ ಸದಾಕಾಲವೂ ದುರ್ಬಲ ವರ್ಗದ ಮುಗ್ಧತೆಯನ್ನು ದುರುಪಯೋಗಪಡಿಸಿಕೊಂಡು ತನ್ನ ಬಂಡವಾಳಶಾಹಿ ಹಿತವನ್ನು ರಕ್ಷಿಸಿಕೊಂಡು ಬಂದಿದೆ. ಅನಂತಮೂರ್ತಿಯವರ ಸಾಂಸ್ಕೃತಿಕ ಹುಡುಕಾಟದ ಉದ್ದೇಶ ಘನತೆವೆತ್ತದ್ದೇ ಇರಬಹುದು; ಆದರೆ ಫಲ ಮಾತ್ರ ಇದೇ ಅಲ್ಲದೆ ಬೇರೇನಲ್ಲ.

ಈ ರೀತಿಯ ಸಾಂಸ್ಕೃತಿಕ ಪರ್ಯಾಯದ ಹುಡುಕಾಟದ ಔಚಿತ್ಯವೇನು ಎನ್ನುವ ಮುಖ್ಯ ಪ್ರಶ್ನೆಯೊಂದನ್ನು ಎತ್ತಿಕೊಳ್ಳಬೇಕಾಗುತ್ತದೆ. ಪ್ರಸ್ತುತ ಜಾಗತೀಕರಣವು ಆರ್ಥಿಕ ಸಿದ್ಧಾಂತವಾಗಿ ಬಂದಿರುವಾಗ ಅದನ್ನು ಎದುರಿಸಲು ಆರ್ಥಿಕ ಪ್ರತಿತಂತ್ರ ರೂಪಿಸಬೇಕು ಎಂಬುದು ಸುಲಭವಾಗಿ ಅರ್ಥವಾಗುವ ಸಂಗತಿ. ಅಂಥಲ್ಲಿ ಸಾಂಸ್ಕೃತಿಕ ನೆಲೆಯ ಹುಡುಕಾಟಕ್ಕೆ ಬೇರೆ ಬೇರೆ ರೀತಿಯ ಕಾರಣಗಳನ್ನು ಗುರುತಿಸಬಹುದು.

ಮೊದಲನೆಯದಾಗಿ ಈ ದೇಶದ ಸಾಂಸ್ಕೃತಿಕ ಲೋಕ ಗಾಂಧಿಯನ್ ಥಿಂಕಿಂಗ್‌ನ ಪ್ರಭಾವದಲ್ಲಿದೆ. ಗಾಂಧಿಯನ್ ಥಿಂಕಿಂಗ್ ಮಹತ್ವಪೂರ್ಣವಾದುದು ಎನ್ನುವಲ್ಲಿ ಎರಡನೆ ಮಾತು ಇಲ್ಲ. ಆದರೆ ಅದರಲ್ಲೂ ದೋಷಗಳಿವೆ. ಮುಖ್ಯವಾಗಿ ಇಕಾನಮಿಯ ಬಗ್ಗೆ ಮಾತನಾಡುವಾಗ ಅವರು ಭೂಮಾಲೀಕತ್ವವನ್ನು ನಿರಾಕರಿಸಿದ್ದಿಲ್ಲ. ಬದಲು ಧರ್ಮದರ್ಶಿ ಸೂತ್ರವೆಂಬ ನೈತಿಕತೆಯ ಅತಿರೇಕದ ಹಂತದಲ್ಲಿ ಉತ್ತರ ಕೊಟ್ಟಿದ್ದಾರೆ. ಹಾಗೆಯೇ ಅವರು ದಲಿತರ ಏಳ್ಗೆಗಾಗಿ ದೇವಸ್ಥಾನಕ್ಕೆ ದಲಿತರಿಗೂ ಪ್ರವೇಶ ಕೊಡಿ ಎಂದರೇ ಹೊರತು ದೇವಸ್ಥಾನ ಎನ್ನುವ ವ್ಯವಸ್ಥೆಯನ್ನು ತಳ್ಳಿಹಾಕಿಲ್ಲ. ಅರ್ಥಾತ್ ಇರುವ ವ್ಯವಸ್ಥೆಗೆ ಸುಧಾರಣೆ ತರುವ ಕ್ರಮ ಸೂಚಿಸಿದರೇ ಹೊರತು ವ್ಯವಸ್ಥೆಯನ್ನು ಪಲ್ಲಟಗೊಳಿಸಿ ಹೊಸ ವ್ಯವಸ್ಥೆಯ ನಿರ್ಮಾಣದ ಸೂಚನೆ ಅವರಲ್ಲಿ ಇಲ್ಲ. ಬಹುಶಃ ಶೋಷಿತ ಜನರ ಬಗ್ಗೆ ಪ್ರಾಮಾಣಿಕ ಕಾಳಜಿ ಇದ್ದರೂ ಅವರು ಕೇವಲ ಥಿಂಕರ್ ಆಗಿರದೆ ರಾಜಕೀಯ ನಾಯಕರೂ ಆಗಿದ್ದುದು ಇದಕ್ಕೆ ಕಾರಣ. ಅದರಿಂದಾಗಿ ಅವರ ಕಾಲಘಟ್ಟದ ರಾಜಕೀಯ ಅವಶ್ಯಕತೆಗಳನ್ನು ಭರಿಸಿಕೊಳ್ಳುವುದಕ್ಕಾಗಿ ಅವರಿಗಿದು ಅನಿವಾರ್ಯವಿದ್ದಿರಬಹುದು. ಅದರಿಂದಾಗಿ ದುರ್ಬಲ ಜನರ ಮುಗ್ಧತೆಯನ್ನು ಕಳಚುವ ಪ್ರಯತ್ನ ಗಾಂಧಿಯನ್ ಥಿಂಕಿಂಗ್‌ನಲ್ಲಿದೆಯೇ ಹೊರತು ಆ ಥಿಂಕಿಂಗ್ ಬಲಯುತವಾಗಿ ಬಂದಿಲ್ಲ. ಅವರ ಮೂಲ ಶಿಕ್ಷಣದ ಪರಿಕಲ್ಪನೆಯಲ್ಲಿ ಈ ಅಂಶ ಕೊಂಚ ಕಾಣಿಸುತ್ತದಾದರೂ ವೈಚಾರಿಕ ಅವಶ್ಯಕತೆಯನ್ನು ಪೂರೈಸುವಲ್ಲಿ ಅದು ಸಾಕಷ್ಟು ಬಲಯುತವಾಗಿಲ್ಲ. ಅಂಥಲ್ಲಿ ಗಾಂಧಿಯನ್ ಥಿಂಕಿಂಗ್‌ನಲ್ಲಿರುವ ಯಥಾಸ್ಥಿತಿವಾದವನ್ನು ನಿರಾಕರಿಸಿ ಅವರ ಪರಿಕಲ್ಪನೆಗಳನ್ನು ಬಲಗೊಳಿಸುವ ಯೋಚನೆಗಳ ಅಗತ್ಯವಿದೆ. ನೇರವಾಗಿ ಅನಂತಮೂರ್ತಿ ಕುರಿತು ಹೇಳುವುದಾದರೆ ಗಾಂಧಿಯವರ ಮೂಲಶಿಕ್ಷಣ ಪರಿಕಲ್ಪನೆಯನ್ನು ಬಲಗೊಳಿಸುವುದು ಹಾಗಿರಲಿ; ಮೂಲಶಿಕ್ಷಣದ ಪರಿಕಲ್ಪನೆಯನ್ನೇ ಅವರು ತಮ್ಮ ಹುಡುಕಾಟದಲ್ಲಿ ಬಳಸಿ ಕೊಳ್ಳುವುದಿಲ್ಲ. ಗಾಂಧಿಯನ್ ಥಿಂಕಿಂಗ್‌ನ ದಟ್ಟ ಪ್ರಭಾವದಲ್ಲಿರುವ ಅಮರ್ತ್ಯ ಸೇನ್ ಈ ಕೆಲಸವನ್ನು ಒಂದಷ್ಟು ನಿರ್ವಹಿಸುತ್ತಾರಾದರೂ ವ್ಯವಸ್ಥೆಯನ್ನು ಹೊಸ ಮಜಲಿಗೆ ತಲುಪಿಸುವ ಮಟ್ಟಿನ ಬಲಯುತವಾದ ಚಿಂತನೆಯೇನೂ ಸೇನ್‌ರದಲ್ಲ. ಹಾಗೆ ನೋಡಿದರೆ ಸೇನ್‌ಗಿಂತ ಗುನ್ನಾರ್ ಮಿರ್‌ಡಾಲ್ ಅವರ ಚಿಂತನೆಗಳಿಗೆ ಹೆಚ್ಚು ಮಹತ್ವವಿದೆ. ಅವರ 'ಏಷ್ಯನ್ ಡ್ರಾಮಾ' ಕೃತಿಯಲ್ಲಿ ಬಹಳ ಸೂಕ್ಷ್ಮವಾಗಿ ಗಾಂಧಿಯನ್ ಥಿಂಕಿಂಗ್‌ನ ಹೊಳಹು ಇದೆ. ಆದರೆ ಅದು ಮಿರ್‌ಡಾಲ್‌ರ ಸ್ವತಂತ್ರ ಅಸ್ತಿತ್ವದಿಂದ ಪ್ರಕಾಶಿಸುತ್ತದೆ. ಉದಾಹರಣೆಗೆ ಹಸಿರು ಕ್ರಾಂತಿಯ ಬಗ್ಗೆ ಹೇಳುವ ಮಿರ್‌ಡಾಲ್ ಸಾಮಾಜಿಕ ಅಸಮಾನತೆಯನ್ನು ನೀಗಿಸದೆ ಮಾಡುವ ಹಸಿರು ಕ್ರಾಂತಿಯಿಂದ 'ಉಳ್ಳ' ವರ್ಗ ಬಲವಾಗುತ್ತಾ 'ದುರ್ಬಲ' ವರ್ಗ ದುರ್ಬಲವಾಗುತ್ತಾ ಹೋಗುತ್ತದೆ ಎನ್ನುತ್ತಾರೆ. ಸಾಮಾಜಿಕ ಸಂಸ್ಥೆಗಳ ಸುಧಾರಣೆಗೆ ಆದ್ಯತೆ ಕೊಡುತ್ತಾರೆ. ಇಲ್ಲಿ ಗಾಂಧಿಯನ್ ಸ್ವರಾಜ್ಯದ ಪರಿಕಲ್ಪನೆ ಇದ್ದೂ ಇಲ್ಲದಂತೆ ಇದೆ. ಆದರೆ ದುರ್ಬಲ ವರ್ಗದ ಬದುಕಿನ ಒಳ ಪ್ರವೇಶಿಸಿ ಗ್ರಹಿಸಬಲ್ಲ ಮಿರ್‌ಡಾಲ್ ಗಾಂಧಿಗಿಂತ ಭಿನ್ನವಾಗಿಯೂ ನಿಲ್ಲುತ್ತಾರೆ. ಸೇನ್‌ಗೆ ಇದು ಸಾಧ್ಯವಾಗುವುದಿಲ್ಲ. ಯಾಕೆಂದರೆ ಸೇನ್‌ರಲ್ಲಿ ಅದ್ಭುತ ಪಾಂಡಿತ್ಯವಿದೆ. ಆದರೆ ಸೂಕ್ಷ್ಮಜ್ಞತೆಯ ಕೊರತೆ ಇದೆ. ಮಿರ್‌ಡಾಲ್‌ರ ಪಾಂಡಿತ್ಯ ಅಮುಖ್ಯ; ಆದರೆ ಅವರಲ್ಲಿ ಸೂಕ್ಷ್ಮಜ್ಞತೆ ಇದೆ. ಈ ಅರ್ಥಶಾಸ್ತ್ರೀಯ ಸೂಕ್ಷ್ಮಜ್ಞತೆಗಳನ್ನು ಕಂಡುಕೊಳ್ಳದೆ ಜಾಗತೀಕರಣಕ್ಕೆ ಹುಡುಕುವ ಸಾಂಸ್ಕೃತಿಕ ಪರ್ಯಾಯ ಯಶಸ್ವಿಯಾಗಲು ಕಷ್ಟವಿದೆ.

■

ಈ ದೇಶದ ಸಾಂಸ್ಕೃತಿಕ ಲೋಕ ಗಾಂಧಿಯನ್ ಥಿಂಕಿಂಗ್‌ನ ಪ್ರಭಾವದಲ್ಲಿದೆ. ಗಾಂಧಿಯನ್ ಥಿಂಕಿಂಗ್ ಮಹತ್ವಪೂರ್ಣವಾದುದು ಎನ್ನುವಲ್ಲಿ ಎರಡನೆ ಮಾತು ಇಲ್ಲ. ಆದರೆ ಅದರಲ್ಲೂ ದೋಷಗಳಿವೆ.

■

ಎರಡನೆಯದಾಗಿ, ಜಾಗತಿಕ ಮಟ್ಟದಲ್ಲಿ ಮೊದಲ ಮತ್ತು ಎರಡನೆ ಮಹಾಯುದ್ಧಗಳು ಆರ್ಥಿಕ ದುರವಸ್ಥೆಯನ್ನು ಸೃಷ್ಟಿಸಿದವು. ಆ ಹಂತದಲ್ಲಿ ಸಾಂಸ್ಕೃತಿಕ ಲೋಕ ಕೂಡ ಸಾಂಪತ್ತಿಕ ಬಳಲಿಕೆಯನ್ನು ಅನುಭವಿಸಿತು. ಮೇಲುಮೇಲಿಗೆ ಇದನ್ನು ಗುರುತಿಸಬಹುದು. ಮೂರ್‍ನಾಲ್ಕು ದಶಕಗಳ ಹಿಂದಿನ ಸಾಹಿತಿಗಳು ದಾರಿದ್ರ್ಯದ ಹಿನ್ನೆಲೆಯಲ್ಲಿ ಬಳಲುತ್ತಿದ್ದರು. ಆದರೆ ಈಗಿನ ಸ್ಥಿತಿ ಹಾಗಲ್ಲ. ಶ್ರೀಮಂತರಲ್ಲದೆ ಹೋದರೂ ಸಾಹಿತ್ಯ ಲೋಕದ ಜನರು ಒಪ್ಪತ್ತಿನ ಊಟಕ್ಕೆ, ತಕ್ಕಮಟ್ಟಿನ ಒಳ್ಳೆಯ ಬದುಕಿಗೆ ತೆರೆದುಕೊಂಡಿದ್ದಾರೆ. ಸಾಂಪತ್ತಿಕ ಅಪೇಕ್ಷೆ ಒಂದುಮಟ್ಟಿಗೆ ಪೂರೈಸಲ್ಪಟ್ಟ ನಂತರ ಸಹಜವಾಗಿ ಬೇರೊಂದನ್ನು ನೋಡುವ ಪರಿಪಾಠ ಬೆಳೆಯುತ್ತದೆ. ಸಾಂಸ್ಕೃತಿಕ ಚಿಂತನೆಯೊಂದೇ ಬೌದ್ಧಿಕವಲಯದಲ್ಲಿ ತಾಂಡವವಾಡುತ್ತಿರುವುದಕ್ಕೆ ಇದೂ ಕಾರಣ. ಸೋವಿಯತ್ ರಷ್ಯಾ ಅವನತಿಯಾದ ಬಳಿಕ ವಿಶ್ವದ ಬಂಡವಾಳಶಾಹಿ ಶಕ್ತಿಗಳು ಸಾಂಸ್ಕೃತಿಕ ಚಿಂತನೆಗೆ ಅತಿಯಾಗಿ ನೀರೆರೆಯುತ್ತಾ ಬಂದವು. ಯಾಕೆಂದರೆ ಅದರಿಂದ ಅವರಿಗೆ ಉಪಯೋಗವಿದೆ. ಇದರರ್ಥ ಸಮಗ್ರ ಜಗತ್ತು ದಾರಿದ್ರ್ಯದಿಂದ ಮುಕ್ತವಾಗಿದೆ ಎಂದಲ್ಲ. ಆದರೆ ದಾರಿದ್ರ್ಯದಲ್ಲಿರುವವರಿಗೆ ಧ್ವನಿ ಇಲ್ಲವಾಗಿದೆ. ಇಂಥಲ್ಲಿ

ಒಂದು ಕ್ರೇಜ್ ಆಗಿ ಬೆಳೆಯುತ್ತಿರುವ ಸಾಂಸ್ಕೃತಿಕ ಚಿಂತನೆ ಆರ್ಥಿಕ ಅನಿವಾರ್ಯತೆಗೂ ಸಹ ಸಾಂಸ್ಕೃತಿಕ ರಂಗದಲ್ಲಿ ಉತ್ತರ ಹುಡುಕುವಂತೆ ಮಾಡುತ್ತಿದೆ. ಅದು ಪರೋಕ್ಷವಾಗಿ ಮತೀಯವಾದಿ ಶಕ್ತಿಗಳಿಗೆ ಬೌದ್ಧಿಕ ಬೆಂಬಲ ಕೊಟ್ಟುಬಿಡುತ್ತದೆ. ಸೀರೆ, ಪರ್ದಾ, ಕುಂಕುಮ ಧರಿಸಲೇಬೇಕು ಎನ್ನುವ ಆದೇಶಗಳಿಗೆ ಅವುಗಳಲ್ಲಿಯೂ ಜಾಗತೀಕರಣಕ್ಕೆ ಪರ್ಯಾಯ ಹುಡುಕಬಲ್ಲ ಅದ್ಭುತ ಸಾಹಿತಿಗಳು ಪರೋಕ್ಷ ಬೆಂಬಲ ಕೊಡುತ್ತಲೇ ಹೋಗುತ್ತಾರೆ.

ಸಿದ್ಧಾಂತರಹಿತವಾದ ಪರ್ಯಾಯದ ಹುಡುಕಾಟವಾಗಿ ಡಾ|| ನಾ. ಮೊಗಸಾಲೆಯವರ 'ಅರ್ಥ'ವನ್ನು ಹೇಳಬಹುದು. ಇದರಲ್ಲಿ ಟ್ರೆಡಿಷನಲ್ ಸೋಷಿಯಲಿಸಂ ಇದೆ, ಮಾಡರ್ನ್ ಸೋಷಿಯಲಿಸಂ ಇದೆ, ಕ್ಯಾಪಿಟಲಿಸಂ ಇದೆ, ಇಂಡಿವಿಜ್ಯುವಲಿಸಂ ಇದೆ. ಎಲ್ಲವೂ ಇರುವುದರಿಂದಾಗಿ ಯಾವ ನೆಲೆಯಲ್ಲಿ ಪರ್ಯಾಯದ ಹುಡುಕಾಟ ನಡೆದಿದೆ ಎನ್ನುವುದೇ ಅಸ್ಪಷ್ಟವಾಗಿದೆ. ಆದರೆ ಕೃತಿಯ ಉದ್ದಗಲಕ್ಕೂ, ''ಜಾಗತೀಕರಣದಿಂದ ಎಲ್ಲ ಹಾಳಾಗಿದೆ; ಅದಕ್ಕೆ ಏನಾದರೂ ಮಾಡಲೇಬೇಕು; ನಮ್ಮ ಸಾಂಸ್ಕೃತಿಕ ಮೂಲ ನೆಲೆಗೆ ಮರಳುವುದೇ ಅದಕ್ಕಿರುವ ಪರಿಹಾರ'' ಎನ್ನುವ ಧ್ವನಿ ಮಾತ್ರ ಕಾಣಿಸುತ್ತದೆ.

ಹಾಗಂದರೆ ಜಾಗತೀಕರಣಕ್ಕೆ ಒಂದು ವೇಳೆ ಬೆಂಬಲವನ್ನು ಘೋಷಿಸಿದ್ದರೂ ಮೊಗಳ್ಳಿಯವರ ಚಿಂತನೆಗಳು ಹೆಚ್ಚು ಮುಖ್ಯವಾಗುತ್ತವೆ. ಯಾಕೆಂದರೆ ಆರ್ಥಿಕ ವಿಚಾರವೊಂದನ್ನು ಸ್ವೀಕರಿಸುವುದಕ್ಕೆ ಅವರು ಸಾಮಾಜಿಕ ಸಂದರ್ಭವನ್ನು ಆಧರಿಸಿದ್ದಾರೆ. ಸಾಮಾಜಿಕ ಸ್ಥಿತಿಗತಿಗಳು ಆರ್ಥಿಕತೆಯೊಂದಿಗೆ ನೇರವಾಗಿ ಲಿಂಕ್ ಹಾಕಿಕೊಳ್ಳುತ್ತವೆ. ಎರಡನೆಯದಾಗಿ ಜಾಗತೀಕರಣದ ಒಂದು ಸಿದ್ಧಾಂತಕ್ಕೆ ಮೊಗಳ್ಳಿಯವರ ಬಳಿ ಲೌಕಿಕವಾದಿಯೇ ಆಗಿರುವ 'ದಲಿತ ಚಿಂತನೆ' ಎನ್ನುವ ಸಿದ್ಧಾಂತವಿದೆ. ಅದರೊಂದಿಗೆ ದೌರ್ಜನ್ಯ ವಿರೋಧಿಯಾದ ಅವರ ನಿಲುವೂ ಇದೆ. ಆದರೆ ದುರ್ಬಲ ವರ್ಗಕ್ಕೆ ಸಮಸ್ಯೆಯಾಗಿರುವ ಜಾಗತೀಕರಣಕ್ಕೆ ಮುಖಾಮುಖಿಯಾಗಲು ಸೀಮಿತ ವ್ಯಾಪ್ತಿಯ ದಲಿತ ಚಿಂತನೆ ದುರ್ಬಲವಾಗಿ ಬಿಡುತ್ತದೆ. ಇಲ್ಲಿ ದಲಿತ ಚಿಂತನೆಯ ಮೂಲ ತಳಹದಿ ಸಾಮಾಜಿಕ ಸಂದರ್ಭವೇ ಹೊರತು ನೇರವಾಗಿ ಆರ್ಥಿಕ ಸಂದರ್ಭವಲ್ಲ. ದಲಿತ ಚಿಂತನೆ ಈ ದೇಶದ ಪ್ರಾರಬ್ಧಕ್ಕೆ ಒಂದು ತಾತ್ಕಾಲಿಕ ಅವಶ್ಯಕತೆ. ಆದರೆ ಜಾಗತೀಕರಣಕ್ಕೆ ಮುಖಾಮುಖಿಯಾಗುವಾಗ ಅದರಷ್ಟೇ ಬಲಾಢ್ಯವಾದ ಸಿದ್ಧಾಂತವೊಂದರ ಅಗತ್ಯವಿದೆ. ಸೃಜನಶೀಲ ಸಾಹಿತ್ಯ ಸಂದರ್ಭದಲ್ಲಿ ಹೆಚ್ಚು ತೊಂದರೆ ಕೊಡದ ಮೊಗಳ್ಳಿಯವರ ಮೇಲ್ಜಾತಿಯ ಅಸಹನೆ ವಿಚಾರ ಸಾಹಿತ್ಯದಲ್ಲಿ ತೊಂದರೆ ಕೊಡುತ್ತದೆ. ಆದಾಗ್ಯೂ ಆರ್ಥಿಕ ಸೂಕ್ಷ್ಮಜ್ಞತೆಯಿಂದ ಜಾಗತೀಕರಣವನ್ನು ನೋಡಿದಲ್ಲಿ, ಜಾತೀಯ ಅಸಹನೆಯನ್ನು ಬದಿಗಿರಿಸಿದಲ್ಲಿ ಜಾಗತೀಕರಣಕ್ಕೆ ಮುಖಾಮುಖಿಯಾಗಲು ಮೊಗಳ್ಳಿಯವರಲ್ಲಿ ಬೇಕಷ್ಟು ಸಾಧ್ಯತೆಗಳಿವೆ ಮತ್ತದು ಅನಂತಮೂರ್ತಿಯವರ ಸಾಧ್ಯತೆಗಿಂತ ಮುಖ್ಯವಾದುದು ಎನ್ನಲು ಪ್ರಸ್ತುತ ಕೃತಿ ಸಾಕ್ಷಿ ಒದಗಿಸುತ್ತದೆ. ಹಾಗಂತ ಇಲ್ಲಿ ಪ್ರಸ್ತಾಪಿಸಿರುವ ಅನಂತಮೂರ್ತಿ, ಮೊಗಸಾಲೆಯವರ ಕೃತಿಗಳು ನಿಷ್ಪ್ರಯೋಜಕವೆಂದಲ್ಲ. ಹಾಗೆಯೇ ಇಂತಹ ಹುಡುಕಾಟಕ್ಕೆ ತೊಡಗಿರುವ ಸಾಹಿತಿಗಳೂ ಸಹ. ಅವರ ಚಿಂತನೆಗಳಲ್ಲಿ ಕೊರತೆ ಇರಬಹುದು. ಆದರೆ ಜಾಗತೀಕರಣಕ್ಕೆ ಪರ್ಯಾಯ ಹುಡುಕುವ ಅವರ ಪ್ರಾಮಾಣಿಕ ಪ್ರಯತ್ನವನ್ನು ಗೌರವಿಸಲೇಬೇಕಾಗುತ್ತದೆ. ಈ ಸಂದರ್ಭದಲ್ಲಿ ಇನ್ನೊಂದು ಮಾತು ಹೇಳಬೇಕಾಗುತ್ತದೆ. ಸೃಜನಶೀಲ ಶುದ್ಧ ಸಾಹಿತ್ಯ ಸಿದ್ಧಾಂತಾತೀತ ಎನ್ನುವ ಅಭಿಪ್ರಾಯವಿರುವುದರಿಂದ ಸೃಜನಶೀಲ ಸಾಹಿತ್ಯದಲ್ಲಿನ ಪರ್ಯಾಯದ ಹುಡುಕಾಟ ಹೀಗೇ ಇರಬೇಕು ಎನ್ನುವುದು ಸರಿಯಾದೀತೇ ಎನ್ನುವ ಪ್ರಶ್ನೆ ಇದೆ. ಶುದ್ಧ ಸಾಹಿತ್ಯವೆಂಬುದೇ ಭ್ರಮೆ ಎಂಬ ವಿಚಾರವೂ ಇದೆ. ಅದರ ಕುರಿತ ಚರ್ಚೆ ಇಲ್ಲಿ ಅಪ್ರಸ್ತುತ. ಆದರೆ ಯಾವ ಪ್ರಕಾರದ ಸಾಹಿತ್ಯದಲ್ಲೇ ಆದರೂ, ಜಾಗತೀಕರಣಕ್ಕೆ ಪರ್ಯಾಯದ ಹುಡುಕಾಟ ಎಂದ ಬಳಿಕ ಅಲ್ಲಿ ಸಾಮಾಜಿಕ ಹಿತಬದ್ಧತೆಯೂ, ಒಂದು ಸಿದ್ಧಾಂತವೂ ಇದೆಯೆಂದು ಒಪ್ಪಿಕೊಳ್ಳಲೇಬೇಕಾಗುತ್ತದೆ. ಹಾಗಿರುವಾಗ ಪರ್ಯಾಯದ ಹುಡುಕಾಟದ ಪರಿಣಾಮದ ಬಹುಮುಖೀ ಗ್ರಹಿಕೆಯೂ ಅಗತ್ಯವಾಗುತ್ತದೆ.

ಮುಖ್ಯವಾಗಿ ಆರ್ಥಿಕ ಸಮಸ್ಯೆಗೆ ಸಾಂಸ್ಕೃತಿಕ ಹುಡುಕಾಟದಲ್ಲಿ ಎದುರಾಗುವ ತೊಂದರೆಯೆಂದರೆ ಆರ್ಥಿಕ ಸಮಸ್ಯೆ ಬಹಿರ್ಮುಖಿಯಾದುದು. ಸಾಂಸ್ಕೃತಿಕ ಪರಿಕರಗಳೆಲ್ಲವೂ ಬಹಿರ್ಮುಖಿಯಾದುವುಗಳೇ. ಆದರೆ ಸಾಂಸ್ಕೃತಿಕ ನೆಲೆ ಅಂತರ್ಮುಖಿಯಾದುದು. ಭಾವನೆಗಳು, ಮನುಷ್ಯ ಸಂಬಂಧಗಳು, ಭಾಷಾ ಪ್ರೇಮ, ಕಲೆಯ ಆಸಕ್ತಿ ಇವೆಲ್ಲ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗುತ್ತಾ ಹೋಗುತ್ತವೆ. ಅಂಥಲ್ಲಿ ಅವನ್ನು ಏಕಸೂತ್ರಕ್ಕೆ ಒಳಪಡಿಸುವುದು ಅಸಾಧ್ಯ. ಅಂತಹ ಪ್ರಯತ್ನ, ಮತೀಯವಾದಿಗಳು ಮಾಡುವಂತೆ ಸಾಂಸ್ಕೃತಿಕ ಪರಿಕರಗಳ ಹೇರಿಕೆಯಾಗುತ್ತದೆ. ಆದ್ದರಿಂದಲೇ ಬಹಿರ್ಮುಖಿ ಸಮಸ್ಯೆಗೆ ಬಹಿರ್ಮುಖಿ ಸಾಧ್ಯತೆಯನ್ನೇ ಪರ್ಯಾಯವಾಗಿ ಒಡ್ಡಬೇಕಾಗುತ್ತದೆ. ಅಂಥಲ್ಲಿ ಸಮಗ್ರ ಹಿತದೃಷ್ಟಿಯಲ್ಲಿ ಆರ್ಥಿಕ ತಳಹದಿಯ ಮೇಲೆ ಆರ್ಥಿಕ ಮತ್ತು ಸಾಂಸ್ಕೃತಿಕ ಪರ್ಯಾಯಗಳನ್ನು ಹುಡುಕಬೇಕೇ ವಿನಾ ಸಾಂಸ್ಕೃತಿಕ ತಳಹದಿಯಲ್ಲಿ ಆರ್ಥಿಕ ಪರಿಹಾರಗಳನ್ನು ಹುಡುಕುವುದಲ್ಲ. ವೈವಿಧ್ಯಪೂರ್ಣ ಸಾಂಸ್ಕೃತಿಕ ವ್ಯವಸ್ಥೆಯಿರುವ ಭಾರತದಲ್ಲಿ ಸಾಂಸ್ಕೃತಿಕ ಪರ್ಯಾಯಗಳ ಹುಡುಕಾಟ ಗೋಜಲುಗೋಜಲಾಗಿ ಅದು ವ್ಯವಸ್ಥಿತ ಪ್ರತಿಶಕ್ತಿ ಆಗದಂತೆ ಮಾಡಿಬಿಡುತ್ತದೆ. ಈಗ ಆಗಿರುವುದೂ ಅದೇ. ಆರ್ಥಿಕ ಪರ್ಯಾಯಕ್ಕೆ ಈ ತೊಡಕಿಲ್ಲ. ಯಾಕೆಂದರೆ ಆರ್ಥಿಕ ಅಗತ್ಯ ಎಲ್ಲ ವ್ಯಕ್ತಿಗಳಿಗೂ, ಎಲ್ಲಾ ದೇಶಕ್ಕೂ ಒಂದೇ. ಅಂತಹ ಪ್ರತಿಶಕ್ತಿಯ ಸಾಧ್ಯತೆ ಇರುವುದು ಮಾರ್ಕ್ಸ್‌ವಾದದಲ್ಲಿ. ನಿಜ, ಮಾರ್ಕ್ಸ್ ಬದುಕಿದ್ದ ಕಾಲಕ್ಕೂ ಈ ಕಾಲಕ್ಕೂ ಹಲವಾರು ಭಿನ್ನತೆಗಳಿವೆ. ಅಂಥಲ್ಲಿ ಮಾರ್ಕ್ಸ್‌ವಾದಿ ನಿಲುವುಗಳು ಸ್ವರೂಪಾತ್ಮಕ ಬದಲಾವಣೆ ತಾಳಬೇಕಾಗುತ್ತದೆ. ಇದರಿಂದ ವೈವಿಧ್ಯಪೂರ್ಣ ಸಂಸ್ಕೃತಿ ನಶಿಸುತ್ತದೆಂದೇನೂ ಭಾವಿಸಬೇಕಾಗಿಲ್ಲ. ಮನುಷ್ಯನ ಅಂತರಂಗದ ಸ್ವಾತಂತ್ರ್ಯ ಸಾಂಸ್ಕೃತಿಕ ವಿಚಾರಗಳನ್ನು ಉಳಿಸಿಕೊಡುತ್ತದೆ. ಹಾಗೆಯೇ ಸ್ಮಾರಕವಾಗಿಯೂ ಅದು ಉಳಿಯುತ್ತದೆ. ಉದಾಹರಣೆ ಹೇಳುವುದಾದರೆ ಫ್ರಾನ್ಸ್‌ನಲ್ಲಿ ಸ್ತ್ರೀಯರ ಪಾವಿತ್ರ್ಯ ಪರೀಕ್ಷೆಯ ಮಂಜುಗಡ್ಡೆ ಕೊಳವಿದೆ. ಒಂದು ಕಾಲಕ್ಕೆ ಪಾವಿತ್ರ್ಯ ಪರೀಕ್ಷೆ ನೆಪದಲ್ಲಿ ಅಲ್ಲಿ ಸ್ತ್ರೀ ಶೋಷಣೆ ನಡೆಯುತ್ತಿತ್ತು – ಈಗ ಆ ಕೊಳದಲ್ಲಿ ಪವಿತ್ರ ಪರೀಕ್ಷೆ ನಡೆಯುತ್ತಿಲ್ಲ. ಆದರೆ ಫ್ರಾನ್ಸ್ ದೇಶದ ಜನರು ಸ್ಮಾರಕವಾಗಿ ಆ ಕೊಳವನ್ನು ಈಗಲೂ ರಕ್ಷಿಸಿಟ್ಟಿದ್ದಾರೆ. ಆ ಕೆಲಸವನ್ನು ನಾವೂ ಮಾಡಬಹುದು. ಇವತ್ತು ಮನುಸ್ಮೃತಿ ಒಂದು ಸತ್ತ ಕೃತಿ. ಸತ್ತಿಲ್ಲವಾದರೆ ಅದನ್ನು ಸಾಯಿಸಲೇಬೇಕು. ಹಾಗಂತ ಆ ಗ್ರಂಥವನ್ನು ಸುಡುವುದು ಎಂದರ್ಥವಲ್ಲ. ಅದನ್ನು ಈ ದೇಶದ ಚರಿತ್ರೆಯ ಬೆಳವಣಿಗೆಯ ಒಂದು ಭಾಗವಾಗಿ ರಕ್ಷಿಸಿಕೊಳ್ಳೋಣ. ಅದರಿಂದಲೂ ನಮಗೆ ಉಪಯೋಗವಾಗಿದೆ. ಒಂದು ವೇಳೆ ಮನು ಎನ್ನುವ ವ್ಯಕ್ತಿ ಅಂತಹ ಪುಸ್ತಕವನ್ನು ಬರೆದಿಡದೆ ಹೋಗಿದ್ದರೆ ಚರಿತ್ರೆಯಲ್ಲಿ ನಡೆದ ಶೋಷಣೆಯನ್ನು ಅರ್ಥಮಾಡಿಕೊಳ್ಳಲು ನಮಗೆ ಸಾಧ್ಯವಾಗುತ್ತಿರಲಿಲ್ಲ. ಸಂಸ್ಕೃತಿ ಉಳಿದುಕೊಳ್ಳುವ ಇನ್ನೊಂದು ಸಾಧ್ಯತೆಯೆಂದರೆ ಜಿಯಾಗ್ರಫಿ. ಉದಾಹರಣೆಗೆ ದಕ್ಷಿಣ ಕನ್ನಡದ ಜನರು ತೆಳು ಉಡುಪು ಧರಿಸುವುದಕ್ಕೆ ಅಲ್ಲಿನ ಬಿಸಿಲು ಕಾರಣವಿದೆ. ಕೊಡಗು-ಚಿಕ್ಕಮಗಳೂರು ಪ್ರದೇಶದ ಜನರು ಕೋಟು, ಸ್ವೆಟರು ಧರಿಸುವುದಕ್ಕೆ ಚಳಿಯ ಕಾರಣವಿದೆ. ಈ ರೀತಿ ಜಿಯಾಗ್ರಫಿ ಕೂಡ ಸಂಸ್ಕೃತಿಯನ್ನು ರಕ್ಷಿಸುತ್ತದೆ. ನಿಜ, ಬಹು ದೀರ್ಘಾವಧಿಯಲ್ಲಿ ಜಿಯಾಗ್ರಫಿಯಲ್ಲೂ ಬದಲಾವಣೆಯಾಗುತ್ತದೆ. ಅದಕ್ಕೆ ಲಕ್ಷೋಪಲಕ್ಷ ವರ್ಷಗಳು ಬೇಕಾಗುತ್ತವೆ. ಅದರ ಬಗ್ಗೆ ಸದ್ಯ ತಲೆಕೆಡಿಸಿಕೊಳ್ಳ ಬೇಕಾಗಿಲ್ಲ. ಇಷ್ಟೆಲ್ಲ ಆಗಿಯೂ ಕೆಲವೊಂದು ಸಾಂಸ್ಕೃತಿಕ ಅಂಶಗಳು ಕಳೆದುಹೋಗುತ್ತವೆಯಾದರೆ ಅವು ಕಾಲಮಾನ ಭರಿಸಿಕೊಳ್ಳಲಾಗದ ಸಾಂಸ್ಕೃತಿಕ ಅಂಶಗಳಾಗಿರುತ್ತವೆ. ಅಂಥವು ಕಳೆದುಹೋಗಲಿ ಬಿಡಿ. ಈ ದೇಶದ ಸಾಮಾಜಿಕ ಬೆಳವಣಿಗೆಯ ಪ್ರಾರಂಭದಲ್ಲಿ ಲೈಂಗಿಕ ಸ್ವೇಚ್ಛೆ ಇತ್ತು. ಅದು ನಮ್ಮ ಸಂಸ್ಕೃತಿ ಅಂತ ಈಗ ಅದನ್ನು ಅನುಸರಿಸಲು ಬರುವುದಿಲ್ಲ. ಮಹಾಭಾರತ ನಮ್ಮ ಸಾಂಸ್ಕೃತಿಕ ಕೃತಿ. ಅದರಲ್ಲಿ ಹೆಂಡತಿಯನ್ನು ಅಡವಿಟ್ಟು ಧರ್ಮರಾಯ ಜೂಜಾಡಿದ ಅಂತ ನಾವು ನಮ್ಮ ಹೆಂಡಿರನ್ನು ಅಡವಿಡಲು ಆಗುವುದಿಲ್ಲ. ಅದೇ ರೀತಿ ಕಾಲ ನಿರಾಕರಿಸುವ ಸಾಂಸ್ಕೃತಿಕ ಅಂಶಗಳು ಕಳೆದುಹೋದರೆ ವ್ಯಥೆ ಪಡಬೇಕಾಗಿಲ್ಲ. ಆದರೆ ಆರ್ಥಿಕ ಅವಶ್ಯಕತೆಯಲ್ಲಿ ಸ್ವರೂಪಾತ್ಮಕ ಬದಲಾವಣೆ ಸಾಧ್ಯವೇ ಹೊರತು ಮೂಲಭೂತ ಬದಲಾವಣೆ ಅಸಾಧ್ಯ. ಅಂತಲೇ ಆರ್ಥಿಕ ಸಮಸ್ಯೆಗೆ ಆರ್ಥಿಕ ನೆಲೆಯಲ್ಲೇ ಉತ್ತರ ಹುಡುಕೋಣ. ಕ್ರಿಸ್ಟೋಫರ್ ಹಿಲ್ ಎನ್ನುವ ವಿದ್ವಾಂಸ ಹೇಳಿದ್ದರು – ''ಜಗತ್ತಿನ ಜನರು ಮತ್ತೆ ಮತ್ತೆ ಮಾರ್ಕ್ಸ್‌ವಾದಕ್ಕೆ ಮರಳುತ್ತಲೇ ಇರುತ್ತಾರೆ.''

ಅರವಿಂದ ಚೊಕ್ಕಾಡಿ
ಫ್ರಾಂಕೊವಿಲ್ಲಾ, ಚರ್ಚ್‌ರಸ್ತೆ, ಬೆಳ್ತಂಗಡಿ
ದಕ್ಷಿಣ ಕನ್ನಡ – ೫೭೪ ೨೧೪



# 'ಶಾಂತಿ'ಯ ಸಂಕಟ

## ಪಾರಿವಾಳ ಮತ್ತು ಪಿಸ್ತೂಲು

ಕಳೆದ ಮೂವತ್ತು ವರ್ಷಗಳ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಸಂದರ್ಭದಲ್ಲಿ ತಮ್ಮದೇ ಆದ ಛಾಪು ಮೂಡಿಸಿದವರು ಪ್ರೊ|| ಬರಗೂರು ಅವರು. ಸೈದ್ಧಾಂತಿಕ ಬದ್ಧತೆ ಇಲ್ಲದ ಸಂಘಟನೆಗೆ ಸಂಘರ್ಷ ಮಾಡುವ ತಾಕತ್ತು ಇರುವುದಿಲ್ಲವೆಂಬುದೇ ಅವರ ಖಚಿತ ನಿಲುವು. ಹಾಗಾಗಿ ತಮ್ಮ ಪ್ರತಿಯೊಂದು ಕಲೆಯ ನೆಲೆಗೂ ತಾತ್ವಿಕ ಹಿನ್ನೆಲೆಯೊಂದನ್ನು ಇಟ್ಟುಕೊಳ್ಳುತ್ತಾರೆ; ಆ ಮೂಲಕ ಕ್ರಿಯಾಶೀಲಗೊಳ್ಳುತ್ತಾರೆ.

ಕನ್ನಡದ ಚಲನಚಿತ್ರ ಜಗತ್ತಿಗೆ ಒಂದು ದೊಡ್ಡ ಪರಂಪರೆಯಿದೆ. ಆ ಪರಂಪರೆಯ ಒಳಗೆ ಹಲವು ಪ್ರಯೋಗಗಳು, ಹತ್ತಾರು ಪರ್ಯಾಯಗಳು ತೆರೆ ಕಂಡಿವೆ. ಅಂಥವುಗಳಲ್ಲಿ ಬರಗೂರರ ಫಲಿತಗಳಿಗೆ ಮಹತ್ವದ ಸ್ಥಾನವಿದೆ. ಕಾರಣ ಕಳೆದ ಮೂವತ್ತು ವರ್ಷಗಳ ಕನ್ನಡ ಚಲನಚಿತ್ರಗಳನ್ನು ಗಮನಿಸಿದಾಗ ಈ ಮಾತಿನ ಮಹತ್ವ ಗೊತ್ತಾಗುತ್ತದೆ. ಇದರಲ್ಲಿ ಬರಗೂರು ಅವರ ಪ್ರತಿಭೆ ಮತ್ತು ಪ್ರಯೋಗಗಳ ಪಾಲು ತುಂಬಾ ದೊಡ್ಡದು. ಇವರ 'ಒಂದು ಊರಿನ ಕತೆ', 'ಬೆಂಕಿ', 'ಸೂರ್ಯ', 'ಕೋಟೆ', 'ಕರಡಿಪುರ', 'ಹಗಲುವೇಷ' ಮತ್ತು 'ಕ್ಷಾಮ' ಚಿತ್ರಗಳಿಗೆಲ್ಲ ಒಂದು ತಾತ್ವಿಕ ಹಿನ್ನೆಲೆಯಿದೆ. ಭೂಮಾಲೀಕ ಜಮೀನುದಾರರ ಅಟ್ಟಹಾಸಕ್ಕೆ ಬಲಿಯಾಗುವ ಸಮುದಾಯಗಳು ಮತ್ತು ಆ ಸಮುದಾಯಗಳ ಸಾವು ನೋವುಗಳ ಸಂಕಟ ಇಲ್ಲಿಯ ಪ್ರಮುಖ ವಸ್ತು. ಈ ವಸ್ತುವಿನ ಒಳಗೆ ಹುಟ್ಟಿಕೊಳ್ಳುವ 'ಕರಡಿಪುರ'ದ ರಾಜ, 'ಹಗಲುವೇಷ'ದ ರಾಮ, 'ಬೆಂಕಿ-ಸೂರ್ಯ'ರಂಥ ಹಲವು ತರುಣರು ಅಂತಿಮವಾಗಿ ಸಂಪತ್ತಿನ ಒಡೆಯರಿಗೆ ಸವಾಲೆಸೆಯುತ್ತಾರೆ. ಆ ಮೂಲಕ ಬಂಧಿಸಿದ 'ಕೋಟೆ'ಯನ್ನು ಹೊಡೆದುರುಳಿಸುತ್ತಾರೆ. ಇವರಂತೆ 'ಕೋಟೆ', 'ಕರಡಿಪುರ', 'ಕ್ಷಾಮ'ದೊಳಗಿನ ಹದಿಹರೆಯದ ಕನ್ನೆಯರೆಲ್ಲ ಆರಂಭಕ್ಕೆ ಅಸಹಾಯಕರಾದರೂ ಅಂತಿಮವಾಗಿ ಅವರೆಲ್ಲ ಬಂಡೇಳುತ್ತಾರೆ. ಇದು ಬರಗೂರರ ಚಿತ್ರಗಳ ಬಹುಮುಖ್ಯ ಶೈಲಿ. ವಿಶೇಷವೆಂದರೆ ಇವೆಲ್ಲವುಗಳ ವಸ್ತು ಇದ್ದವರು ಮತ್ತು ಇಲ್ಲದವರ ನಡುವಿನ ಸಂಘರ್ಷಕ್ಕೆ ಸಂಬಂಧಿಸಿದ್ದು. ಸ್ವಾತಂತ್ರ್ಯಾನಂತರವೂ ಬದುಕುಳಿದವರು ಜಮೀನುದಾರರು ಮತ್ತು ಅವರ ಹೊಲಗದ್ದೆಗಳಿಗೆ ತಮ್ಮ ರಕ್ತ ಬಸಿದು ಬದುಕುತ್ತಿರುವ ಶ್ರಮಜೀವಿಗಳು. ಇಂಥ ಶ್ರಮಜೀವಿ ಸಮುದಾಯದ ಸಂವೇದನೆಗಳನ್ನು ದಾಖಲಿಸುವ ಮೂಲಕ ಅವರನ್ನು ಸಿರಿವಂತರ ವಿರುದ್ಧ ಮುಖಾಮುಖಿಗೊಳಿಸುವುದೇ ಬರಗೂರರ ಅದಮ್ಯ ಆಶಯ, ಹಂಬಲ.

ಆದರೆ, ಈಗ, ಈ ಎಲ್ಲಾ ಚಿತ್ರಗಳನ್ನು ಮೀರಿ ನಿಲ್ಲುವ ಶಕ್ತಿ ಇವರ ಹೊಸ ಚಿತ್ರ 'ಶಾಂತಿ'ಗಿದೆ. ಇಷ್ಟರಲ್ಲೇ ಬಿಡುಗಡೆಗೊಳ್ಳಲಿರುವ ಈ ಚಿತ್ರಕ್ಕೆ ಭಾರಿ ಬೇಡಿಕೆ ಲಭ್ಯವಾಗಲಿದೆ. ಕಾರಣ, 'ಶಾಂತಿ'ಗಾಗಿ ಇವರು ಆರಿಸಿಕೊಂಡ ಆಕೃತಿ, ಇಟ್ಟುಕೊಂಡ ಆಶಯ ಮತ್ತು ಬಳಸಿಕೊಂಡ ಅಭಿವ್ಯಕ್ತಿಯ ಸಾಧ್ಯತೆಗಳು ಅದ್ಭುತವಾಗಿವೆ. ಇದು ಸಂಪೂರ್ಣವಾಗಿ ಏಕಪಾತ್ರದಲ್ಲೇ ನಿರ್ಮಿಸಿರುವ ಚಿತ್ರ. ಹಾಗಾಗಿ ಕನ್ನಡದಲ್ಲಿ ಅಷ್ಟೇ ಏಕೆ ಇಡೀ ಇಂಡಿಯಾದಲ್ಲೇ ಈ ರೀತಿ ನಿರ್ಮಾಣಗೊಂಡ ಸಿನಿಮಾ ಅಪರೂಪದವು. ಈ ಹಿಂದೆ ಇವರೇ ಸಂಪೂರ್ಣ ಸಂಗೀತ ಪ್ರಧಾನವಾದ 'ಕೋಟೆ' ಸಿನಿಮಾವನ್ನು ನಿರ್ಮಿಸಿದ್ದರು. ಇಲ್ಲಿ ಮಾತುಗಳಿಲ್ಲ. ಪದ್ಯಗಳಲ್ಲೇ ಪ್ರತಿಕ್ರಿಯೆಗಳಿದ್ದವು. ದೇಸಾಯಿಯವರ 'ಬೆಳದಿಂಗಳ ಬಾಲೆ'ಯ ನಾಯಕಿ ಕೊನೆಯವರೆಗೂ ಪ್ರೇಕ್ಷಕನಿಗೆ ಕಾಣುವುದಿಲ್ಲ. ಅದರಂತೆ ಮಾತಿಲ್ಲದ 'ಪುಷ್ಪಕ ವಿಮಾನ'ವು ಸಹ ಇವುಗಳ ಸಾಲಿಗೆ ಸೇರುವ ಇನ್ನೊಂದು ಚಿತ್ರ. ಇಲ್ಲೆಲ್ಲ ಒಂದಲ್ಲ ಒಂದು ಹೊಸ ಪ್ರಯೋಗ ಬೇರೆ ಬೇರೆ ನಿರ್ದೇಶಕರಿಂದ ನಡೆದಿವೆ. ಆದರೆ 'ಶಾಂತಿ'ಗಿರುವ ಸಾಮರ್ಥ್ಯ ಉಲ್ಲೇಖಾರ್ಹವಾದುದು.

ಇಂಡಿಯಾದಲ್ಲಂತೂ 'ಶಾಂತಿ' ಸದಾ ಏಕಾಂಗಿ. ಆ ಕಾರಣಕ್ಕೇ ಇರಬೇಕು ಬರಗೂರರು ಇಲ್ಲಿ ಅವಳನ್ನು ಈ ಚಿತ್ರದಲ್ಲಿ ಒಬ್ಬಂಟಿಯಾಗಿಸಿದ್ದಾರೆ. ಹಾಗೆ ನೋಡಿದರೆ 'ಶಾಂತಿ' ಇಲ್ಲಿ ಕೇವಲ ಪಾತ್ರ ಮಾತ್ರವಲ್ಲ, ಅವಳೊಂದು ಮನಸ್ಸು, ವ್ಯಕ್ತಿ, ವ್ಯವಸ್ಥೆ, ವಿವೇಕ, ಬುದ್ಧಿ, ಬಲ – ಇನ್ನೂ ಇತ್ಯಾದಿ. ಈ 'ಶಾಂತಿ'ಯನ್ನು ಬಿಟ್ಟರೆ ಬದುಕೇ ಇಲ್ಲ. ಅಷ್ಟೊಂದು ಅನಿವಾರ್ಯ ಸಂಗಾತಿ ಈ 'ಶಾಂತಿ'. ಈ ಹೊತ್ತಿನ ಜಾಗತಿಕ ತುರ್ತುಗಳಲ್ಲಿ ಮನುಷ್ಯನ

ಡಾ|| ರಂಗರಾಜ ವನದುರ್ಗ

ಮೊದಲ ಆದ್ಯತೆ ಏನಾದರೂ ಇದ್ದರೆ ಅದು 'ಶಾಂತಿ'ಗೆ ಮಾತ್ರ. ಇಂಥ 'ಶಾಂತಿ'ಯನ್ನು ಚಲನಚಿತ್ರಗೊಳಿಸುವುದು ಸವಾಲಿನ ಕೆಲಸವೇ ಸರಿ. ಆದರೂ ಬರಗೂರರು ಕತೆ, ಗೀತೆ, ಚಿತ್ರಕತೆ, ಸಂಭಾಷಣೆ, ನಿರ್ದೇಶನಗಳ ಜವಾಬ್ದಾರಿ ನಿರ್ವಹಿಸುವ ಮೂಲಕ 'ಶಾಂತಿ'ಗೆ ಸರ್ವಶ್ರೇಷ್ಠ ಸಾಮರ್ಥ್ಯ ತುಂಬಿದ್ದಾರೆ.

ಸಂಪೂರ್ಣವಾಗಿ ಕೊಡಗು ಪರಿಸರದಲ್ಲಿಯೇ ಚಿತ್ರೀಕರಣಗೊಂಡಿರುವುದು 'ಶಾಂತಿ'ಯ ವಿಶೇಷ. ಮೊದಲಿಗೆ ಚಿತ್ರ ಬೈಲುಕುಪ್ಪೆಯ ಬುದ್ಧಪ್ರತಿಮೆಯೆದುರು ಬಿಚ್ಚಿಕೊಳ್ಳುತ್ತದೆ. ಆ ಮೂಲಕ ಇಂದಿನ ಭಾರತಕ್ಕೆ ಬುದ್ಧ ಅನಿವಾರ್ಯವೆಂದು ಚಿತ್ರ ಸಂಕೇತಿಸುತ್ತದೆ. ಮತ್ತು ಧ್ಯಾನದಲ್ಲಿದ್ದ ಶಾಂತಿಯ ಮೌನ ಮುರಿದು ಮಾತಿಗಿಳಿಯುತ್ತದೆ. ಅಂದರೆ, ವಿಶ್ವಸಂಸ್ಥೆಯ ನೇತೃತ್ವದಲ್ಲಿ ನಡೆಯಲಿರುವ ಶಾಂತಿ ಸಮ್ಮೇಳನ ಮತ್ತು ಆ ಪ್ರಯುಕ್ತ ಪ್ರದರ್ಶನಗೊಳ್ಳಲಿರುವ ಚಿತ್ರಕಲೆಯ ವಿಷಯವನ್ನು ತಾಯಿಯಿಂದ ತಿಳಿಸುತ್ತದೆ. ಇಲ್ಲಿಂದ ತೀವ್ರತೆ ತಂದುಕೊಳ್ಳುವ ಚಿತ್ರಕ್ಕೆ ಬಿಳಿಯ ಭಿತ್ತಿ, ಭಿತ್ತಿಗಾಗಿ ಬಣ್ಣ, ಬಣ್ಣ ಹಚ್ಚುವ ಕುಂಚ, ಕುಂಚದೊಳಗಿನ ಕಲೆಗಳೆಲ್ಲ ನಾ ಮೊದಲು ತಾ ಮೊದಲೆಂದು ಸಂಭ್ರಮಿಸುತ್ತವೆ. ಇವೆಲ್ಲ ಶಾಂತಿಯ ಜೊತೆಗೆ ಕೊಡಗಿನ ಹಸಿರು ಒಡಲೊಳಗೆ ಸಿದ್ಧತೆಗಾಗಿ ಸಾಗಿಬರುತ್ತವೆ.

ಹಸಿರು ಸಿರಿಯ ಸೊಬಗು ನೋಡಿದ 'ಶಾಂತಿ'ಗೆ ಇಲ್ಲಿ ಭಾವಪರವಶವಾದದ್ದು ಸಹಜವೇ. ಹಾಗೆಯೇ ಇಂಥ ಹಸಿರು ವನದಲ್ಲಿ ಸ್ವಚ್ಛಂದವಾಗಿ ಹಾರಾಡುವ ಪಾರಿವಾಳ ಕಂಡದ್ದು ಇನ್ನೂ ಸಹಜವೇ. ಅದರಂತೆ, ಈ ಪಾರಿವಾಳವನ್ನು ಹಿಡಿದುಕೊಳ್ಳಲು ಯತ್ನಿಸಿದ ಶಾಂತಿಗೆ ಅದು ಸಿಗದೇ ಹೋದದ್ದು ಸಹ ಸಹಜವೇ. 'ಶಾಂತಿ'ಗೆ ಶಾಂತಿಯೇ ಸಿಗುತ್ತಿಲ್ಲ, ಹಾಗೆ ನೋಡಿದರೆ 'ಶಾಂತಿ'ಗೆ ನಿಜವಾದ ಸಂಗಾತಿ ಪಾರಿವಾಳ. ಪಾರಿವಾಳಕ್ಕೆ ನಿಜವಾದ ಪರಿಸರ ಶಾಂತಿ. ಆದರೆ, ಇವೆಲ್ಲ ಈಗ ಇಲ್ಲಿ ಒಂದೇ ಆಗಿ ಉಳಿದಿಲ್ಲ; ಬದಲಿಗೆ ವೈರುಧ್ಯಕ್ಕೆ ಒಳಪಟ್ಟಿವೆ – ಎಂಬುದನ್ನು ಚಿತ್ರ ಮೊದಲ ಬಾರಿಗೆ ಧ್ವನಿಸಿಬಿಡುತ್ತದೆ. ಪಾರಿವಾಳಕ್ಕಾಗಿ 'ಶಾಂತಿ' ಹಂಬಲಿಸುವುದು; ಹಂಬಲಿಸಿದ ಕೈಗೆ ಆ ಪಾರಿವಾಳ ದಕ್ಕದೇ ಇರುವುದು ಗಮನಾರ್ಹ. ಇಂಥ ದೃಶ್ಯಗಳು ಹುಡುಕಾಟದ ಹೃದಯಗಳನ್ನು ತಕ್ಷಣವೇ ಕಣ್ಣೆದುರು ತಂದು ನಿಲ್ಲಿಸುತ್ತವೆ. ಆದರೂ 'ಶಾಂತಿ'ಯ ಹುಡುಕಾಟ ಸುಮ್ಮನಾಗುವುದಿಲ್ಲ. ಇವಳ ಮೊದಲ ಆದ್ಯತೆ ಬುದ್ಧನನ್ನು ಭಿತ್ತಿಯ ಮೇಲೆ ಕಾಣಲೆತ್ನಿಸುತ್ತದೆ. ಕುಂಚದೊಳಗಿನ ಕಲೆ ಭಿತ್ತಿಯ ಹುಡುಕಾಟದಲ್ಲಿರುವಾಗಲೇ 'ಶಾಂತಿ'ಯೊಳಗಿನ ಚಿತ್ತ ಬುದ್ಧನಿಗಾಗಿ ಧ್ಯಾನಿಸುತ್ತದೆ. ಈ ದೃಶ್ಯ ತುಂಬಾ ಅರ್ಥಪೂರ್ಣವಾದುದು. ಇದು ಕಲೆಯೊಂದಿಗೆ ನಡೆಸುವ ಕಲಾವಿದನ ಅನುಸಂಧಾನಕ್ಕೂ, ಧರ್ಮದೊಂದಿಗೆ ನಡೆಸುವ ಧ್ಯಾನದ ಅನುಸಂಧಾನಕ್ಕೂ ಇಲ್ಲಿ ಆಪ್ಯಾಯಮಾನವಾದ ಸಂಬಂಧವನ್ನು ಕಲ್ಪಿಸುತ್ತದೆ. ಈ ಸಂಬಂಧವನ್ನೇ ಬರಗೂರರು ಬಿಳಿಯ ಭಿತ್ತಿಯ ಮೇಲೆ ಬುದ್ಧನನ್ನು ಚಿತ್ರಿಸುವ ಮೂಲಕ ಒಂದು ವೈಚಾರಿಕ ಅನುಸಂಧಾನಕ್ಕೆ ಅನುವು ಮಾಡಿಕೊಡುತ್ತಾರೆ. ಜೊತೆಗೆ ಬಿಳಿಯ ಭಿತ್ತಿಯನ್ನು ನಿರ್ಮಲಭಾವಕ್ಕೂ, ಬುದ್ಧ ಚಿತ್ರವನ್ನು ಶಾಂತಿಯ ಸಂಕೇತಕ್ಕೂ ಅನ್ವಯಿಸುತ್ತಾರೆ. ಆಗ ಹಿನ್ನೆಲೆಯಲ್ಲಿ

''ಸಿದ್ಧ ಅರ್ಥಗಳ ಮೀರಿದ ಬುದ್ಧ
ನಿದ್ದೆ ಹಾದಿಯಲಿ ಹಗಲನು ಗೆದ್ದ
ಹೆಜ್ಜೆಯಿಟ್ಟ ಕಡೆ ಬೆಳಕು ಚಿಮ್ಮಿತು
ಲಜ್ಜೆಗೆಟ್ಟ ನೆಲ ನೀತಿ ಕಲಿಯಿತು''

– ಎಂಬ ಗೀತೆ ನವಿರಾಗಿ ಕೇಳಿಬರುತ್ತದೆ. ಒಂದು ರೀತಿಯಲ್ಲಿ ಸಿನಿಮಾದ ಸಂಪೂರ್ಣ ಆಶಯವನ್ನು ಈ ಗೀತೆ ಹಿಡಿದಿಟ್ಟುಕೊಂಡಿದೆ.

ಚಲನಚಿತ್ರದ ಬಹುತೇಕ ಪೂರ್ವಭಾಗ ಅತಿಥಿ ಗೃಹವನ್ನೇ ಆಶ್ರಯಿಸಿಕೊಂಡಿದೆ. ಇಲ್ಲಿ ಶಾಂತಿಗೆ ಸಹಕರಿಸುವ ಮೂಲಕ ತುಂಬಾ ಹತ್ತಿರ ಬರುವ ವ್ಯಕ್ತಿ ಸಮರ. ಆಶ್ಚರ್ಯವೆಂದರೆ 'ಶಾಂತಿ' ಮತ್ತು 'ಸಮರ' ಯಾವಾಗಲೂ ಎರಡು ತುದಿಗಳು. ಒಂದು ದೃಷ್ಟಿಯಲ್ಲಿ ಇವು ಒಂದಕ್ಕೊಂದು ವಿರೋಧಿಗಳು. 'ಶಾಂತಿ' ಇದ್ದಲ್ಲಿ 'ಸಮರ'; 'ಸಮರ' ಇದ್ದಲ್ಲಿ 'ಶಾಂತಿ' ಇರಲು ಸಾಧ್ಯವೇ ಇಲ್ಲ. ಆದರೆ, ಬರಗೂರರ ದೃಷ್ಟಿಕೋನ ಇದನ್ನು ಒಪ್ಪಿಕೊಳ್ಳುವುದಿಲ್ಲ. 'ಶಾಂತಿ' ಇರಬೇಕಾದರೆ 'ಸಮರ' ಇರಬೇಕೆಂಬುದೇ ಇವರ ಸ್ಪಷ್ಟ ನಿಲುವು. ಹಾಗಾಗಿ, ಚಿತ್ರದ ಉದ್ದಕ್ಕೂ 'ಶಾಂತಿ' ತನ್ನ ರಕ್ಷಣೆಗಾಗಿ ಸಮರವನ್ನೇ ನಂಬುತ್ತಾಳೆ. ಇದು ಚಿತ್ರದ ಧನಾತ್ಮಕ ಗುಣ. ಕಾರಣ, ಈ ಹೊತ್ತಿನ ತೃತೀಯ ರಾಷ್ಟ್ರಗಳ ಸ್ಥಿತಿ ಇದುವೇ ಆಗಿದೆ. ಶಾಂತಿ ಮತ್ತು ಅಶಾಂತಿ ತಮ್ಮ ನಡುವೆ ತೀವ್ರ ಸಂಘರ್ಷವನ್ನು ಎದುರಿಸುತ್ತಿವೆ. ಒಂದು ಹಂತದಲ್ಲಿ ಇವು ತೃತೀಯ ದೇಶದ ಭಯೋತ್ಪಾದನೆಯನ್ನು, ಮೊದಲ ದೇಶದ ಯುದ್ಧೋತ್ಪಾದನೆಯನ್ನು ನಮಗೆ ನೆನಪಿಸುತ್ತವೆ. ಈ ನಡುವೆ ಸೊರಗಿ ಸುಣ್ಣವಾದ ಶಾಂತಿಯ ದುಗುಡ ದುಮ್ಮಾನಗಳು, ತವಕ ತಲ್ಲಣಗಳು ತಿಳಿಯುವುದು ಅಗತ್ಯ. ಆ ಕಾರಣಕ್ಕೆ, ಸೈನ್ಯದ ರೀತಿಯಲ್ಲಿ ಸಹಕಾರಕ್ಕೆ ಬರುವ ಸಮರ, ಶಾಂತಿಗೆ ಹತ್ತಿರವಾಗುತ್ತಾನೆ. ಆದರೆ ಸಮರನದ್ದು ತ್ರಿಶಂಕುಸ್ಥಿತಿ. ಒಂದು ಕಡೆ 'ಶಾಂತಿ'ಯ ಸಖ್ಯ; ಇನ್ನೊಂದು ಕಡೆ ಉಗ್ರಗಾಮಿಯ ವಿರೋಧ. ಕುತೂಹಲವೆಂದರೆ ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲೂ ಸಮರ 'ಶಾಂತಿ'ಯನ್ನೇ ಆಯ್ಕೆ ಮಾಡಿಕೊಳ್ಳುತ್ತಾನೆ. ಈ ಸಮರ ಬೇರೆ ಯಾರೂ ಅಲ್ಲ, ಬರಗೂರರ ಸಮರ. ಹಾಗಾಗಿ 'ಶಾಂತಿ'ಯನ್ನು ಆಯ್ಕೆಮಾಡಿಕೊಳ್ಳುತ್ತಾನೆ.

ಅಭಿನೇತ್ರಿ ಭಾವನಾ

ಶಾಂತಿ ತನಗೀಗ ಆಪ್ತ ಅತಿಥಿ. ಆದ್ದರಿಂದ ಅವಳನ್ನು ಪ್ರೀತಿ-ವಿಶ್ವಾಸಗಳಿಂದ ನೋಡಿಕೊಳ್ಳುವುದು ತನ್ನ ಆದ್ಯ ಕರ್ತವ್ಯ. ಇದು ಸಮರನ ಅಭಿಪ್ರಾಯ. ಹಾಗಾಗಿ ಶಾಂತಿಗೆ ''ಇದು ನಿಮ್ಮ ಮನೆ. ನಾನು ನಿಮ್ಮ ಮನೆಯವನು, ಅಭಿಮಾನಿ'' ಎಂದು ಹೇಳುವಲ್ಲಿ ಆ ಆಪ್ತತೆ ಎದ್ದುಕಾಣುತ್ತದೆ. ಈ ಮಾತು ಕೇಳಿದಾಕ್ಷಣ ಶಾಂತಿಗೆ ಸಹಜವಾಗಿಯೇ ಕೋಪ ಬಂದಿದೆ. ಏಕೆಂದರೆ 'ಶಾಂತಿ'ಗೆ ಸಮರ ಸ್ನೇಹಿತನಾಗಲು ಹೇಗೆ ಸಾಧ್ಯ ? ಮೊದಲೇ ಆತ ಅಪರಿಚಿತ ಎನ್ನುವ ಮನಸ್ಥಿತಿ ಕಾಡುತ್ತದೆ. ಆಗ ಅವರಮ್ಮ ''ಅಭಿಮಾನವಿದ್ದಲ್ಲಿ ಅನುಮಾನ ಬೇಡ. ಶಾಂತಿ ಹುಡುಕುವವರಿಗೆ ಶಾಂತಿ ಇರುವುದಿಲ್ಲ ಮಗಳೆ'' ಎಂದು ಹೇಳುವುದನ್ನು ಗಮನಿಸಿದರೆ ಮನುಷ್ಯನ ಕೆಲ ಸೂಕ್ಷ್ಮ ಅಂಶಗಳು ಬಹಿರಂಗಗೊಳ್ಳುತ್ತವೆ. ಈ ಸಂದರ್ಭದಲ್ಲಿ ಪ್ರಕಟಗೊಳ್ಳುವ ಬಿಳಿಯ ಭಿತ್ತಿ, ಕೇಸರಿ ಉಡುಗೆ, ಹಸಿರುವನಗಳೆಲ್ಲ ಭಾರತದೇಶದ ಭಾವಗಳಾಗಿ ಗೋಚರಿಸುತ್ತವೆ. ಅಂದರೆ, 'ಸಾರೆ ಜಹಾಂಸೆ ಅಚ್ಛಾ' ಗೀತೆಯ ಅಲೆಗಳು ತೇಲಿ ಬರುವುದು ಸಹ ಇದನ್ನೆ ಪ್ರತಿಬಿಂಬಿಸುತ್ತದೆ. ಬರಗೂರರ ಆಶಯವು ಅದೇ ಆಗಿದೆ. ಹಿಂದು ಕೋಮುವಾದಿಗಳ ಕೇಸರಿ ವಿರುದ್ಧ ಬುದ್ಧನ ಕೇಸರಿಯನ್ನು, ಮುಸ್ಲಿಂ ಕೋಮುವಾದಿಗಳ ಹಸಿರು ವಿರುದ್ಧ ಕೊಡಗಿನ ಹಸಿರು ವನವನ್ನು, ಕ್ರೈಸ್ತ ಕೋಮುವಾದಿಗಳ ಬಿಳಿಯದರ ವಿರುದ್ಧ ಕಲಾವಿದೆಯ ಶುಭ್ರಶ್ವೇತ ಉಡುಗೆಯನ್ನು ಮುಖಾಮುಖಿಗೊಳಿಸುತ್ತಾರೆ.

ಚಲನಚಿತ್ರದುದ್ದಕ್ಕೂ ಶಾಂತಿಗೆ ಹಲವು ಅಶಾಂತಿಗಳು ಕಾಡಿವೆ. ಮತ್ತೇರಿದ ರಾಜಕಾರಣಿ, ಕಾಡುಮೃಗ, ಟ್ರಿಣ್‌ಗುಟ್ಟುವ ಫೋನು, ಕೈಕೊಟ್ಟ ಪಾರಿವಾಳ, ಪದೇಪದೇ ಕರೆವ ಸಮರ, ಭಯ ಹುಟ್ಟಿಸುವ ಉಗ್ರ ಮುಂತಾದ ಮುಖಗಳು ಅಶಾಂತಿಯ ಅಲೆ ಎಬ್ಬಿಸಿವೆ. ಒಂದು ದೃಷ್ಟಿಯಲ್ಲಿ ಇವು ಅಂತರಂಗದೊಳಗಿನ ಅಶಾಂತಿಯನ್ನು, ಬಹಿರಂಗದೊಳಗಿನ ಆಕ್ರಮಣಗಳನ್ನು ಪ್ರತಿಬಿಂಬಿಸುತ್ತವೆ. ಈ ಸಂದರ್ಭದಲ್ಲಿ ಪ್ರವೇಶಿಸುವ ಪಾರಿವಾಳ ಏಕಕಾಲಕ್ಕೆ ಶಾಂತಿಯನ್ನು ಮತ್ತು ಸ್ತ್ರೀ ಸಂವೇದನೆಯನ್ನು ಪ್ರತಿನಿಧಿಸುತ್ತದೆ. ಮೂಲತಃ ಇವಳು ಶಾಂತಿಯ ಸ್ನೇಹಿತೆ. ತದನಂತರ ಇವಳು ಪ್ರೀತಿಯ 'ಪಾರಿ'ಯಾದದ್ದು. ಇವರಿಬ್ಬರಿಗೂ ಒಂದೇ ಮನಸ್ಥಿತಿಯ ಹೆಂಗರುಳಿದೆ. ಹಾಗಾಗಿ ಕಷ್ಟನಷ್ಟಗಳಲ್ಲಿ ಕೂಡಲೇ ಒಂದಾಗುತ್ತಾರೆಂಬುದು ಬರಗೂರರ ವಿವರಣೆ. ಆಗಲೂ ಒಂದು ವೇಳೆ ಪಾರಿ ಕೈಕೊಟ್ಟರೆ:

''ಎಲ್ಲಿ ಹೋಯಿತು ಶಾಂತಿ
ಬಿಳಿ ಬಣ್ಣದ ಕಾಂತಿ''

– ಎಂಬ ಹಂಬಲದಲ್ಲಿ ಶಾಂತಿ ಅತ್ತುಬಿಡುತ್ತಾಳೆ. ಆ ಮೂಲಕ ನೋಡುಗರ ಹೃದಯವನ್ನು ಗೆದ್ದುಬಿಡುತ್ತಾಳೆ. ಶಾಂತಿ ''ತುಳಿವ ದಾರಿ ತುಂಬಾ ಕುದಿವ ಬೇಗೆ'' ಇರುವುದನ್ನು ಕಂಡ ವೀಕ್ಷಕ ಮಮ್ಮಲ ಮರುಗುತ್ತಾನೆ. ಪಂಜರದೊಳಗಿನ ಪಾರಿವಾಳ ಬಿಡುಗಡೆಯಾಗಬೇಕು. ನಿಜ. ಏಕೆಂದರೆ 'ಶಾಂತಿ' ಬಂಧಿಯಾಗಬಾರದು. ಅದು ನಿರ್ದೇಶಕರ ನಿಲುವು. ಆದರೆ ಬಿಡುಗಡೆಗೊಂಡ ಪಾರಿಗೆ ಸಮರನ ಸ್ನೇಹ ಎಷ್ಟು ಸುರಕ್ಷಿತವೆಂತಲೂ ಶಾಂತಿ ಇಲ್ಲಿ ಆಲೋಚಿಸುತ್ತಾಳೆ.

ಇದೇ ಸಂದರ್ಭದಲ್ಲಿ ಮತ್ತೆ ಬಿಳಿಯ ಭಿತ್ತಿ ನಮ್ಮ ಗಮನ ಸೆಳೆಯುತ್ತದೆ. ಈ ಮೊದಲು ಬುದ್ಧಚಿತ್ರ ಹೊಂದಿದ್ದ ಆ ಭಿತ್ತಿಯ ತುಂಬ ಈಗ ರಕ್ತದ ಕಲೆಗಳು, ಕಡಿದುರುಳಿಬಿದ್ದ ಅಂಗಾಂಗಗಳು, ಸ್ಫೋಟಗೊಳ್ಳುತ್ತಿರುವ ಅಸ್ತ್ರಗಳೇ ತುಂಬಿಕೊಂಡಿವೆ. ಇದು ಥೇಟ್ ನಮ್ಮ ತೃತೀಯ ರಾಷ್ಟ್ರಗಳ ಮೇಲೆ ಮೊದಲ ರಾಷ್ಟ್ರಗಳು ಮಾಡಿದ ದೌರ್ಜನ್ಯವನ್ನು ದರ್ಶಿಸುತ್ತವೆ. ಮುಖ್ಯವಾಗಿ ಅಮೇರಿಕೆಯ ಅಪಾಯಕಾರಿ ದಾಳಿಗೆ ತುತ್ತಾದ ಅಫಘಾನಿಸ್ತಾನ ಹಾಗೂ ಇರಾಕ್ ದೇಶದ ದುರಂತಗಳನ್ನು ಹೇಳುತ್ತವೆ. ಇದನ್ನು ಕಂಡ ಶಾಂತಿಗೆ ಮತ್ತೆ ಭುಗಿಲು ಶುರುವಾಗುತ್ತದೆ. ತನ್ನ ಬದುಕಿರುವವರ ಬಗ್ಗೆ ತವಕ, ಸಾಯಲಿರುವವರ ಬಗ್ಗೆ ತಲ್ಲಣಗಳು ಬುಗ್ಗೆಬುಗ್ಗೆಯಾಗಿ ಬರುತ್ತವೆ. ಇವುಗಳನ್ನು ನಿರ್ದೇಶಕರು ಅವಳ ಮನಸ್ಸಿನ ತಾಕಲಾಟದಲ್ಲಿ, ಎಡವಿಬೀಳುವ ಹೆಜ್ಜೆಯಲ್ಲಿ, ದಿಕ್ಕೆಟ್ಟ ಮುಖಭಾವದಲ್ಲಿ ಸಮರ್ಥವಾಗಿ ಅಭಿವ್ಯಕ್ತಿಸುತ್ತಾರೆ. ಜೊತೆಗೆ ಬಾಂಬಿನ ಕಾರಣಕ್ಕಾಗಿಯೇ ಬುದ್ಧನನ್ನು ಎರಡು ಬಾರಿ ನಗಿಸಿದ ಕೋಮುವಾದಿಗಳ ಬಗ್ಗೆ ಎಚ್ಚರವನ್ನು ಮೂಡಿಸುತ್ತಾರೆ.

ಬುದ್ಧನ ಕಾಲಾನಂತರ ಆ ಖಾಲಿ ಜಾಗವನ್ನು ತುಂಬಿದ ಮತ್ತೊಬ್ಬ ಬುದ್ಧನೆಂದರೆ ಮಹಾತ್ಮ ಗಾಂಧೀಜಿ. ಬುದ್ಧ ಮತ್ತು ಗಾಂಧಿ ಈ ದೇಶದ ಮುಖ್ಯ ವ್ಯಕ್ತಿಗಳು, ಶಾಂತಿಯ ಸಂಕೇತಗಳು. ಬರಗೂರರು ಭಾವಿಸಿರುವಂತೆ ಇವರಿಬ್ಬರೂ ಪಶ್ಚಾತ್ತಾಪ ಪ್ರಜ್ಞೆಯ ಪ್ರತಿನಿಧಿಗಳು. ತಮ್ಮನ್ನು ಹುಟ್ಟಿಸಿದ, ಬಾಲ್ಯವನ್ನು ಬೆಳೆಸಿದ ವ್ಯವಸ್ಥೆ ಬಗ್ಗೆ ಇವರಿಗೆ ಜಿಗುಪ್ಸೆಯಿದೆ. ಆದ್ದರಿಂದಲೇ ಇವರು ಇದ್ದವರು ಮತ್ತು ಇದ್ದುದ್ದನ್ನು ಬಿಟ್ಟು ಇಲ್ಲದವರ ಮಧ್ಯೆ ಬಂದು ಬದುಕಿದರು. ಒಂದರ್ಥದಲ್ಲಿ ಅಶಾಂತಿಯ, ವ್ಯಗ್ರ ವ್ಯವಸ್ಥೆಯ ನೆಲೆಯನ್ನು ವಿರೋಧಿಸುವ ಮೂಲಕ ಪ್ರಗತಿಪರರಾದವರು. ಹಾಗಾಗಿ ಪಶ್ಚಾತ್ತಾಪ ಪ್ರಜ್ಞೆಯ ಈ ಎರಡು ಪ್ರಜ್ಞೆಗಳನ್ನು ನಿರ್ದೇಶಕರು ಪ್ರಸ್ತುತ ಸಿನಿಮಾಕ್ಕೆ ಮುಖ್ಯ ಆಕೃತಿಯಾಗಿಸಿಕೊಂಡಿದ್ದಾರೆ.

ಬುದ್ಧ ಬಂದ, ಗಾಂಧಿಯೂ ಬಂದ ಆದರೆ ಶಾಂತಿಗೆ 'ಶಾಂತಿ'ಯೇ ಇಲ್ಲ. ನೆಮ್ಮದಿ ನೀಡಬೇಕಾದ ಹಸಿರು ವನ, ಅಮ್ಮನ ಮಾತು, ಪಕ್ಷಿಗಳ ಉಲಿ ಎಲ್ಲವೂ ವಿಫಲವಾಗುತ್ತಿವೆ. ಕಾರಣ ದೇಶೀಯ ಭಯೋತ್ಪಾದನೆ, ವಿದೇಶೀಯ ಯುದ್ಧೋತ್ಪಾದನೆಗಳು ಶಾಂತಿಯನ್ನು ಎಳೆದಾಡುತ್ತವೆ. ಇವುಗಳ ಸಂಕೇತವಾಗಿ ಬರುವ ಕಪ್ಪು ಜೀಪು ಮತ್ತು ಅದರ ಕರ್ಕಶ ಧ್ವನಿ ಇಡೀ ಶಾಂತಿಯ ಮಾನಸಿಕ ಪರಿಸರವನ್ನೇ ಮಲಿನಗೊಳಿಸುತ್ತದೆ. ಕೊನೆಗೆ ಶಾಂತಿಯನ್ನೇ ಒತ್ತೆ ಆಳು ಮಾಡಿಕೊಳ್ಳುವ ಮೂಲಕ ಬಂದೂಕಿನ ತುದಿಯಲ್ಲಿ ಬಂಧಿಸಿಡುತ್ತದೆ.

ಇಲ್ಲಿಂದ 'ಶಾಂತಿ' ಸಿನಿಮಾ ತನ್ನ ವಸ್ತು ಮತ್ತು ಚಿತ್ರೀಕರಣ ಸಮೇತ ಕೊಡಗು ದೊರೆಗಳ ಹಾಳು ಅರಮನೆಗೆ ವರ್ಗವಾಗುತ್ತದೆ. ಬಹುದೊಡ್ಡ ಕಟ್ಟಡ, ಭಯ ಹುಟ್ಟಿಸುವ ಆವರಣ. ಇಂಥ ಆವರಣದಲ್ಲಿ ಬಂಧಿಸಲ್ಪಟ್ಟ 'ಶಾಂತಿ'ಗೆ ದಿಕ್ಕೆಟ್ಟ ಸ್ಥಿತಿ. ಒಂದು ನೆಲೆಯಲ್ಲಿ ಈ ಕಟ್ಟಡ ಭಾರತದ ಚರಿತ್ರೆಯ ರೂಪಕ. ಅಷ್ಟೇ ಅಲ್ಲ, ಹಲವು ಅವಘಡಗಳ ಪುರಾಣ, ಐತಿಹ್ಯಗಳ ಪ್ರತಿಬಿಂಬವಾಗಿ ಬರುತ್ತದೆ. ದುರ್ದೈವವೆಂದರೆ 'ಶಾಂತಿ'ಯನ್ನು ಬಂಧಿಸಿ ಇಟ್ಟುಕೊಂಡ ಕಟ್ಟಡವೂ ಇದೇ ಆಗಿದೆ. ಇದರೊಳಗಿನ ಚರಿತ್ರೆ, ಪುರಾಣ, ಐತಿಹ್ಯ, ಭಿತ್ತಿ ಚಿತ್ರಗಳ ಚೈತನ್ಯದ ಮೂಲಕ ಉಗ್ರ ವ್ಯವಸ್ಥೆಯನ್ನು ವಿರೋಧಿಸಬಹುದಲ್ಲ ಅಂತ ಅನ್ನಿಸುತ್ತದೆ.

ಬಂದೂಕಿನ ನಳಿಕೆ ಬೆನ್ನಿಗೆ ಒತ್ತಿದಾಗೊಮ್ಮೆ 'ಶಾಂತಿ'ಗೆ ಭಯ, ಇಂಥ ಭಯ ಹುಟ್ಟಿದಾಗೊಮ್ಮೆ ಬಂದು ಧೈರ್ಯ ತುಂಬಿದಾತ ಸಮರ. ಈ ಕಾರಣಕ್ಕೇನೆ ಸಮರನೊಂದಿಗಿನ 'ಶಾಂತಿ'ಯ ಸ್ನೇಹ ಇನ್ನಷ್ಟು ಹತ್ತಿರವಾಗುತ್ತದೆ. ಶಾಂತಿಗೆ ರಕ್ಷಣೆ ನೀಡಬೇಕೆಂದು ಸಮರ ಬಯಸಿದರೆ, ಸಮರನೊಡಗೂಡಿ ಸಂಘರ್ಷ ಮಾಡಬೇಕೆಂದು ಶಾಂತಿ ಹಂಬಲಿಸುತ್ತಾಳೆ. ಆದರೆ ಸಮರನನ್ನೇ ಬಳಸಿಕೊಳ್ಳುವ ಭಯೋತ್ಪಾದಕ ಇನ್ನೊಂದೆಡೆ ಇದ್ದಾನೆ. ಈ ಮೂರೂ ನೆಲೆಗಳ ವೈರುಧ್ಯದಲ್ಲಿ ಶಾಂತಿಯ ಮನಸ್ಸು ಮಡುಗಟ್ಟಿರುವುದನ್ನು ಚಿತ್ರ ಬಿತ್ತರಿಸುತ್ತದೆ. ಅಲ್ಲದೆ ವೈರುಧ್ಯ ಮತ್ತು ವಾಸ್ತವಗಳ ಮುಖಾಮುಖಿಯ ನಡುವೆ ಮನುಷ್ಯ ಬದುಕುತ್ತಿದ್ದಾನೆಂದು ಕೂಡ ಚಿತ್ರ ಹೇಳುತ್ತದೆ. ಆದರೆ, ಕೆಲ ವೀಕ್ಷಕರು ಇಲ್ಲಿಯೇ ಗೊಂದಲಗೊಳ್ಳುವ ಸಾಧ್ಯತೆ ಇದೆ. ಅದೆಂದರೆ, ಸಮರನ ಆದ್ಯತೆ ಯಾವುದು? ಶಾಂತಿಯೊಂದಿಗೆ ಸ್ನೇಹವಾ? ಉಗ್ರನೊಂದಿಗೆ ಸಂಘರ್ಷವಾ? ಶಾಂತಿಯೂ ಅಷ್ಟೆ. ಒಂದು ಕೈಯಲ್ಲಿ ಪಾರಿವಾಳವನ್ನು, ಇನ್ನೊಂದು ಕೈಯಲ್ಲಿ ಪಿಸ್ತೂಲನ್ನು ಹಿಡಿಯಲು ಅದ್ಹೇಗೆ ಸಾಧ್ಯ? ಇದು ಹಲವರ ಪ್ರಶ್ನೆ. ಬರಗೂರರಲ್ಲಿ ಖಂಡಿತ ಇದಕ್ಕೆ ಖಚಿತ ಉತ್ತರವಿದೆ. 'ಶಾಂತಿ'ಗೆ ತನ್ನ ರಕ್ಷಣೆ ಮುಖ್ಯ. ಅದು ಪಿಸ್ತೂಲಿನಿಂದ ಸಾಧ್ಯ. ಈ ಪಿಸ್ತೂಲು ಕಾಪಾಡಿಕೊಳ್ಳಲು ಇದ್ದುದ್ದೆ ಹೊರತು ಕೊಲ್ಲಲು ಅಲ್ಲ. ಶಾಂತಿ ಅನ್ನೋದು ಸಹ ದೌರ್ಬಲ್ಯ ಅಲ್ಲ. ಅದು ಆಗೋದೂ ಇಲ್ಲ. ಅಂತೆಲ್ಲ ಹೇಳಿದರೂ ಶಾಂತಿಗೆ ಮಾನಸಿಕ ಒತ್ತಡ ತಪ್ಪಿಲ್ಲ. ಈ ನಡುವೆ ಅವಳಿಗೆ ಪ್ರಾಪ್ತವಾದದ್ದು ಒಂದು ಕಡೆ ಸಮರಸಿಂಹನ ಉಪದೇಶ; ಇನ್ನೊಂದು ಕಡೆ ಉಗ್ರಗಾಮಿಯ ಒತ್ತಡ. ಆದರೂ ಸಮರಸಿಂಹನ ಪ್ರೀತಿಯ ಮಾತುಗಳು ವಿಶ್ವಾಸವನ್ನು ಹುಟ್ಟಿಸಿವೆ. ಆ ಮೂಲಕ ಇವತ್ತಲ್ಲ ನಾಳೆ ''ಬಂದೂಕಿನ ಬಾಯಲ್ಲಿ ಗುಬ್ಬಿ ಗೂಡು ಕಟ್ಟುತ್ತದೆ'' ಎಂದು ಭಾವಿಸುತ್ತಾಳೆ. ಆ ಕ್ಷಣದಲ್ಲಿ ಎಲ್ಲಿಂದಲೋ ಹಾರಿಬಂದ 'ಪಾರಿ' ಬಂದೂಕಿನ ತುದಿಯಲ್ಲಿ ಬಂದು ಕೂಡುತ್ತದೆ. ಇಂಥ ಹಲವು ಅರ್ಥಪೂರ್ಣ ಪರಿಣಾಮಗಳನ್ನು ಸಂಕೇತಿಸುತ್ತಲೇ ಚಿತ್ರ ತನ್ನಲ್ಲಿ ತೀವ್ರತೆ ಪಡೆದುಕೊಳ್ಳುತ್ತದೆ.

ಬಂಧನಕ್ಕೆ ಒಳಗಾದ ಶಾಂತಿಯನ್ನು ಬಿಡುಗಡೆಗೊಳಿಸಬಹುದು. ಅದು ಸಮರನಿಂದ ಸಾಧ್ಯ. ಏಕೆಂದರೆ ಬಿಡುಗಡೆಗಾಗಿ ಬಾಗಿಲಿದೆ. ಇದು ಆಶಯ. ಆದರೆ, ಬಂಧನಕ್ಕಾಗಿಯೇ ಅಲ್ಲಿ ಬೀಗ ಬಂದೂಕುಗಳಿವೆ, ಇದು ವಾಸ್ತವ. ಆದರೂ ಸಮರನ ಸಹಾಯದಿಂದ ಬಂಧನದಿಂದ ತಪ್ಪಿಸಿಕೊಳ್ಳುವ 'ಶಾಂತಿ' ಹಸಿರು ವನದಲ್ಲಿ ನುಗ್ಗಿ ಬರುತ್ತಾಳೆ. ಆದರೆ ಶಾಂತಿಗೆ ಅಲ್ಲಿಯೂ ಸಮಾಧಾನವಿಲ್ಲ. ಅಲ್ಲಿಯೂ ಹುಲಿ, ಸಿಂಹ, ಆನೆ, ತೋಳ, ಕರಡಿಗಳ ಗುಟುರು ಆತಂಕ ಹುಟ್ಟಿಸುತ್ತವೆ. ಇದರಿಂದ ದಿಕ್ಕೆಟ್ಟ 'ಶಾಂತಿ' ಅಲ್ಲಿಂದ ಮತ್ತೊಂದು ಕಡೆ, ಮತ್ತೊಂದರಿಂದ ಇನ್ನೊಂದು ಕಡೆ ಓಡುತ್ತಾಳೆ, ಎಡವುತ್ತಾಳೆ, ಬೀಳುತ್ತಾಳೆ, ಏಳುತ್ತಾಳೆ. ಕೊನೆಗೆ ಕೊರಗುತ್ತಾಳೆ, ಕಣ್ಣೀರಿಡುತ್ತಾಳೆ. ಯಾರೂ ಇಲ್ಲ. ಏಕೆಂದರೆ, ಇದ್ದೊಬ್ಬ ಸಮರನನ್ನು ಆಗಲೇ ಉಗ್ರಗಾಮಿ ಕೊಂದುಹಾಕಿದ್ದಾನೆ. ಹಾಗಾಗಿ ಶಾಂತಿಗೆ ಈಗ ಆಪ್ತರು, ಹತ್ತಿರದವರು ಯಾರೂ ಇಲ್ಲ. ದಿಕ್ಕುಗಳು ಬದಲಾಗಿವೆ, ದಾರಿಗಳು ಹದಗೆಟ್ಟಿವೆ. ಯಾವ ದಿಕ್ಕು ಎತ್ತ ದಾರಿ ಏನೂ ಗೊತ್ತಿಲ್ಲ. ಶಾಂತಿಯ ಕಾರು ಮಾತ್ರ ಈ ಹದಗೆಟ್ಟ ರಸ್ತೆ ಮೇಲೆ ವಾಯು ವೇಗದಲ್ಲಿ ಹರಿಯುತ್ತಿದೆ. ಜೀವ ಉಳಿಸಿಕೊಳ್ಳಬೇಕೆಂದು ಶಾಂತಿ; ಜೀವ ತೆಗೆಯಬೇಕೆಂದು ಉಗ್ರಗಾಮಿ. ಇವರ ನಡುವಿನ ಈ ಹಣಾಹಣಿಯನ್ನು ಬರಗೂರರು ಬಹು ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಇದನ್ನು ನೋಡಿದ ಯಾರಾದರೂ ತಲೆದೂಗಲೇ ಬೇಕಾದುದು. ಇಂಥ ಹಣಾಹಣಿಯನ್ನು ಸಿನಿಮಾದ ಪರಿಭಾಷೆಯಲ್ಲಿ ಹೇಳುವುದಾದರೆ ಇದು ಚಿತ್ರದ ಕೊನೆಯ ಕ್ಲೈಮ್ಯಾಕ್ಸ್. ಇನ್ನೇನು ಉಗ್ರಗಾಮಿ ತನ್ನ ಮೇಲೆ ದಾಳಿ ಮಾಡುತ್ತಾನೆನ್ನುವಷ್ಟರಲ್ಲೇ 'ಶಾಂತಿ' ಕೈಯೊಳಗಿನ ಪಿಸ್ತೂಲು ಉಗ್ರಗಾಮಿ ಕಡೆ ಗುಡುಗುತ್ತದೆ; ಅವನನ್ನು ಹೊಡೆದುರುಳಿಸುತ್ತದೆ. ಅಲ್ಲಿಗೆ ಶಾಂತಿ ಕೊನೆಗೂ ಗೆದ್ದು ಬಿಡುತ್ತಾಳೆ; ಅಲ್ಲಲ್ಲ, ಬರಗೂರರಲ್ಲಿ ಬದುಕಿಬಿಡುತ್ತಾಳೆ.

ಈ ಮೇಲಿನ ಎಲ್ಲಾ ನೆಲೆಗಳಿಂದ ನೋಡಿದರೂ 'ಶಾಂತಿ' ಸಿನಿಮಾ ಅದ್ಭುತ ಪ್ರಯೋಗಗಳನ್ನು ಅಳವಡಿಸಿಕೊಂಡಿದೆ. ಕಾರಣ ಮತ್ತೆ ಹೇಳುವುದಾದರೆ, ಇದು ಏಕಪಾತ್ರ ಚಿತ್ರ. ಇಲ್ಲಿ ಬಣ್ಣ, ಭಾಷೆ, ಸದ್ದು, ಸಂಕಲ್ಪ, ಭಾವ, ಬೇಕು, ಬೇಡಗಳನ್ನೆಲ್ಲ ತುಂಬುವಲ್ಲಿ ಸವಾಲಿತ್ತು. ಏಕೆಂದರೆ ಪಕ್ಕದಲ್ಲಿ ಪಾತ್ರವಿಲ್ಲದಿದ್ದರೆ ಮುಖ್ಯಪಾತ್ರಕ್ಕೆ ಮೌನವೇ ಗತಿ. ಅದಕ್ಕೆ ಚಲನೆ ಸಿಗುವುದು ಅಸಾಧ್ಯದ ಮಾತು. ಆದರೆ, ಇಲ್ಲಿ ಮಾತಿಗೆ, ಮೌನಕ್ಕೆ, ವಿವೇಕ ವಿಶ್ಲೇಷಣೆಗೆ ಚಲನೆ ಸಿಕ್ಕಿರುವುದಕ್ಕೆ ಬರಗೂರರ ವಿಶಿಷ್ಟ ಪ್ರತಿಭೆಯೇ ಕಾರಣ. ಸಿಂಬಲ್‌ಗಳ ಮೂಲಕ ಚಿತ್ರದುದ್ದಕ್ಕೂ ಪ್ರಖರವಾದ ಸಂಚಲನೆ ತರುತ್ತಾರೆ. ಜೊತೆಗೆ ಸಾಧ್ಯವಾದ ಕಡೆ ವಸ್ತು, ವಿನ್ಯಾಸ, ವಿಚಾರಗಳ ಮೂಲಕ ಶಾಂತಿಯ ಪಾತ್ರವನ್ನು ಜೀವಂತವಾಗಿಡುವಲ್ಲಿ ನಿರ್ದೇಶಕರು ಪ್ರಜ್ಞಾಪೂರ್ವಕವಾಗಿಯೇ ಪ್ರಯತ್ನಿಸಿದ್ದಾರೆ. ನವಿರಾಗಿ ರಮಿಸುವ ಹಂಸಲೇಖರ ಸಂಗೀತ, ವಿಶಿಷ್ಟವಾಗಿ ಚಿತ್ರಿಸುವ ಆದವಾನಿ ನಾಗರಾಜ ಅವರ ಛಾಯಾಗ್ರಹಣ ಅರ್ಥಪೂರ್ಣವಾಗಿ ಮೂಡಿಬಂದಿವೆ.

ಒಟ್ಟಾರೆ, ಪ್ರೊ|| ಬರಗೂರು ಅವರ ಈ 'ಶಾಂತಿ'ಗೆ ಜಾಗತಿಕ ಮಹತ್ವವಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಕತೆ, ಗೀತೆ, ಚಿತ್ರಕತೆ, ಸಂಭಾಷಣೆ ಮತ್ತು ನಿರ್ದೇಶನದ ಜವಾಬ್ದಾರಿಗಳನ್ನೆಲ್ಲ ನಿರ್ವಹಿಸಿರುವ ಬರಗೂರರು ಇಲ್ಲಿ ಸಮರ್ಥವಾಗಿ ಮೂಡಿಬಂದಿದ್ದಾರೆ.

ಡಾ. ರಂಗರಾಜ ವನದುರ್ಗ
ಕನ್ನಡ ರೀಡರ್, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ



# ಅನನ್ಯ ಪ್ರತಿಭೆ ಮಾನವೀಯ ಕಾಳಜಿಗಳ ಅಪೂರ್ವ ಸಂಗಮ ಬ್ರ್ಯಾಂಡೊ

ಬಹುಶಃ ಈ ತಲೆಮಾರಿನ ಅತ್ಯಂತ ಪ್ರಭಾವಶಾಲಿ ನಟ ಮರ್ಲನ್ ಬ್ರ್ಯಾಂಡೊ ಮೊನ್ನೆ ಲಾಸ್ ಏಂಜಲಿಸ್‌ನಲ್ಲಿ ತೀರಿಕೊಂಡಿದ್ದಾನೆ. ತನ್ನ ಎಂಬತ್ತನೇ ವಯಸ್ಸಿನಲ್ಲಿ ಕಣ್ಣುಮುಚ್ಚಿದ ಈ ಅಪರೂಪದ ಕಲಾವಿದನ ಬಗ್ಗೆ ಈ ಸಂದರ್ಭದಲ್ಲಿ ಪ್ರಕಟವಾಗುವ ಬಹುತೇಕ ಶ್ರದ್ಧಾಂಜಲಿ ವ್ಯಕ್ತಿಚಿತ್ರಗಳಲ್ಲಿ ಅವನ ದೈತ್ಯಪ್ರತಿಭೆ, ನಟನಾಶೈಲಿ, ತಿಕ್ಕಲುತನ, ವೃತ್ತಿಯಲ್ಲಿನ ಏಳುಬೀಳುಗಳು, ಬದುಕಿನಲ್ಲಿ ಘಟಿಸಿದ ದುರಂತಗಳು ಇವೇ ಹೆಚ್ಚಾಗಿ ಕಾಣಬರುವುದು ಸಹಜ. ಆದರೆ ಅದಕ್ಕೂ ಮಿಗಿಲಾಗಿ ಅವನ ಇಡೀ ವ್ಯಕ್ತಿತ್ವ ಮತ್ತು ಜನಪರ ಮನೋಧರ್ಮದ ಇನ್ನೊಂದು ಮಗ್ಗುಲನ್ನು ಪರಿಚಯಿಸುವುದೂ ಎಲ್ಲ ಅಂಕಣಕಾರರ ವಿಮರ್ಶಕರ ಗುರುತರ ಜವಾಬ್ದಾರಿಯಾಗಿದೆ.

ಅನೇಕ ಘಟ್ಟಗಳಲ್ಲಿ ಬ್ರ್ಯಾಂಡೊನ ಬದುಕು ದುರಂತಮಯವಾದದ್ದು ನಿಜ. ಆದರೆ, ಹಾಲಿವುಡ್ ಆಗಲಿ ಅಮೆರಿಕದ ಇತರೆ ಸಿನಿಮಾ ಸಮುದಾಯವಾಗಲಿ ಅವನ ಪ್ರಚಂಡ ಪ್ರತಿಭೆಯ ನೆಲೆಗಳನ್ನು ಕಂಡುಕೊಳ್ಳಲು ವಿಫಲವಾದದ್ದು ಇನ್ನೂ ಹೆಚ್ಚು ದುರಂತಮಯ. ವಕ್ರದೃಷ್ಟಿ, ಸಂಶಯ, ಸಣ್ಣತನ ಮತ್ತು ಕಾಮಾಲೆ ಕಣ್ಣುಗಳಿಂದ ವ್ಯವಹರಿಸುವ ಅಲ್ಲಿನ ಚಿತ್ರಮಾಧ್ಯಮದ ಗುತ್ತಿಗೆದಾರರಿಂದಾಗಿ ಇನ್ನೂ ಅನೇಕ ಪ್ರಸಿದ್ಧ ಕಲಾವಿದರ ವೃತ್ತಿಜೀವನಕ್ಕೂ ಅಡ್ಡಿ ಆತಂಕಗಳು ಬಂದೊದಗಿದ ಸನ್ನಿವೇಶಗಳಿವೆ. ಚಾಪ್ಲಿನ್, ಪಾಲ್ ರೋಬ್ಸನ್ ಅಂಥವರೂ ಈ ಸಾಲಿಗೆ ಸೇರುತ್ತಾರೆ.

ಬ್ರ್ಯಾಂಡೊನ ವೈಯಕ್ತಿಕ ಲೋಪದೋಷಗಳು ಏನೇ ಇದ್ದಿರಬಹುದು. ಆದರೆ ನಿರ್ದೇಶಕರು, ನಿರ್ಮಾಪಕರು ಮತ್ತು ಅವನಿಗೂ ತಲೆದೋರುತ್ತಿದ್ದ ಮನಸ್ತಾಪಗಳಿಗೆ ಇವು ಯಾವುವೂ ಕಾರಣವಲ್ಲ. ಆರ್ಸನ್ ವೆಲ್ಸ್, ಮರ್ಲಿನ್ ಮನ್ರೋ ಇಬ್ಬರಿಗೂ ತಮ್ಮ ವೃತ್ತಿಜೀವನದ ಆರಂಭದಲ್ಲಿಯೇ ಈ ಬಗೆಯ ಆಘಾತಗಳು ಹೇಗೆ ಸಂಭವಿಸಿದವೋ ಹಾಗೆಯೇ ಬ್ರ್ಯಾಂಡೊನ ಬದುಕಿನಲ್ಲಿಯೂ ಜರುಗಿತು. ವಂಚನೆ, ಅಪ್ರಾಮಾಣಿಕತೆಗಳ ವಿರುದ್ಧ ಆತ ಸೆಟೆದುನಿಲ್ಲುತ್ತಿದ್ದ. ಅಲ್ಲಿನ ದುರ್ವ್ಯವಹಾರಗಳಿಗೆ ಹೊಂದಿಕೊಂಡು ಬಾಳಲು ಅಸಮರ್ಥನಾಗಿದ್ದ.

**ಎಸ್. ಸುರೇಂದ್ರ**

ಬ್ರ್ಯಾಂಡೊ ಹುಟ್ಟಿದ್ದು ನೆಬ್ರಾಸ್ಕಾದ ಒಮಾಹಾದಲ್ಲಿ, ಇಸವಿ ೧೯೨೪. ವೈವಾಹಿಕ ಜೀವನದುದ್ದಕ್ಕೂ ಜಗಳವಾಡುತ್ತಿದ್ದ ತಂದೆ ತಾಯಿಯರ ನಡುವೆ ಬಾಳಲಾಗದೆ ಹತಾಶನಾಗಿ ತನ್ನ ಹತ್ತೊಂಬತ್ತನೆ ವಯಸ್ಸಿಗೇ ಹುಚ್ಚನಂತಾಗಿದ್ದ. ಅಕ್ಕನ ಕರೆಗೆ ಓಗೊಟ್ಟು ೧೯೪೩ರಲ್ಲಿ ನ್ಯೂಯಾರ್ಕ್‌ಗೆ ಬಂದ. ೧೯೪೪ರಲ್ಲಿ ಸ್ಕ್ಯಾಂಡಿನೇವಿಯಾದ ವಲಸೆಗಾರರ ಕುರಿತ 'ಐ ರಿಮೆಂಬರ್ ಮಾಮಾ' ಎಂಬ ನಾಟಕದಲ್ಲಿ ಸಿಕ್ಕ ಅವಕಾಶ ಅವನ ಜೀವನದ ದಿಕ್ಕನ್ನೇ ಬದಲಾಯಿಸಿತು. ನಂತರ ಸಾಗಿದ್ದು ಹೊಸ ಹಾದಿಯಲ್ಲಿ. ಸ್ಟೆಲ್ಲಾ ಆಡ್ಲರ್ ಎಂಬ ಶಿಕ್ಷಕಿಯ ಮಾರ್ಗದರ್ಶನದಲ್ಲಿ ಲಭಿಸಿದ ನಾಟಕ ಅಭಿನಯ ತರಬೇತಿ ಅವನಲ್ಲಿ ಎಲ್ಲಿಲ್ಲದ ಆತ್ಮವಿಶ್ವಾಸ ಮೂಡಿಸಿತು. ತನ್ನನ್ನು ತಾನೇ ಕಂಡುಕೊಂಡದ್ದು ಬ್ರ್ಯಾಂಡೊಗೆ ಒಂದು ಚೇತೋಹಾರಿ ಅನುಭವ. ಅನಂತರ, ಆಗಷ್ಟೆ ಜನಪ್ರಿಯವಾಗುತ್ತಿದ್ದ ನೈಜತೆ ಸ್ವಾಭಾವಿಕತೆಗೆ (ರಿಯಲಿಸಂ) ಹೆಚ್ಚು ಒತ್ತುಕೊಡುತ್ತಿದ್ದ 'ಮೆಥಡ್' ಶೈಲಿಯನ್ನು ಅಳವಡಿಸಿಕೊಂಡು ಅಭಿನಯದಲ್ಲಿ ತೊಡಗಿಕೊಂಡ. ರಷ್ಯಾದ ಸೃಜನಶೀಲ ನಾಟಕಕಾರ ನಿರ್ದೇಶಕ ಸ್ಟಾನಿಸ್ಲಾವ್‌ಸ್ಕಿ ಈ ಶೈಲಿಯ ರೂವಾರಿ. ಯಾವುದೇ ಶೈಲಿಯ ಅಭಿನಯಕಲೆಗೂ ನಿರಾಯಾಸವಾಗಿ ಹೊಂದಿಕೊಳ್ಳುವ ಸಾಮರ್ಥ್ಯ ಬ್ರ್ಯಾಂಡೊನದು. 'ಇರುವಂತೆಯೇ ಇರು. ನಿನ್ನ ಸ್ವಭಾವಕ್ಕೆ ತಕ್ಕಂತೆ ನಟಿಸು. ಸ್ವತಃ ಅನುಭವಿಸದೆ ಯಾವುದೇ ಪಾತ್ರವನ್ನೂ ಅರ್ಥಪೂರ್ಣವಾಗಿಸಲಾರೆ'. ಎಂದು ಆಡ್ಲರ್ ಹೇಳುತ್ತಿದ್ದ ಮಾತನ್ನು ತನ್ನ ವೃತ್ತಿಜೀವನದಲ್ಲಿ ಅಕ್ಷರಶಃ ಪಾಲಿಸಿದ. ಅಭಿನಯಕ್ಕೆ ಹೊಸ ಅರ್ಥ ಕಲ್ಪನೆ ಮತ್ತು ಭಾಷೆಯ ಆಚೆಗಿನ ಮೌನದ ನಿಗೂಢತೆಯ ಅನ್ವೇಷಣೆಯತ್ತ ಹೆಜ್ಜೆಹಾಕಿದ.

ಟೆನಿಸಿ ವಿಲಿಯಮ್ಸ್‌ನ ''ಎ ಸ್ಟ್ರೀಟ್ ಕಾರ್ ನೇಮ್ಡ್ ಡಿಸೈರ್'' ನಾಟಕದಲ್ಲಿ ಸ್ಟಾನ್ಲಿ ಕೊವಾಲ್‌ಸ್ಕಿ ಎಂಬ ಕ್ರೂರಿಯ ಪಾತ್ರಾಭಿನಯದಿಂದ ಉತ್ತಮ ನಟನೆಂದು ಹೆಸರು ಗಳಿಸಿದ. ಫ್ರೆಡ್ ಝಿನೆಮನ್ ನಿರ್ದೇಶಿಸಿದ 'ದಿ ಮೆನ್' ಮೂಲಕ ಚಿತ್ರರಂಗಕ್ಕೆ ಕಾಲಿಟ್ಟ ಬ್ರ್ಯಾಂಡೋ 'ಎ ಸ್ಟ್ರೀಟ್....ಡಿಸೈರ್' ನಾಟಕದ ಚಲನಚಿತ್ರ ರೂಪಾಂತರದಲ್ಲಿ ನಟಿಸಿ ಅಪಾರ ಯಶಸ್ಸು ಗಳಿಸಿದ. ಈ ಚಿತ್ರದ ಖ್ಯಾತ ನಿರ್ದೇಶಕ ಎಲಿಯ ಕಾಗನ್ ಜೊತೆಗಿನ ಒಡನಾಟ ಮುಂದುವರಿದು 'ವಿವಾ ಝಪಾಟಾ' (೧೯೫೨), 'ಆನ್ ದಿ ವಾಟರ್ ಫ್ರಂಟ್' (೧೯೫೪) ಚಿತ್ರಗಳ ಮೂಲಕ ಜಗತ್ಪ್ರಸಿದ್ಧನಾದ.

ಜನಪರ ಚಿಂತನೆಗಳ ಬಗ್ಗೆ ಒಲವು, ಅಮೆರಿಕದ ಕಮ್ಯುನಿಸ್ಟ್ ಪಕ್ಷದ ಸದಸ್ಯರೊಡನೆ ನಿಕಟ ಸಂಬಂಧವನ್ನಿಟ್ಟುಕೊಂಡಿದ್ದ ಕಾಗನ್ ಒಂದು ಘಟ್ಟದಲ್ಲಿ ಬಲಪಂಥೀಯ ರಾಜಕೀಯ ಒತ್ತಡಗಳಿಗೆ ಮಣಿದು ಪಕ್ಷದ ಸದಸ್ಯರ ವಿರುದ್ಧವೇ ಸಾಕ್ಷಿ ನೀಡಿ ದ್ರೋಹವೆಸಗಿದ್ದು, ನಂತರ ಅವನ ಬ್ರ್ಯಾಂಡೊನ ಗೆಳೆತನ ಹಳಸಿಕೊಂಡದ್ದು ಬೇರೆಯೇ ಕತೆ.

'ಎ ಸ್ಟ್ರೀಟ್ ಕಾರ್ ನೇಮ್ಡ್ ಡಿಸೈರ್' ಕೆಲವರಿಗೆ ಒಂದು ಸಮಸ್ಯಾತ್ಮಕ ಚಿತ್ರವೆನಿಸಿದರೆ ಆಶ್ಚರ್ಯವೇನಿಲ್ಲ. ಭಾವುಕ ಸನ್ನಿವೇಶಗಳು, ನೈಜ ಭಾವಮುದ್ರೆಗಳಿಂದ ಮನಮುಟ್ಟುವ ಈ ಚಿತ್ರಕ್ಕೆ ಬ್ರ್ಯಾಂಡೊ ಮತ್ತು ಕಿಮ್ ಹಂಟರ್ ಜೀವ ತುಂಬಿದ್ದಾರೆ. ಕಾಗನ್‌ನ ನಿರ್ದೇಶನಾ ಸಾಮರ್ಥ್ಯವು ಚಿತ್ರವನ್ನು ನೋಡುತ್ತಿದ್ದಂತೆ ಕ್ರಮೇಣ ತೆರೆದುಕೊಳ್ಳುತ್ತಾ ಹೋಗುತ್ತದೆ.

''ವಿವಾ ಝಪಾಟಾ' ಒಂದು ಅರ್ಥದಲ್ಲಿ ಕಾಗನ್‌ನ ಚಿತ್ರಗಳಲ್ಲೆಲ್ಲಾ ಅತಿ ಮುಖ್ಯವಾದುದೆನಿಸುತ್ತದೆ. ಈ ಚಿತ್ರದಲ್ಲಿ ಬ್ರ್ಯಾಂಡೋನ ಅಭಿನಯ ಅದ್ಭುತ. ಕೆಲವು ವೈಪರೀತ್ಯಗಳು ದುರ್ಬಲ ಸನ್ನಿವೇಶಗಳು ಇದ್ದರೂ ಜಾನ್ ಸ್ಟೀನ್‌ಬೆಕ್ ರಚಿಸಿದ ಕಥಾವಸ್ತು, ಸಂಭಾಷಣೆ, ಉತ್ತಮ ತಾಂತ್ರಿಕತೆ ಹಾಗೂ ಜಾಣ್ಮೆ ಚಿತ್ರದ ಶೋಭೆಯನ್ನು ಹೆಚ್ಚಿಸಿವೆ. ಕ್ರಾಂತಿಕಾರಿಯೊಬ್ಬ ಎಡೆಬಿಡದ ಹೋರಾಟಗಳ ಮೂಲಕ ಗದ್ದುಗೆಯೇರಿ ಹೆಚ್ಚುಕಾಲ ಮುಂದುವರಿಯಲಾಗದೆ ತಾನೇ ಅಧಿಕಾರವನ್ನು ತ್ಯಜಿಸಿ ದೂರಸರಿಯುವ ಕಲ್ಪನೆ ನೋಡುಗರಲ್ಲಿ ವಿಚಿತ್ರ ಭಾವನೆಗಳನ್ನು ಮೂಡಿಸುತ್ತದೆ. ಸಾಮಾಜಿಕ-ರಾಜಕೀಯ ದೃಷ್ಟಿಕೋನಗಳಿಂದ 'ವಿವಾ ಝಪಾಟಾ'ವನ್ನು ಸೂಕ್ಷ್ಮವಾಗಿ ವಿಮರ್ಶಿಸಿದರೆ ಆ ಚಿತ್ರ ಕಾಗನ್ ಕಮ್ಯುನಿಸ್ಟ್ ವಿರೋಧಿಯಲ್ಲದಿದ್ದರೂ ಅವನು ಸ್ಟಾಲಿನ್ ವಿರೋಧಿ ಎಂಬ ಅಂಶವನ್ನು ಸ್ಪಷ್ಟವಾಗಿ ಬಿಂಬಿಸುತ್ತದೆ.

ಪ್ರತಿಗಾಮಿ ಮೌಲ್ಯಗಳು ಮತ್ತು ಸ್ವಾರ್ಥತೆಯ ಲೇಪವಿರುವ ಅಂಶಗಳಿಂದ ಕೂಡಿರುವ 'ಆನ್ ದಿ ವಾಟರ್ ಫ್ರಂಟ್' ತನ್ನ ಕಥಾವಸ್ತುವಿನ ಗಟ್ಟಿತನದಿಂದ ಮತ್ತು ಬ್ರ್ಯಾಂಡೊ ಹಾಗೂ ಇವಾ ಮೇರಿ ಸೈಂಟ್ ಇಬ್ಬರ ಶ್ರೇಷ್ಠ ಅಭಿನಯದಿಂದ ಮೆಚ್ಚುಗೆ ಗಳಿಸುತ್ತದೆ. 'ಆನ್ ದಿ ವಾಟರ್ ಫ್ರಂಟ್' ಕಮ್ಯುನಿಸ್ಟರೊಡನೆ ಕಾಗನ್‌ಗೆ ಇದ್ದ ನಂಟು ಹಾಗೂ ಅಂದಿನ ವಾತಾವರಣವನ್ನು ನವಿರಾಗಿ ಸೂಚಿಸುತ್ತದೆ ಎನ್ನುವುದು ಗಮನಾರ್ಹ.

ತನ್ನ ಆತ್ಮಕಥೆ 'ಎ ಲೈಫ್'ನಲ್ಲಿ ಬ್ರ್ಯಾಂಡೊ, ಅವನ ಬಹುಮುಖ ಪ್ರತಿಭೆಯ ಬಗ್ಗೆ ಕಾಗನ್ ಅನೇಕ ಬಾರಿ ಪ್ರಶಂಸೆಯ ಮಾತುಗಳನ್ನಾಡಿದ್ದ ಎಂಬುದನ್ನು ಪ್ರಸ್ತಾಪಿಸಿದ್ದಾನೆ. ಕಾಗನ್ ಹೇಳುವಂತೆ, ಬ್ರ್ಯಾಂಡೊ ನಿರ್ದೇಶಕರ ಸೂಚನೆಗಳನ್ನೂ ಮೀರಿ ತನ್ನದೇ ಶೈಲಿಯಲ್ಲಿ ಮಾತು ಸಂಭಾಷಣೆ, ಭಾವಗಳಿಗೆ ಮತ್ತು ಪಾತ್ರಗಳಿಗೆ ಕಲ್ಪನೆಗೂ ಮೀರಿದ ಆಯಾಮಗಳನ್ನು ಸೃಷ್ಟಿಸುತ್ತಿದ್ದ. ಇಷ್ಟು ಹೇಳಬಹುದು, ಕಾಗನ್ ನಿರ್ದೇಶಕನಾಗಿ ಸಿನಿಮಾಗೆ ಎಷ್ಟು ಪ್ರಾಮುಖ್ಯನೆನಿಸುತ್ತಾನೋ ಅದಕ್ಕೂ ಹೆಚ್ಚಿನ ರೀತಿಯಲ್ಲಿ ಬ್ರ್ಯಾಂಡೊ ನಟನಾಗಿ ಅಭಿನಯ ಕಲೆಗೆ ಪ್ರಾಮುಖ್ಯನೆನಿಸುತ್ತಾನೆ.

ತೀರಾ ಸಾಧಾರಣ ಎನಿಸುವ 'ಡಿಸೈರಿ', 'ಗೈಸ್ ಅಂಡ್ ಡಾಲ್ಸ್', 'ದಿ ಟೀ ಹೌಸ್ ಆಫ್ ದಿ ಆಗಸ್ಟ್ ಮೂನ್'ನಂತಹ ಚಿತ್ರಗಳಲ್ಲಿನ ಪಾತ್ರಗಳಿಂದ ಹಿಡಿದು ಶೇಕ್ಸ್‌ಪಿಯರ್‌ನ 'ಜೂಲಿಯಸ್ ಸೀಸರ್'ನ ಮಾರ್ಕ್ ಆಂಟೋನಿ ಪಾತ್ರದವರೆಗೂ ತನ್ನ ಅಭಿನಯ ಕಲೆಯ ವೈಶಾಲ್ಯತೆಯಲ್ಲಿ ಬ್ರ್ಯಾಂಡೋ ವಿಜೃಂಭಿಸುತ್ತಾನೆ.

ಇದಿಷ್ಟೂ ಬ್ರ್ಯಾಂಡೊನ ಸಿನಿಮಾ ಬದುಕಿನ ಒಂದು ಕಿರುಪರಿಚಯ ಮಾತ್ರ.

ಪ್ರಗತಿಪರ ಚಿಂತಕರಿಗೆ, ಪ್ರಜ್ಞಾವಂತರಿಗೆ ಆಸಕ್ತಿ ಕುತೂಹಲ ಹುಟ್ಟಿಸುವುದು ಅವನಿಗಿದ್ದ ರಾಜಕೀಯ ಮತ್ತು ಸಾಮಾಜಿಕ ಬೆಳವಣಿಗೆಗಳ ಬಗೆಗಿನ ಕಾಳಜಿ, ಶೋಷಣೆಯ ವಿರುದ್ಧದ ಕೋಪ ಮತ್ತು ಕರಿಯರು, ರೆಡ್ ಇಂಡಿಯನ್ನರು, ಅಲ್ಲಿನ ಮೂಲನಿವಾಸಿಗಳ ಕುರಿತ ಮಾನವೀಯ ಅನುಕಂಪ.

ವಿವೇಕಯುತ ಪರಮಾಣುನೀತಿಯನ್ನು ಎಲ್ಲ ರಾಷ್ಟ್ರಗಳು ಪಾಲಿಸಬೇಕೆಂದು ಒತ್ತಾಯಿಸುವ ಸಂಸ್ಥೆಯನ್ನು (SANE) ಹುಟ್ಟುಹಾಕಲು ೧೯೫೮ರಲ್ಲಿ ಸಂಘಟಿಸಿದ ಸಭೆಯಲ್ಲಿ ಹೆನ್ರಿ ಫೋಂಡ, ಮರ್ಲಿನ್ ಮನ್ರೋ, ಆರ್ಥರ್ ಮಿಲ್ಲರ್, ಹಾಲಿ ಬೆಲಫೋಂಟೆ ಮತ್ತು ಓಸ್ಸಿ ಡೇವಿಸ್‌ರೊಡನೆ ಬ್ರ್ಯಾಂಡೊ ಭಾಗವಹಿಸಿದ. ಜಾನ್ ಕೆನೆಡಿಯ ಉಮೇದುವಾರಿಕೆಯನ್ನು ಅನುಮೋದಿಸಿ ೧೯೬೦ರಲ್ಲಿ ಕರೆಯಲಾಗಿದ್ದ ಡೆಮೋಕ್ರಟಿಕ್ ಪಕ್ಷದ ಸಮಾವೇಶದಲ್ಲಿ ಸಕ್ರಿಯವಾಗಿ ಪಾಲ್ಗೊಂಡ. ಅಂದಿನ ರಾಜಕೀಯ ಸನ್ನಿವೇಶದಲ್ಲಿ ಇವನ ಕೆನೆಡಿ ಪರ ನಿಲುವು ಎಷ್ಟರಮಟ್ಟಿಗೆ ಸರಿ ಎಂಬುದು ಇಂದಿಗೂ ಚರ್ಚಾಸ್ಪದವಾಗಿದೆ.

೧೯೬೪ರಲ್ಲಿ, ಅಮೆರಿಕದ ಕಪ್ಪು ಜನರ, ಹಿಂದುಳಿದವರ ನಾಗರಿಕ ಹಕ್ಕುಗಳಿಗಾಗಿ ಒತ್ತಾಯಿಸಿ ಮಾರ್ಟಿನ್ ಲೂಥರ್ ಕಿಂಗ್ ನಾಯಕತ್ವದಲ್ಲಿ ವಾಷಿಂಗ್‌ಟನ್‌ನಲ್ಲಿ ನೆರೆದಿದ್ದ ಐತಿಹಾಸಿಕ ಸಮಾವೇಶದಲ್ಲಿ ಬ್ರ್ಯಾಂಡೊ ಮುಂದಿನ ಸಾಲಿನಲ್ಲಿದ್ದ. ಅದಿರಲಿ, ಒಮ್ಮೆ ಲಂಡನ್‌ಗೆ ಭೇಟಿಯಿತ್ತ ಸಂದರ್ಭದಲ್ಲಿ ದಕ್ಷಿಣ ಆಫ್ರಿಕಾದ ರಾಜಕೀಯ ಖೈದಿಗಳ ಬಿಡುಗಡೆಗಾಗಿ ಸಂಘಟಿಸಿದ್ದ ಧರಣಿ ಕಾರ್ಯಕ್ರಮದಲ್ಲಿ ಖುದ್ದಾಗಿ ಭಾಗವಹಿಸಿ ತನ್ನ ಬೆಂಬಲ ಘೋಷಿಸಿದ. ದಕ್ಷಿಣ ಆಫ್ರಿಕಾದ ಬಿಳಿಯರು ನಿರ್ಮಿಸಿದ ಚಲನಚಿತ್ರಗಳನ್ನು ಬಹಿಷ್ಕರಿಸಬೇಕೆಂಬ ಮನವಿಯ ವ್ಯಾಪಕ ಪ್ರಚಾರಕ್ಕೆ ತನ್ನ ಎಲ್ಲ ಸಹಕಾರ ನೀಡಿದ.

ಅಮೆರಿಕದ ಮೂಲನಿವಾಸಿಗಳ ಹಕ್ಕುಗಳ ಹೋರಾಟಕ್ಕೆ ಎಲ್ಲ ತ್ಯಾಗಕ್ಕೂ ಸಿದ್ಧ ಎಂದವನು ಒಮ್ಮೆ ಜೈಲುವಾಸವನ್ನೂ ಅನುಭವಿಸಿದ ಬ್ರ್ಯಾಂಡೊ ಆ ಚಳುವಳಿಯ ನೇತಾರ ಡೆನಿಸ್ ಬ್ಯಾಂಕ್ಸ್‌ನನ್ನು ಪೊಲೀಸರು ಬಂಧಿಸಿದಾಗ ಅವನ ಬಿಡುಗಡೆಗಾಗಿ ಜಾಮೀನು ನೀಡಿದ್ದನೆನ್ನುವುದು ಎಷ್ಟು ಜನರಿಗೆ ಗೊತ್ತಿದೆ ?

ತನ್ನ ಪುರೋಗಾಮಿ ನಿಲುವುಗಳಿಂದಾಗಿ ಬ್ರ್ಯಾಂಡೊ ಎಷ್ಟೋ ಚಿತ್ರಗಳ ಕಥಾವಸ್ತು, ಪಾತ್ರ ನಿರೂಪಣೆ ಒಗ್ಗದೆ ತಿರಸ್ಕರಿಸಿದ್ದಿದೆ, ಪ್ರತಿಭಟಿಸಿದ್ದಿದೆ. ಲೆವಿಸ್ ಮೈಲ್‌ಸ್ಟೋನ್‌ನ 'ಮ್ಯೂಟನಿ ಆನ್ ದಿ ಬೌಂಟಿ' ಈ ನಿಟ್ಟಿನಲ್ಲಿ ಒಂದು ಉದಾಹರಣೆ. ಈ ಮನೋಧರ್ಮವೇ ಅವನನ್ನು ಆರ್ಥರ್ ಪೆನ್‌ನ 'ದಿ ಚೇಸ್' (೧೯೬೬), ಜಾನ್ ಹಸ್ಟನ್‌ನ 'ದಿ ರಿಫ್ಲೆಕ್ಷನ್ ಇನ್ ಎ ಗೋಲ್ಡನ್ ಐ', ಚಾಪ್ಲಿನ್‌ನ 'ಎ ಕೌಂಟೆಸ್ ಫ್ರಮ್ ಹಾಂಕ್‌ಕಾಂಗ್' ಮತ್ತು ಇಟಲಿಯ ಎಡಪಂಥೀಯ ನಿರ್ದೇಶಕ ಗಿಲ್ಲೊ ಪಾಂಟೋಕೋರ್ವೊನ 'ಬರ್ನ್'ನಂತಹ ಚಿತ್ರಗಳತ್ತ ಕೊಂಡೊಯ್ದಿತು. 'ಬ್ರ್ಯಾಂಡೊ ಸಿನಿಮಾ ಪ್ರಪಂಚದ ಒಬ್ಬ ಅಸಾಧಾರಣ ಪ್ರತಿಭಾಶಾಲಿ, ಅಸಾಮಾನ್ಯ ನಟ. ನಿರ್ದೇಶಕರೊಂದಿಗೆ ಸಹಕರಿಸಿ ನಟಿಸಿದರೂ ಅವನೊಬ್ಬ ಅಸಾಧ್ಯ ಸಿಡುಕ'! ಎಂಬ ಪಾಂಟೋಕೋರ್ವೊನ ಮಾತುಗಳು ನಿಜವೇ.

೧೯೬೦-೭೦ರ ದಶಕಗಳು ಅಮೆರಿಕದ ಕೆಲವು ವಲಯಗಳಲ್ಲಿ ಹೊಸ ಅಲೆಯ ಸಾಮಾಜಿಕ ಸೈದ್ಧಾಂತಿಕ ಚಿಂತನೆಗಳು ಪ್ರಚಲಿತವಾಗುತ್ತಿದ್ದ ಕಾಲ. ಬ್ರ್ಯಾಂಡೊ ಆ ಪ್ರಕ್ರಿಯೆಗೆ ಸ್ಪಂದಿಸಿದ. ಈ ಸಂದರ್ಭದಲ್ಲಿ, 'ಲಾಸ್ಟ್ ಟ್ಯಾಂಗೋ ಇನ್ ಪ್ಯಾರಿಸ್', 'ಅಪೊಕ್ಯಾಲಿಪ್ಸ್ ನೌ'ಗಳಂತಹ ಚಿತ್ರಗಳಿರಲಿ, 'ಗಾಡ್‌ಫಾದರ್'ನ ವಿಟೋ ಕೊರ್ಲಿಯೋನ್ ಪಾತ್ರದಲ್ಲಿ ನಟಿಸಲು ಆತ ಒಪ್ಪಿದ್ದರ ಹಿನ್ನೆಲೆ ಆ ಚಿತ್ರ ಅಮೆರಿಕದ ವ್ಯಾಪಾರವರ್ಗ ಮತ್ತು ಬೃಹತ್ ಕಾರ್ಪೊರೇಟ್ ಕಂಪನಿಗಳ ಬಗೆಗಿನ ಕಟು-ವಿಮರ್ಶೆಯಾಗಿತ್ತು ಎಂಬ ಕಾರಣದಿಂದ. 'ಗಾಡ್ ಫಾದರ್' ಕಾದಂಬರಿಯ ಕರ್ತೃ ಮಾರಿಯಾ ಪ್ಯೂಜೊವಿನ ಕಲ್ಪನೆಗೂ ಮೀರಿ ದಂಗುಬಡಿಸುವ ಅಭಿನಯದಿಂದ ಕೋರ್ಲಿಯೋನ್ ಪಾತ್ರವನ್ನು ಮೆರೆದಿದ್ದಾನೆ. ಮನ ಕಲಕುವ ಹಾಗೂ ಅನೇಕರನ್ನು ಬೆಚ್ಚಿಬೀಳಿಸುವ ಸಂಗತಿಯೆಂದರೆ, 'ಗಾಡ್‌ಫಾದರ್'ನ ತನ್ನ ಅಭಿನಯಕ್ಕೆ ಆಸ್ಕರ್ ದೊರೆತಿದ್ದರೂ ಪ್ರಶಸ್ತಿಪ್ರದಾನ ಸಮಾರಂಭಕ್ಕೆ ಬ್ರ್ಯಾಂಡೊ ಗೈರುಹಾಜರು! ಹಾಲಿವುಡ್‌ನಲ್ಲಿ ರೆಡ್ ಇಂಡಿಯನ್‌ರನ್ನು ಕೀಳಾಗಿ ನೋಡುತ್ತಿದ್ದುದನ್ನು ಧಿಕ್ಕರಿಸಿ ತನ್ನ ಬದಲು ರೆಡ್ ಇಂಡಿಯನ್ ಮಹಿಳೆಯೊಬ್ಬಳನ್ನು ಕಳಿಸಿದ ತನ್ನ ಪ್ರತಿಭಟನಾ ಸಂದೇಶವನ್ನು ಓದಲು !

ಅಮೆರಿಕದ ಬಂಡವಾಳಶಾಹಿ ವ್ಯವಸ್ಥೆಯ ಮತ್ತು ಅಲ್ಲಿನ ಸರಕಾರವು ತನ್ನದೇ ಪ್ರಜೆಗಳ ವಿರುದ್ಧ ಹಾಗೂ ವಿದೇಶಗಳಲ್ಲಿ ನಡೆಸುತ್ತಿದ್ದ ಅಮಾನವೀಯ ಕೃತ್ಯಗಳ ಕಟ್ಟಾ ವಿರೋಧಿಯಾಗಿದ್ದ ಬ್ರ್ಯಾಂಡೊ ವಿಯಟ್ನಾಂ ವಿಮೋಚನಾ ಹೋರಾಟಗಾರರ ಹಿತೈಷಿ. ಅಲ್ಲದೆ ಬ್ಲಾಕ್ ಪ್ಯಾಂಥರ್ ಚಳುವಳಿಯ ನಾಯಕ ನ್ಯೂಟನ್‌ನ ರಕ್ಷಣೆಗಾಗಿ ಹಮ್ಮಿಕೊಂಡ ಹೋರಾಟಗಳಿಗೆ ಒಕ್ಕೊರಲಿನಿಂದ ಬೆಂಬಲ ಘೋಷಿಸಿದ್ದ.

ವಿಚಿತ್ರವೆಂದರೆ, ಕೊನೆಕೊನೆಗೆ ಏಕೋ ಏನೋ ಚಿತ್ರೋದ್ಯಮದಿಂದ, ತನ್ನ ವೃತ್ತಿಯಿಂದ, ಸುತ್ತಮುತ್ತಲವರಿಂದ, ಎಲ್ಲರಿಂದ ದೂರವಾಗಬಯಸಿದ, ಬ್ರ್ಯಾಂಡೊ. ಹಣದ ಬಗ್ಗೆ ನಿರಾಸಕ್ತಿ ಮೂಡಿತು.

ಬ್ರ್ಯಾಂಡೊ ಎಂದರೆ ಹೀಗೆ... ಇವನದು ವೈಚಿತ್ರ್ಯಗಳ, ಆಂತರಿಕ ತುಮುಲಗಳ ನಿಗೂಢ ವ್ಯಕ್ತಿತ್ವ !

ಈತನದು ಒಂದು ಬಗೆಯ ದ್ವಿಮುಖ ವ್ಯಕ್ತಿತ್ವ :

ಒಬ್ಬ ಬ್ರ್ಯಾಂಡೊ – ಅಭಿಮಾನಿಗಳಲ್ಲಿ ತನ್ನ ಬಗ್ಗೆ ಅನುಕಂಪ, ಹೆಮ್ಮೆ, ಪ್ರೀತಿ, ದಿಗ್ಭ್ರಮೆ, ಜಿಗುಪ್ಸೆಗಳನ್ನು ಹುಟ್ಟಿಹಾಕುತ್ತಿದ್ದ ಅಸಾಮಾನ್ಯ ಕಲಾವಿದ.

ಇನ್ನೊಬ್ಬ ಬ್ರ್ಯಾಂಡೊ – ದುಷ್ಟ, ಭ್ರಷ್ಟ, ಜನವಿರೋಧಿ ಬಂಡವಾಳಶಾಹಿ ವ್ಯವಸ್ಥೆಯನ್ನು ಪ್ರತಿನಿಧಿಸುವ ಅಮೆರಿಕದ ಸಾಮ್ರಾಜ್ಯಶಾಹಿ ಆಡಳಿತಕ್ಕೆ ಧಿಕ್ಕಾರ ಹೇಳುವ ಪ್ರಜ್ಞಾವಂತ, ಪರಮಾಣುಶಕ್ತಿಯ ಸದ್ಬಳಕೆಗಾಗಿ ಕಾತರಿಸುವ ಶಾಂತಿಯೋಧ, ವಿಯೆಟ್ನಾಂ ಜನತೆ, ರೆಡ್ ಇಂಡಿಯನ್ನರು ಅಮೆರಿಕದ ಮೂಲನಿವಾಸಿಗಳು, ನೀಗ್ರೊಗಳು ಮತ್ತಿತರ ತುಳಿತಕ್ಕೊಳಗಾದವರ ಹೋರಾಟಕ್ಕೆ ಸ್ಪಂದಿಸಿ ಬೀದಿಗೆ ಇಳಿಯುವ ಸಾಮಾಜಿಕ - ರಾಜಕೀಯ ಕಾರ್ಯಕರ್ತ.

ಎಲ್ಲದರಿಂದ ಎಲ್ಲರಿಂದ ವಿಮುಖನಾಗಿ ದೂರ ಸರಿಯಬಯಸುತ್ತಿದ್ದ ಮರ್ಲನ್ ಬ್ರ್ಯಾಂಡೊ ಇಂದು ಬಹುದೂರ... ಬಹುದೂರ... ಸರಿದುಹೋಗಿದ್ದಾನೆ.

ನಮ್ಮೆಲ್ಲರ ಮಧ್ಯೆ ಬ್ರ್ಯಾಂಡೊ ಈಗ ನೆನಪು ಮಾತ್ರ....

ಎಸ್. ಸುರೇಂದ್ರ
ಸಂ. ೨೪, ೧ನೇ ಅಡ್ಡರಸ್ತೆ, ಕೆನರಾ ಬ್ಯಾಂಕ್ ಕಾಲೋನಿ
ಜಯನಗರ ಪೂರ್ವ, ಬೆಂಗಳೂರು - ೫೬೦ ೦೧೧



## ತಕ್ಕಡಿಗಳು

ಮತ್ತೆ ಕತ್ತಲು
ಆಳದಿಂದೆದ್ದ ತಕ್ಕಡಿಗಳು
ರಂಗಸ್ಥಳವೇರಿ ತಕಥೈ
ನರ್ತಿಸುತ್ತಾ ಬೆತ್ತಲು.

ಈಗೆಲ್ಲವೂ ತಲೆಕೆಳಗು
ಗೆದ್ದಲು ಹಿಡಿದ ಒಳಗು
ಬೊಟ್ಟಿಟ್ಟ ಭಾರದ ತಟ್ಟೆ
ಮೇಲೇರುತ್ತಲೇ ಕುಣಿಯುತ್ತದೆ.

ಖಾಲಿ ತಕ್ಕಡಿ ತಟ್ಟೆ
ಭಾರವಿಲ್ಲದೆಯೂ
ಸರ್ರನೆ ಕೆಳಗಿಳಿದು
ನೆಲದಲ್ಲೇ ಬಿದ್ದುಕೊಳ್ಳುತ್ತದೆ.

ತಪ್ಪುಗಳು ಸರಿಯೆನಿಸಿ
ಸರಿಗಳು ತಪ್ಪುಗಳಾಗಿ
ಬೆತ್ತಲಾಗುತ್ತಾ ಕುಣಿವ
ನಗ್ನಸತ್ಯಗಳು ಬೆಪ್ಪು-ತಕ್ಕಡಿಗಳು.

ತಪ್ಪು-ಸರಿಗಳ ಲೆಕ್ಕಹಿಡಿದು
ಕಾಡುವ ತಕ್ಕಡಿಗಳು
ಇರಲೂ ಬಿಡದ
ಇರದಿರಲೂ ಬಿಡದ ದ್ವಂದ್ವಗಳು !

ರೂಪ. ಹಾಸನ
ಸಂ. ೩೫೮೬, ಈಶ್ವರ ಬೀದಿ, ಹಾಸನ - ೫೭೩ ೨೦೧

**ಅಂ**ದು ರವೀಂದ್ರ ಕಲಾಕ್ಷೇತ್ರದಲ್ಲಿ ಮಕ್ಕಳದೇ ರಾಜ್ಯ. ಪ್ರೇಕ್ಷಕ ವರ್ಗದಲ್ಲಿ ಪೋಷಕರು, ಪಾರ್ಶ್ವದ ವಾದ್ಯ-ಸಂಗೀತಗಾರರಲ್ಲಿ ದೊಡ್ಡವರು ಇದ್ದರಷ್ಟೆ – ರಂಗದ ಮೇಲೆ ಮಕ್ಕಳ ಸೈನ್ಯದ್ದೇ ಮೆರವಣಿಗೆ.

'ಬೊಮ್ಮನಹಳ್ಳಿಯ ಕಿಂದರಿ ಜೋಗಿ'ಯನ್ನು ಕುವೆಂಪು ರಚಿಸಿದ್ದು ೧೯೨೬ರಷ್ಟು ಹಿಂದೆ. ರಾಬರ್ಟ್ ಬ್ರೌನಿಂಗ್ (೧೮೧೨-೮೯)ನ ಒಂದು ಕವಿತೆಯನ್ನು ತರಗತಿಯಲ್ಲಿ ನಾಟಕೀಯವಾಗಿ ಓದಿದ್ದನ್ನು ಕೇಳಿದ ಆರೇಳು ವರ್ಷಗಳ ನಂತರ, ಕಾಯಿಲೆಯಿಂದ ಗುಣಮುಖರಾಗುತ್ತಿದ್ದಾಗ ಒಂದು ದಿನ ನಾಲ್ಕೈದು ಗಂಟೆಗಳಲ್ಲಿ ಕುವೆಂಪು ಬರೆದುಬಿಟ್ಟರಂತೆ. 'ಭಾಷಾಂತರ ಅಲ್ಲ, ರೂಪಾಂತರ ಸೃಷ್ಟಿ' ಎಂದಿದ್ದಾರವರು. ನೃತ್ಯಮಯ ಶೈಲಿಯ, ಕಚಗುಳಿಯಿಡುವ ಹಾಸ್ಯದ ಈ ಕಥನ ಕಾವ್ಯದಲ್ಲಿ ೧೪ ಭಾಗ, ೪೨೮ ಸಾಲುಗಳಿವೆ. ಇದರ ನಡುವೆ ಸಂಭಾಷಣೆ ಸೇರಿಸಿ ೮೦ ನಿಮಿಷಗಳ ನಾಟಕ ಆಡುವುದು ಒಂದು ಸವಾಲೇ ಸರಿ.

# ಕಿಂದರಿ ಜೋಗಿ

ಕಿಂದರಿ (=ಕಿನ್ನರಿ?) ಒಂದು (ತಂತೀ) ವಾದ್ಯ. ನಾಟಕದಲ್ಲಿನ ಜೋಗಿ ಕಿಂದರಿ ಬಾರಿಸಿದಾಗ ಬೊಮ್ಮನಹಳ್ಳಿಯ ಇಲಿಗಳು ಅವನನ್ನು ಹಿಂಬಾಲಿಸುತ್ತ ನದಿಯಲ್ಲಿ ಮುಳುಗಿ ಸಾಯುತ್ತವೆ. ನಂತರ ಊರ ಮಕ್ಕಳು ಅವನ ಹಿಂದೆಯೇ ಹೋಗಿ ಗುಹೆಯ ಬಾಯಿಯೊಳಕ್ಕೆ ಪ್ರವೇಶಿಸಿಬಿಡುತ್ತವೆ. ಇಂತಹದೇ ಮೋಡಿ ಈ ನಾಟಕಕ್ಕೂ ಇದೆ. ಒಂದೇ ವ್ಯತ್ಯಾಸ – ಪ್ರೇಕ್ಷಕರು ಆಹ್ಲಾದಕರ ಅನುಭವಕ್ಕೆ ಒಳಗಾಗಿ ಉಲ್ಲಾಸಭಾವದಲ್ಲೇ ರಂಗಮಂದಿರದ ಆಚೆ ಬರುತ್ತಾರೆ.

ಪ್ರೇಮಾ ಕಾರಂತರ ಬೆನಕ ಮಕ್ಕಳ ನಾಟಕ ಕೇಂದ್ರ ೨೫ ವರ್ಷ ಅಸ್ತಿತ್ವದಲ್ಲಿ ಇರುವುದಷ್ಟೇ ಅಲ್ಲ, ಅಲೀಬಾಬಾ, ಸಿಂದಬಾದ್, ಅಳಿಲು ರಾಮಾಯಣ, ಸುಣ್ಣದ ಸುತ್ತು, ಪಂಜರ ಶಾಲೆ ಮುಂತಾದ ಉತ್ತಮ ನಾಟಕಗಳನ್ನು ಪ್ರದರ್ಶಿಸಿದೆ. ರಾಷ್ಟ್ರೀಯ ನಾಟಕ ಶಾಲೆ ನಡೆಸಿದ 'ಮಳೆಬಿಲ್ಲು' ನಾಟಕೋತ್ಸವದ ಕಡೆಯ ದಿನ (ಜೂನ್ ೧೬) ಅವರು ಪ್ರದರ್ಶಿಸಿದ್ದು 'ಕಿಂದರಿ ಜೋಗಿ'ಯ ಐದನೇ ಪ್ರಯೋಗ. 'ತುಂಗಾತೀರದ ಬಲಗಡೆಯಲ್ಲಿ ಹಿಂದಲ್ಲಿದ್ದುದು ಬೊಮ್ಮನಹಳ್ಳಿ – ಅಲ್ಲೇನಿಲಿಗಳ ಕಾಟವೆ ಕಾಟ ಅಲ್ಲಿಯ ಜನಗಳಿಗತಿಗೋಳಾಟ' – ಎಂದು ತೊಡಗುವ ನಾಟಕ :

'ಭಾಷೆಯ ಕೊಟ್ಟರೆ ಮೂರ್ತೀ ನಾವು ಮೋಸವ ಮಾಡದೆ ಸಲ್ಲಿಸಬೇಕು. ಆದುದರಿಂದ ಮೂರ್ತೀ ಕೇಳು ಸತ್ಯವನೆಂದೂ ತ್ಯಜಿಸದೇ ಬಾಳು' – ಎಂಬ ನೀತಿ ನುಡಿಯೊಂದಿಗೆ ಮುಕ್ತಾಯವಾಗುತ್ತದೆ.

ಫಣಿವೇಣಿ (ಹಾವಿನಂತೆ ಉದ್ದದ ಜಡೆಯಿರುವಾಕೆ)ಯರು ಅಪರೂಪವಾಗಿರುವ, ಹಳ್ಳಿಯ ಗೌಡರ ಅಧಿಕಾರ ದುರ್ಬಲವಾಗಿರುವ, ನಾಣ್ಯದ ಬಳಕೆ ಕಡಿಮೆಯಾಗಿರುವ ಈ ಕಾಲಕ್ಕೆ ನಾಟಕವನ್ನು ಹೊಂದಿಸುವುದು ಕಷ್ಟ. ರಂಗಸಜ್ಜಿಕೆ ಅಂದಿನ ಹಳ್ಳಿಯ ಚಿತ್ರಣ ನೀಡಬೇಕು, ಸಂಭಾಷಣೆ ಆಗಿನ ಹಾಗಿದ್ದೂ ಸವಕಲಾಗಬಾರದು, ನಟನೆ ಈಗಲೂ ನಗೆ ಉಕ್ಕಿಸಬೇಕು. ಸರಳ ಪರಿಕರಗಳಿಂದ ನಾವು ಬೊಮ್ಮನಹಳ್ಳಿಗೆ ಇಳಿಯುತ್ತೇವೆ. ಬೆಳಕು ಕೈಕೊಡುವುದಿಲ್ಲ – ಉದಾಹರಣೆಗೆ ಹಿಂಬದಿಯ ಮೇಲೆ ಮೂಡುವ ನದಿ, ಅದರ ಅಲೆಗಳು, ಅದರಲ್ಲಿ ಪ್ರವೇಶಿಸುವಂತೆ ಕಾಣುವುದು. ಮೂಲ ಕಾವ್ಯದಲ್ಲಿ ಲಯ, ವೇಗ ಎರಡೂ ಇವೆ. ಮಾತುಗಳು ಇದಕ್ಕೆ ಧಕ್ಕೆ ತರಬಹುದು, ಆದರೂ ಬೇಕಲ್ಲ! ವಸ್ತ್ರಾಲಂಕಾರ ಒಪ್ಪ. ನಿರ್ದೇಶಕ ಪ್ರಮೋದ್ ಶಿಗ್ಗಾಂವರೇ ರಂಗವಿನ್ಯಾಸ ಮಾಡಿದ್ದಾರೆ. ಜನ ಒಂದು ಕಡೆ ನೋಡುತ್ತಿದ್ದರೆ, ಕಿಂದರಿ ಜೋಗಿ ಮತ್ತೊಂದೆಡೆ ಪ್ರತ್ಯಕ್ಷವಾಗುವ ದೃಶ್ಯ ಬಿಟ್ಟರೆ ಸಮರ್ಪಕ.

ಕಿಂದರಿ ಜೋಗಿ ಪಾತ್ರ ನಾಟಕದ ಕೇಂದ್ರಬಿಂದು – ಬಿ. ಚಂದ್ರಕೀರ್ತಿ ಫಸ್ಟ್‌ಕ್ಲಾಸ್ ಹತ್ತಿರ. ನಾಯಿಗಳಿಗೆ ಬಡಿಯುವ, ಬೆಕ್ಕುಗಳನ್ನು ಕಡಿಯುವ ೧೬ ಬಗೆಯ ಇಲಿಗಳು ಮೂಲದಲ್ಲಿ – ರಂಗದ ಮೇಲೂ ಇವು ಚುರುಕಾಗಿದ್ದವು! ಶಾಲೆಯ ಹುಡುಗರು ತರಗತಿಯ ಆಚೆ ಹೆಚ್ಚು ಲವಲವಿಕೆಯಿಂದಿದ್ದರು. ಹಳ್ಳಿಯ ಹೆಂಗಸರು – ಶೈಲೀಕರಣ ಬೇಕು, ಆದರೆ ತುಸು ಹೆಚ್ಚಾಯಿತು. ಇದೊಂದು ಸಾಮೂಹಿಕ ಗೀತ ನಾಟಕ. ಚಿಕ್ಕ ಪಾತ್ರಕ್ಕೂ ಅವಕಾಶ, ಮಹತ್ವ ಇದೆ. ತುಂಟ ಹುಡುಗ (ಹೃತ್ವಿಕ್), ಶೇಷಕ್ಕ (ನಿವೇದಿತಾ), ಕುಂಟ ಗಮನ ಸೆಳೆಯುತ್ತಾರೆ. ಹಾಡುಗಾರರು, ಸಂಗೀತ ನಿರ್ವಹಣೆ ಉತ್ತಮ ಎನಿಸಿದರೂ ನಟನೆ ಮುಗಿಯುತ್ತಿದ್ದಂತೆ ಹಾಡು, ಹಾಡು ಕೊನೆಯಾಗುತ್ತಿದ್ದಂತೆ ನಟನೆ ಇದು ಕೆಲವೆಡೆ ಸಾಧ್ಯವಾಗಲಿಲ್ಲ.

ಮೂಲದಲ್ಲೇ ಕೆಲವು ತೊಡಕುಗಳಿವೆ. ಉದಾ : 'ಮಿದುಳನು ನೀಡದೆ ತಲೆಯನು ಮಾಡಿದ ಕಮಲಜನನು ಬೈದಾಡಿದರು', 'ನೀರೊಳಗಿಳಿಯದೆ ಬಲಗಡೆ ತಿರುಗಿ ಚೌಡಿಯ ಬೆಟ್ಟಕ್ಕಭಿಮುಖವಾದ...', 'ಬಂದರು ಎಲ್ಲರು ಬೊಮ್ಮನಹಳ್ಳಿಗೆ ದುಃಖಾಂಬುಧಿಯೊಳಗೀಜಾಡಿ' ಇವುಗಳನ್ನು ಹೇಗೆ ನಿವಾರಿಸಿಕೊಳ್ಳುವುದು ಎಂಬುದೂ ಕುತೂಹಲಕರ.

'ಮಕ್ಕಳೇ ತಮ್ಮ ಎರಡು ಮೂರು ವರುಷಗಳ ತರಬೇತಿ, ಅನುಭವಗಳಿಂದ ನನ್ನ ಕೆಲಸ ಸುಲಭ ಮಾಡಿಬಿಟ್ಟರು' ಎಂದಿದ್ದಾರೆ ನಿರ್ದೇಶಕರು. 'ಟಿಂಗ್ ಟಿಂಗ್ ಟಿಂಗ್ ನಾದವ ಕೇಳಿ ಚಂಗ್ ಚಂಗ್ ನೆರೆದರು ಬಾಲಕರೋಡಿ' ಎಂದು ಬರೆದಷ್ಟೆ ಉತ್ಸಾಹದಿಂದ ಮಕ್ಕಳು ಓಡಾಡಿದರು (ಅಭಿನಯಿಸಿದರು ಎಂದರೆ ಭಾರವಾದ ಶಬ್ದ!). ಕುವೆಂಪು ಇಂದಿನ, ಮುಂದಿನ ಮಕ್ಕಳಿಗೆ ಉದ್ದದ ನಾಡಗೀತೆಗಿಂತ ಕಿಂದರಿ ಜೋಗಿಯ ಮೂಲಕ ಹೆಚ್ಚು ಸುಲಭವಾಗಿ ಪರಿಚಿತರಾಗಬಲ್ಲರು, ದೊಡ್ಡವರಾದ ಮೇಲೂ ಅವರ ನೆನಪಿನಲ್ಲಿ ಉಳಿಯಬಲ್ಲರು.




**ಎಚ್. ಎಸ್. ಮಂಜುನಾಥ ಗೌರೀಬಿದನೂರು**
ಎಸ್. ೧೧೩ ಮಹಡಿ, ಹೋಟೆಲ್ ಬಾನ್ಸುರಿ ಕಟ್ಟಡ
ಮೊದಲನೇ ಮೈನ್, ಕೋದಂಡರಾಮಪುರ
ಬೆಂಗಳೂರು - ೫೬೦ ೦೦೩

## ಒಂದಿಷ್ಟು ತಮಾಷೆ

| | |
|---|---|
| 'ಬೆಣ್ಣೆಯ ಕದ್ದುವು, ಬೆಲ್ಲವ ಮೆದ್ದುವು'... ---> | ಇವುಗಳ ಬಳಕೆ, ದಾಸ್ತಾನು ಕಡಿಮೆಯಿದೆಯೆಲ್ಲಾ ಅದಕ್ಕೇ ಈಚೆಗೆ ಇಲಿಗಳಿಗಿಂತ ಹೆಗ್ಗಣಗಳೇ ಹೆಚ್ಚು ಕಾಣುತ್ತಿವೆ – ಏನು ಬೇಕಾದರೂ ತಿನ್ನಬಲ್ಲವು! |
| ಭೃಂಗಾಮಲಕದ ತೈಲ ಹೋಗಿ ಶಾಂಪೂ ಬಂತು ಡುಂ ಡುಂ ---> | ವೇಣಿ ಹೋಗಿ? |
| ಥೂ! ಛೀ! ಗೌಡನೆ ನೀ ಹಾಳಾಗ ಮಾರಿಯ ಇಲಿಗಳ ಕೊಲ್ಲಿಸೊ ಬೇಗ ---> | ಈಗ ಪಂಚಾಯ್ತಿ/ಮುನಿಸಿಪಾಲಿಟಿ/ಕಾರ್ಪೊರೇಷನ್ ಜನರನ್ನು ನಾವು, ಹೀಗೆ ಸರಾಗವಾಗಿ ಬೈಯಬಹುದೆ? |
| ಜಯ ಜಯ ಜೋಗೀ ಎಂದರು ಕೂಗಿ ---> | ಈಗಲೂ ಹಾಗೇ, ಆದರೆ ನಿಜವಾದ ಕಿಂದರಿ ಜೋಗಿ ಜಾಗವನ್ನು ವಾಜಪೇಯಿಯವರಿಂದ ಸೋನಿಯಾ ಕಸಿದುಕೊಂಡಿದ್ದಾರೆ. |
| 'ಹೋಳಿಗೆ, ಹಲ್ವ, ಮಿಠಾಯಿ, ಬೆಣ್ಣೆಯ ಮುದ್ದೆ' ---> | ರೈತರಿಗೆ ಘೋಷಿಸಿದ ಪ್ಯಾಕೇಜ್‌ನಂತಿದೆ, ಆಧುನಿಕ ಕೃಷ್ಣನಿಂದ ಕೊಳಲು ಕಿತ್ತುಕೊಂಡದ್ದು. |
| ಭಾಷೆಯ ಕೊಟ್ಟರೆ... ಮೋಸವ ಮಾಡದೆ ಸಲ್ಲಿಸಬೇಕು ಸತ್ಯವನೆಂದೂ ತ್ಯಜಿಸದೆ ಬಾಳು ---> | ಕಾವೇರಿ ನೀರ ಮೇಲೆ ಧರ್ಮ ನಡಿಗೆ. |




**ನೀಲಿ ಹೂ** (ಕವನಗಳು)

*ವಸಂತ ಬನ್ನಾಡಿ*

**ಪುಟ :** ೧೩೮ **ಬೆಲೆ :** ರೂ. ೫೦

**ತಿಂಗಳ ಬೆಳಕು ಪ್ರಕಾಶನ,** ವಿಠ್ಠಲವಾಡಿ, ವಡೇರ ಹೋಬಳಿ, ಕುಂದಾಪುರ - ೫೭೬ ೨೦೧

ಪ್ರತಿಯೊಬ್ಬ ಕವಿಗೂ ಆತನ ಕಾಲದ ರಾಜಕೀಯ - ಸಾಮಾಜಿಕ ಘಟನೆಗಳು ತನ್ನ ಕಾವ್ಯಕ್ಕೆ ಸ್ಫೂರ್ತಿಯಾಗಿ ಇರುತ್ತವೆ. ಹಾಲಿನ ಹೊಳೆಯೇ ಹರಿಯಲಿ; ರಕ್ತದೋಕುಳಿಯೇ ಇರಲಿ, ಅವನು ಅದಕ್ಕೆ ಸ್ಪಂದಿಸದೆ ಇರಲಾರ! ಸಮುದಾಯ ಹಿತಕ್ಕಿಂತ ಸ್ವಹಿತವೇ ಮುಖ್ಯವಾಗಿರುವ ಇಂದಿನ ವಿದ್ಯಮಾನಕ್ಕೆ ನೊಂದು ತನ್ನ ಪ್ರತಿಭಟನಾ ಧ್ವನಿಯನ್ನು ಬನ್ನಾಡಿಯವರು ನಮಗಿಲ್ಲಿ ಕೇಳಿಸಿದ್ದಾರೆ. ರೋಷ-ದ್ವೇಷ-ಕೋಮು ವಿಧ್ವಂಸಕ ಕೃತ್ಯಗಳಿಂದಾಗಿ ಜಗತ್ತೇ ರೋಸಿಹೋದ ಇಂದಿನ ಸನ್ನಿವೇಶದಲ್ಲಿ ಮನುಷ್ಯರ ಮಾತು ನಿಂತುಹೋಗಿ ಬಂದೂಕುಗಳು ಮಾತನಾಡ ತೊಡಗಿದ ಈ ನೆಲದಲ್ಲಿ ಬಿತ್ತಲು ಶಾಂತಿಯ ಬೀಜಗಳಿಗಾಗಿ ತಡಕಾಡಿದ್ದಾರೆ. ಸ್ನೇಹಪರತೆ ಮತ್ತು ಶಾಂತಿ ಸೌಹಾರ್ದದ ಪಾಠದ ಅಗತ್ಯವನ್ನು ಮನಗಾಣಿಸಿದ್ದಾರೆ. ಒಟ್ಟಿನಲ್ಲಿ ಕಲಕಿದ ಕೊಳಕು ಮನಸ್ಸುಗಳ ಬಗ್ಗೆ ಆಕ್ರೋಶ.

**ಪ್ರಯೋಗ ಪ್ರಸಂಗ** (ಲೇಖನಗಳು)

*ಗಣೇಶ ಅಮೀನಗಡ*



**ಪುಟ :** ೧೪೪ **ಬೆಲೆ :** ರೂ. ೫೦

**ಅರ್ಿವು ಪ್ರಕಾಶನ,** ನಂ. ೯೬೦, ೪ನೇ ವಿಭಾಗ, ೨ನೇ ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು - ೧೦

ಇಂದಿನ ವೃತ್ತಿ ಮತ್ತು ಹವ್ಯಾಸಿ ರಂಗಭೂಮಿಯ ರಂಗಪ್ರಯೋಗಗಳ ಬಗ್ಗೆ ಸಾಂದರ್ಭಿಕವಾಗಿ ಬರೆದ ಲೇಖನಗಳು. ಭಾರಿ ಪ್ರಚಾರದ ಸಿನಿಮಾ ಮತ್ತು ದೂರದರ್ಶನ ಧಾರಾವಾಹಿಗಳ ಹೊಡೆತದಿಂದ ಅಳಿವು - ಉಳಿವಿನ ಮಧ್ಯೆ ನರಳುತ್ತಿರುವ ರಂಗ ಮಾಧ್ಯಮವನ್ನು ಇನ್ನಷ್ಟು ಜನಾದರಣೀಯ ಕೇಂದ್ರವಾಗಿ ಉಳಿಸಿಕೊಳ್ಳಲು ಹೆಣಗುತ್ತಿರುವ ಕೆಲವು ವ್ಯಕ್ತಿಗಳ ಪರಿಚಯದೊಂದಿಗೆ ಸಂವಾದವೂ ಇದೆ. ಕಿಕ್ಕಿರಿದ ಸಭಾಂಗಣಗಳಲ್ಲಿ ಸಂಗೀತ ನಾಟಕಗಳನ್ನು ಆಡುತ್ತಿದ್ದ ರಂಗಭೂಮಿ ಇಂದು ಆಕರ್ಷಣೆ ಕಳೆದುಕೊಳ್ಳಲು ಪ್ರೇಕ್ಷಕ ವರ್ಗ ಕಾರಣವಲ್ಲವೆಂಬ ಅನೇಕ ಪ್ರತಿಭಾವಂತ ರಂಗಕರ್ಮಿಗಳ ಅಭಿಪ್ರಾಯವನ್ನು ಅವರ ಮಾತುಗಳಲ್ಲೇ ಇಲ್ಲಿ ದಾಖಲಿಸಲಾಗಿದೆ. ನಾಟಕಗಳ ಬಗ್ಗೆ ಅಷ್ಟಾಗಿ ಆಸ್ಥೆ ಇಲ್ಲದವರನ್ನೂ ಆಸಕ್ತರನ್ನಾಗಿಸಿ ಕುತೂಹಲ ಮೂಡಿಸುವ ಲೇಖನಗಳು.

**ಬೆಳಕು ಬಂತು ಬಯಲಿಗೆ** (ಕವನ ಸಂಗ್ರಹ)

*ಸಂ. ಅಲ್ಲಮಪ್ರಭು ಬೆಟ್ಟದೂರು*




**ಪುಟ :** ೧೭೪ **ಬೆಲೆ :** ರೂ. ೧೦೦

**ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ ,** ಸರಸ್ವತಿ ಗೋದಾಮು, ಗುಲ್ಬರ್ಗಾ - ೫೮೫ ೧೦೧

ಹೈದರಾಬಾದ್ ಕರ್ನಾಟಕದ ಪ್ರದೇಶದ ಒಂದು ಕವಿಗೋಷ್ಠಿಯೇ ನೆರೆದಂತೆ ರಾರಾಜಿಸುವ ಈ ಸಂಕಲನ ಒಟ್ಟು ೧೦೫ ಕವಿಗಳ ಕವಿತೆಗಳನ್ನೊಳಗೊಂಡಿದೆ. ಈ ಪ್ರದೇಶಕ್ಕೆ ರಾಜಕೀಯವಾಗಿ ಅನಾದರ ತೋರುವಂಥ ನಿರ್ಲಕ್ಷಿತ ಧೋರಣೆ ಮತ್ತು ನೈಸರ್ಗಿಕವಾಗಿ ಬರಗಾಲದ ಹೊಡೆತ ಇದ್ದಾಗ್ಯೂ ಈ ನೆಲದ ಸಾಂಸ್ಕೃತಿಕ - ಸಾಹಿತ್ಯಿಕ ಪ್ರತಿಭೆಗೆ ಎಳ್ಳಷ್ಟೂ ಕುಂದು ಉಂಟಾಗಲಿಲ್ಲ. ಅಭಿವೃದ್ಧಿಯ ಕನಸು ಕಾಣುತ್ತ ಅನ್ಯಾಯದ ಬಗ್ಗೆ ಕಿಡಿಕಾರುತ್ತ ಸಾಕಷ್ಟು ನೋವುಂಡರೂ ತಮ್ಮ ಕಲಾಸೇವೆಯನ್ನು ಕಡೆಗಣಿಸಲಿಲ್ಲ. ಇಂಥ ಪರಿಸ್ಥಿತಿಯಿಂದಾಗಿ ಬಂಡಾಯ ಕವಿತೆಗಳೇ ಈ ಜನರಿಂದ ಹೆಚ್ಚಾಗಿ ಮೂಡಿಬಂದಿವೆ. ಸಾಹಿತ್ಯದ ಮೂಲಕ ತಮ್ಮ ಅಹವಾಲನ್ನು ದೊರೆ ಹಾಗೂ ಶ್ರೀಸಾಮಾನ್ಯ ಇಬ್ಬರಿಗೂ ಕೇಳಿಸುವಂತೆ ದನಿಯೆತ್ತಿದ್ದಾರೆ.



**ಅನಾವರಣ** (ಆಕರಗ್ರಂಥ)

*ಪ್ರೊ॥ ಪ್ರಧಾನ್ ಗುರುದತ್ತ*

**ಪುಟ :** ೬೩೬ **ಬೆಲೆ :** ರೂ. ೩೦೦

**ಕನ್ನಡ ಪುಸ್ತಕ ಪ್ರಾಧಿಕಾರ,** ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಯಾವುದೇ ಸಾಹಿತ್ಯವನ್ನು ಮೂಲಕೃತಿಯಲ್ಲಿಯೇ ಓದಬೇಕೆಂಬ ಮಾತೊಂದಿದೆ. ಭಾಷಾಂತರ ಎಂದೊಡನೆ ಅನುವಾದಕರಾರು ಎಂಬ ಪ್ರಶ್ನೆಯೂ ಜೊತೆಯಲ್ಲೇ ಇರುತ್ತದೆ. ಕೃತಿಕಾರನಿಗಿಂತ ಭಾಷಾಂತರಕಾರ ಮಹತ್ವದ ವ್ಯಕ್ತಿಯಾಗಿರುತ್ತಾನೆ. ಇಂಥ ಭಾಷಾಂತರ ಎಂಬ ಕ್ಲಿಷ್ಟ ಕ್ಷೇತ್ರದಲ್ಲಿ ಅಪಾರ ಪರಿಣತಿಯನ್ನು ಗಳಿಸಿಕೊಂಡ ಡಾ॥ ಪ್ರಧಾನ್ ಗುರುದತ್ತರು ಇದೀಗ ಭಾಷಾಂತರದ ಸೊಗಸು ಮತ್ತು ಅಲ್ಲಿರುವ ತೊಡಕಿನ ಬಗ್ಗೆ ಒಂದು ಸಮಗ್ರ ವಿವೇಚನೆಯ ನೋಟವನ್ನು ಹೊಂದಿರುವ ಗ್ರಂಥವೊಂದನ್ನು ನಮ್ಮ ಮುಂದಿರಿಸಿದ್ದಾರೆ. ಈ ಕೃತಿ ಇಪ್ಪತ್ತನೆಯ ಶತಮಾನದ ಕೆಲವು ಮಹತ್ವದ ಭಾಷಾಂತರಗಳ ಬಗ್ಗೆ ಸಾಕಷ್ಟು ಮಾಹಿತಿಯನ್ನೊದಗಿಸುವ ಆಕರಗ್ರಂಥ. ಭಾಷಾಂತರಕಾರರಿಗೆ ಸರಿಯಾದ ಮಾರ್ಗದರ್ಶನದ ಕೊರತೆಯನ್ನು ಈ ಗ್ರಂಥ ನೀಗಬಲ್ಲುದು.




**ಚಿಂತನ - ಮಂಥನ** (ಲೇಖನಗಳು)

*ಭಾಲಚಂದ್ರ ಜಯಶೆಟ್ಟಿ*

**ಪುಟ :** ೧೧೪ **ಬೆಲೆ :** ರೂ. ೭೦

**ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ,** ಸರಸ್ವತಿ ಗೋದಾಮು, ಗುಲಬರ್ಗಾ - ೫೮೫ ೧೦೧

ಇದು ಚಿಂತನಶೀಲ ಬರಹಗಳಾಗಿದ್ದು ಚುರುಕಾದ ವಿಮರ್ಶೆಯನ್ನೊಳಗೊಂಡಿವೆ. ಹಿರಿಯ ಭಾಷಾಂತರಕಾರರೂ ಬರಹಗಾರರೂ ಆಗಿರುವ ಭಾಲಚಂದ್ರ ಜಯಶೆಟ್ಟಿ ಕಾವ್ಯ, ಮಹಾಕಾವ್ಯಗಳ ಹಾಗೂ ತಾತ್ವಿಕ ಸಾಹಿತ್ಯದ ಬಗ್ಗೆ ತಮ್ಮ ಅನಿಸಿಕೆಗಳನ್ನು ಹೇಳಿದ್ದಾರೆ. ಇಲ್ಲಿನ ವಿಚಾರಗಳು ಎಷ್ಟೋ ಕಲ್ಪನಾ ಸಾಹಿತ್ಯದ ಕನಸಿನ ಲೋಕದಲ್ಲಿ ತೇಲಿಹೋಗದೆ ನಿಜವಾದ ಅರ್ಥದಲ್ಲಿ ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸುವಂತಹವಾಗಿವೆ. ತಮ್ಮ ಓದಿನ ಮೂಲಗಳಿಂದ ವಿಷಯ ಗ್ರಹಣ ಮಾಡಿದಾಗ ಉದ್ಭವಿಸುವ ಅನೇಕ ಪ್ರಶ್ನೆಗಳಿಗೆ ತಮ್ಮಲ್ಲೇ ವಿಚಾರ ಮಂಥನ ನಡೆಸಿ ಕಂಡುಕೊಂಡ ಒಳದನಿಗಳು ಇಲ್ಲಿ ದಾಖಲಾಗಿವೆ. ಈ ವ್ಯಾಪ್ತಿಯಲ್ಲಿ ಭಾಷಾ ವೈಶಿಷ್ಟ್ಯ, ಚಾರಿತ್ರಿಕ ಅಂಶಗಳು, ಬದುಕಿಗೆ ಸ್ಪಂದಿಸುವ ಅನೇಕ ವಿಷಯಗಳು ಸೇರಿವೆ.

**ವಚನ ಶಾಸ್ತ್ರಸಾರ – ಭಾಗ ೩**

*ಸಂ. ಡಾ॥ ಫ. ಗು. ಹಳಕಟ್ಟಿ*

**ಪುಟ :** ೫೩೮ **ಬೆಲೆ :** ರೂ. ೨೦೦

**ಲಿಂಗಾಯತ ಅಧ್ಯಯನ ಸಂಸ್ಥೆ,** ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ - ಗದಗ



ವೀರಶೈವ ವಚನಸಾಹಿತ್ಯದಲ್ಲಿ ಹುದುಗಿರುವ ಶಿವತತ್ವ ಚಿಂತನೆಯನ್ನು ಕ್ರೋಢೀಕರಿಸಿ ಸಂಗ್ರಹಿಸಲಾಗಿದೆ. ಶಿವತತ್ವದ ಪರಿಚಯದೊಂದಿಗೆ ಪ್ರಾರಂಭವಾದ ಮೊದಲೆರಡು ಸಂಪುಟಗಳ ಮುಂದುವರಿಕೆಯಾಗಿ ಇದೀಗ ಮೂರನೆಯ ಸಂಪುಟ ಪರಿಷ್ಕರಣಗೊಂಡು ಬಂದಿರುತ್ತದೆ. ಈ ಸಂಪುಟ ಮುಖ್ಯವಾಗಿ ನಾಲ್ಕು ಭಾಗಗಳನ್ನು ಹೊಂದಿದ್ದು ಅಷ್ಟಾವರಣಗಳು, ಆಚಾರ ಭೇದಗಳು, ಕ್ರಿಯೆ ಮತ್ತು ಶಿವಯೋಗದಂತಹ ಮಹತ್ವದ ವಿಷಯಗಳನ್ನು ಹೊಂದಿದೆ. ಎಲ್ಲವೂ ಶಿವಸಾಕ್ಷಾತ್ಕಾರ ಮುಕ್ತಿ ಮಾರ್ಗದ ಕಡೆ ನಡೆವ, ಅಧ್ಯಾತ್ಮಿಕ ಗುರಿಯನ್ನು ಸೇರುವ ಈಶ್ವರ ಸಂಬಂಧೀ ವಿಷಯಗಳು ಹೇರಳವಾಗಿವೆ. ಗ್ರಂಥವನ್ನು ಸಿದ್ಧಪಡಿಸಲು ಭಾರಿ ಸಂಖ್ಯೆಯ ವಚನಕಾರರ ವಚನಗಳನ್ನು ಆಧಾರವಾಗಿ ಬಳಸಿಕೊಳ್ಳಲಾಗಿದೆ.

– ಇಂದಿರಾ ಕುಮಾರಿ

**ಗೊಂ**ದಲಪುರ ಸೀಮೆಯಲ್ಲಿ ಮದುವೆ ಗಂಡುಗಳು ರಾಜಾರೋಷವಾಗಿಯೇ ವರದಕ್ಷಿಣೆ ತೆಗೆದುಕೊಳ್ಳುತ್ತಾರಂತೆ ಎಂಬ ವದಂತಿ ಕಿವಿಗೆ ಬಿದ್ದ ಕೂಡಲೇ, ಗುಲ್ಲೂರಿನ ವರದಕ್ಷಿಣೆ ನಿರ್ಮೂಲನ ಸಂಘದ ಸಂಚಾಲಕಿಯೂ, ಫ್ರೀಲಾನ್ಸ್ ಪರ್ತಕರ್ತೆಯೂ ಆದ ಪುಟ್ಟಮ್ಮಣ್ಣಿಯ ರಕ್ತದ ಒತ್ತಡ ಶಿಖರಕ್ಕೇರಿತು!

ಈ ವದಂತಿಯ ಮತ್ತೊಂದು ಪರಿಣಾಮವೆಂದರೆ, ಈವರೆಗೆ ವರದಕ್ಷಿಣೆ ವಸೂಲಿನ ವಿಷಯದಲ್ಲಿ ತೀರಾ ಹಳೆಯ ಸೊಫಿಸ್ಟಿಕೇಟೆಡ್ ಕ್ರಮ ಅನುಸರಿಸುವುದನ್ನು ಕೈಬಿಟ್ಟು, ತಾವೂ ಯಾಕೆ ಈ ರಾಜಾರೋಷದ ಕ್ರಮ ಅನುಸರಿಸಬಾರದು ಎಂದು ನಗರ ಪ್ರದೇಶದ ಅತ್ಯಾಧುನಿಕ ಗಂಡುಗಳು ಮತ್ತು ಅವರ ಬಳಗದವರು ಎಚ್ಚೆತ್ತುಕೊಂಡದ್ದು.

ಪುಟ್ಟಮ್ಮಣ್ಣಿ ಸಾದಾ ನೂಲಿನ ಸೀರೆ ಕುಪ್ಪಸ ತೊಟ್ಟು, ತಮ್ಮನಿಗೆ ಹೆಣ್ಣು ಹುಡುಕಲು ಹೊರಟ ಹಳ್ಳಿ ಹೆಂಗಸಿನಂತೆ ವೇಷಧರಿಸಿ ಗೊಂದಲಪುರದ ದಾರಿ ಹಿಡಿದಳು. ನಮ್ಮ ಲೋಕಾಯುಕ್ತರಂತೆ ಮಾಲು ಸಹಿತವೇ ಹಿಡಿದು ವರದಕ್ಷಿಣೆ ಬಾಕರಿಗೆ ಛೀಮಾರಿ ಹಾಕಬೇಕೆಂಬ ಹಟ ಆಕೆಯದು.

ಆದರೆ ಗೊಂದಲಪುರದ ಜನರ ವರ್ತನೆ, ಅಲ್ಲಿನ ವಿದ್ಯಮಾನಗಳು ಆಕೆಗೆ ಸ್ವಲ್ಪ ಗೊಂದಲ ಹುಟ್ಟಿಸಿದವು. ಉದಾಹರಣೆಗೆ ಅಲ್ಲಿ ನಡೆಯುತ್ತಿದ್ದ ವ್ಯವಹಾರ ಗಮನಿಸಿ: ಈಕೆಯಂತೆಯೇ ತಮ್ಮನಿಗೋ, ಮಗನಿಗೋ ಹೆಣ್ಣು ನೋಡಲು ಯಾರಾದರೂ ಹೋಗುತ್ತಾರೆಂದು ಭಾವಿಸಿಕೊಳ್ಳಿ. ಹೆಣ್ಣಿನ ರೂಪ, ಎತ್ತರ, ಹೊಲ-ಮನೆ ಕೆಲಸದ ಚುರುಕತನ, ಆಕೆಯ ಜಾಣತನ ಮೆಚ್ಚಾಯಿತೆಂದು ಊಹಿಸಿಕೊಳ್ಳಿ. ಮುಂದೆ ವ್ಯವಹಾರದ ಮಾತು ಪ್ರಾರಂಭವಾಗುತ್ತದೆ.

''ನೋಡ್ರಪ್ಪ ಎಣ್ಣು ಒಪ್ಗೆಯಾಯ್ತು ಅಂತೀರಿ. ನಮ್ಗೂ ಸಂತೋಷ. ಕೊಡುದು-ಬುಡುದ್ನೆಲ್ಲ ಈಗ್ಲೆ ಇತ್ಯರ್ಥ ಮಾಡಿದ್ರೆ, ಮುಂದೆ ಮನಸ್ತಾಪಕ್ಕೆ ಅವ್‌ಕಾಸ ಇರೂದಿಲ್ಲ...'' ಹೆಣ್ಣಿನ ಕಡೆಯ ಹಿರಿಯ.

ಗಂಡಿನ ಕಡೆಯ ಹೆಂಗಸು ಸ್ವಲ್ಪ ಜಂಬದ ದನಿಯಲ್ಲಿ ಹೇಳ್ತಾಳೆ: ''ಕೆಂಪನ್‌ಕೊಪ್ಲಲ್ಲಿ ಅರುವತ್ ಕೊಡ್ತೀನಿ ಅಂದ್ರು. ಎಣ್ಣು ತೆಳ್ಗೆ ಒನ್ಕೆಯಂಗಿತ್ತು ಅಂತ ನಾನೇ ಒಪ್ಲಿಲ್ಲ. ನಿಮ್ ರೇಟ್ ಎಂಗದೆ ಅಂತ ನೀವೇ ಏಳ್ಬುಡಿ!''




''ನೋಡ್ ತಾಯವ್ವ! ನಾವೇನೂ ಹತ್ತಿಪ್ಪತ್ ಎಕ್ರೆ ಜಮೀನು. ಐವತ್ತರವತ್ ರಾಸು-ವಾಸು ಇಟ್ಕೊಂಡಿರು ದೊಡ್ ಕುಳ ಅಲ್ಲ. ಇರೋವ್ರು ಅರವತ್ತು ಕೊಡ್ತಾರೆ, ನೂರ್ ಗಾಡೀನೂ ಕೊಡ್ತಾರೆ. ಅದೆಲ್ಲ ಆಗೊ ಮಾತಲ್ಲ. ನಮ್ ಮಗ್ಳ ಚಂದಾಗಿ ಸಾಕಿದ್ದೀವಿ. ಹೊಲ ಮನೆ ಕೆಲ್ಸ ಬೌಸ್ಲಲ್ಲಿ ಬೆರಳ್ ತೋರುವಂಗಿಲ್ಲ. ನೀವು ಒಳ್ಳೆ ಜನ್ನುವಂಗಿದ್ರೆ ನಿಮ್ ರೇಟ್ ಏಳ್ರಪ್ಪ...'' ಹೆಣ್ಣಿನ ತಂದೆ.

ಸ್ವಲ್ಪ ಹೊತ್ತು ಯಾರೂ ಮಾತಾಡದೆ ಮುಖ-ಮುಖ ನೋಡಿಕೊಳ್ಳುತ್ತಾರೆ. ಮದುವೆಯಾಗಲಿರುವ ಹೆಣ್ಣು ಸೇರಿದಂತೆ ಎಲ್ಲರೂ ಕಾತುರದಿಂದ ಕಾಯುತ್ತಾರೆ.

ಗಂಡಿನ ಕಡೆಯವರಾಗಿ ಬಂದಿರುವ ವ್ಯಕ್ತಿ ಹೇಳುತ್ತಾನೆ: ''ನೋಡ್ರಪ್ಪಾ ನಾನು ಮೊದ್ಲೆ ಹೇಳ್ಬುಡ್ತೀನಿ. ನಿಮ್ ರೇಟ್ ನಮ್ಗೆ ವರ್ಕ್‌ಔಟ್ ಆಗುವಂಗಿದ್ರೆ ಮುಂದಿನ್ ಮಾತು. ಆಮ್ಯಾಲೆ ಇಯಪ್ಪ ಇಂಗಂದ್ನಲ್ಲ ಅನ್ಕಬ್ಯಾಡಿ...'' ಗಂಡಿನ ಕಡೆಯಿಂದ ಯಾರು ಮಾತಾಡಿದರೂ ಅದರಲ್ಲಿ ಸ್ವಲ್ಪ ಹೆಚ್ಚೇ ಪೊಗರು ಇರುತ್ತದೆ!

ಹೆಣ್ಣಿನ ತಂದೆ ಪಕ್ಕದಲ್ಲಿರುವ ಊರ ಹಿರಿಯನೊಂದಿಗೆ ಪಿಸಪಿಸ ಮಾತನಾಡುತ್ತಾನೆ. ಅನಂತರ ಗಂಟಲು ಸರಿಪಡಿಸಿಕೊಂಡು ''ಮೂವತ್ ಮೂಟೆ ಕಣ್ರಪ್ಪ. ಅದಕ್ಕಿಂತ ಎಚ್ಚಾಗಿ ಒಂದ್ ಮಕ್ರಿ ಕೂಡ ಕೊಡೋಕಾಗ್ದು. ನಿಮ್ ಒಪ್ಗೆ ಆದ್ರೆ ಈ ಸಾಲ್ನಲ್ಲೆ ನಮ್ ಗುಂಡಯ್ಯನ್ ಗುಡಿತಾವ ಮದ್ವೆ...'' ಇವರ ಮಾತಿನ ತಲೆಬುಡ ತಿಳಿಯದ ಪುಟ್ಟಮ್ಮಣ್ಣಿಗೆ ಗೊಂದಲವಾಗದೆ ಇರುತ್ತದೆಯೆ?

ಮೂಟೆ ಲೆಕ್ಕ ಎಂದಮೇಲೆ ಕೂಲಿಗಾಗಿ ಕಾಳು ಯೋಜನೆಯ ಮೂಟೆಗಳನ್ನು ಇವರೂ ಅಡಗಿಸಿಟ್ಟಿರಬಹುದು ಎಂಬ ಅನುಮಾನ! ಏನೋ ಹುಡುಕುತ್ತ ಬಂದವಳಿಗೆ ಮತ್ತೊಂದು ದೊಡ್ಡ ಭ್ರಷ್ಟಾಚಾರವನ್ನು ಬಯಲಿಗೆಳೆದು ತಾನೇ ಹಿರೋಯಿನ್ ಆದಂತೆ ಕಲ್ಪಿಸಿಕೊಂಡು ಒಂದು ರೀತಿಯ ಥ್ರಿಲ್ ಅನುಭವಿಸಿದಳು – ಪುಟ್ಟಮ್ಮಣ್ಣಿ!

ಈ ಗೊಂದಲಪುರದ ಮಂದಿಯೇ ಹಾಗೆ. ಉಳಿದವರೆಲ್ಲ ಒಂದು ಥರಾ ಎಂದರೆ ಇವರದೇ ಒಂದು ಥರಾ. ಆದರೆ ವರದಕ್ಷಿಣೆ ನಮ್ಮ ವೇದಕಾಲದಿಂದಲೇ ಆಚರಣೆಯಲ್ಲಿತ್ತೆಂದು ಪಟ್ಟುಹಿಡಿದು ಸಾಧಿಸುವ ಮಂದಿಗೆ ಈ ಗೊಂದಲಪುರದವರ ರೂಢಿ ಗೊಂದಲವೋ ಗೊಂದಲ!

ಅಲ್ಲಿನ ಗಂಡುಗಳು ವರದಕ್ಷಿಣೆಯಾಗಿ ತಿಪ್ಪೆ ಗೊಬ್ಬರದ ಮೂಟೆಗಳನ್ನು, ಸ್ವಲ್ಪ ಐನಾತಿ ಕುಳಗಳ ಗಂಡುಗಳು ಗಾಡಿಗಳ ಲೆಕ್ಕದಲ್ಲಿ ಗೊಬ್ಬರವನ್ನು ಪಡೆಯುತ್ತಾರೆ. ಆದರೆ ಎರೆ ಗೊಬ್ಬರವಾದರೆ ರಿಯಾಯಿತಿ ಉಂಟು! ಕೆಲವರು ಏಳೆಂಟು ಮೂಟೆ ಗೊಬ್ಬರ ಸಹ ವರದಕ್ಷಿಣೆ ನೀಡಲು ಸಾಧ್ಯವಾಗದೆ ಪರದಾಡುವುದುಂಟು. ಇನ್ನೂ ಎರಡು ಮೂಟೆ ಬಾಕಿ ಬರಬೇಕಾಗಿದೆ ಎಂದು ನೆಪ ಹೇಳಿ ಸೊಸೆಯನ್ನು ತವರಿಗೆ ಕಳಿಸುವ ಅತ್ತೆಯರೂ ಇಲ್ಲದಿಲ್ಲ. ಅಂಥ ಸಂದರ್ಭಗಳಲ್ಲಿ ಗೊಂದಲಪುರದ ಗಟ್ಟಿ ಕುಳಗಳು ಸ್ವಲ್ಪ ಗೊಬ್ಬರ ಡೊನೇಷನ್ ರೂಪದಲ್ಲಿ ನೀಡಿ ಆ ಹುಡುಗಿಯನ್ನು ಗಂಡನ ಮನೆಗೆ ಕಳಿಸುವುದುಂಟು!

ಪುಟ್ಟಮ್ಮಣ್ಣಿ ತನ್ನ ಗೆಳತಿಯರೊಂದಿಗೆ ಈ ವಿಷಯ ಹೇಳಿಕೊಂಡಾಗ ಕೆಲವರು ಸೆಗಣಿ ತುಳಿದವರಂತೆ ಹೌಹಾರಿದರೆನ್ನಿ. ಭಾರತದ ಭವ್ಯ ಸಂಸ್ಕೃತಿಯ ವಾರಸುದಾರರೆಂಬ ಭ್ರಮೆಯಲ್ಲಿ ತೇಲಾಡುವ ಕೆಲವರಂತೂ ಈ ವಿಷಯ ತಿಳಿದು ಮೂರ್ಛೆ ಹೋದರಂತೆ! ಪರದೇಶಗಳ ಸಂಬಂಧವಿರುವ ಮತ್ತು ಕೆಲವರು ಅವರಿಗೆ ನಮ್ಮ ಈ ಮುಖ ತೋರಿಸುವುದಾದರೂ ಹೇಗೆ? ಎಂದು ಪೇಚಾಡಿಕೊಂಡರಂತೆ!

ಪುಟ್ಟಮ್ಮಣ್ಣಿ 'ಗಾಳಿಗುಳ್ಳೆ' ಪತ್ರಿಕೆಯಲ್ಲಿ ಈ ವಿಷಯವನ್ನು ಪ್ರಕಟಿಸಿದ್ದೇ ತಡ ಗುಲ್ಲೂರಿನಲ್ಲಿ ಕೋಲಾಹಲ ಉಂಟಾಯಿತು. ನಾಜೂಕಾಗಿ ಡವರಿ ವಸೂಲು ಮಾಡುವ ಆಧುನಿಕರಿಗೆ ಸ್ವಲ್ಪ ಅವಮಾನವೂ ಆದಂತಾಯಿತು. ಆದರೆ, ಏನು ಮಾಡೋಣ, ಇದು ಪುರಾತನ ಪಿತೃಭೂಮಿ. ಇಲ್ಲಿ ಇಂಥದ್ದೆಲ್ಲ ನಡೆಯುತ್ತದೆ! ಅಲ್ಲದೆ ವರದಕ್ಷಿಣೆ, ತೆರ ಇತ್ಯಾದಿ ನಮಗೆ ಹೊಸದೇನೂ ಅಲ್ಲ. ಗೊಂದಲಪುರದ ಜನರಿಗಂತೂ ಇದರಿಂದ ನಮ್ಮ ದೇಶದ ಕೀರ್ತಿಗೆ ಮಸಿ ಬಳಿದಂತಾಗುತ್ತದೆ ಎಂಬ ಅರಿವೂ ಇಲ್ಲ. ಮಹರಾಯರು ಗೊಬ್ಬರ ವರದಕ್ಷಿಣೆ ಪಡೆಯುವ ಬದಲು ಗೋವುಗಳನ್ನೋ, ಕೊನೆಯ ಪಕ್ಷ ಆಡು-ಕುರಿಗಳನ್ನೋ, ಇನ್ನೂ ಕೊನೆಯ ಪಕ್ಷ ನೇಗಿಲು ನೊಗಗಳನ್ನೋ ಪಡೆದಿದ್ದರೆ ಯಾರದೂ ವಿರೋಧವೋ ಮತ್ತೊಂದೋ ಇರುತ್ತಿರಲಿಲ್ಲ ಎಂದು ನಾಗರಿಕರು ಗೊಣಗಾಡಿಕೊಂಡರು.

ಯಾವ ಸರಕಾರ ಬಂದರೂ ಮಂತ್ರಿಗಳಾಗಲಿ, ಅಧಿಕಾರಿಗಳಾಗಲಿ ಗೊಂದಲಪುರದ ಕಡೆಗೆ ತಿರುಗಿಯೂ ನೋಡುವುದಿಲ್ಲವಂತೆ. ಮಠದ ಸ್ವಾಮಿಗಳು, ಜಗದ್ಗುರುಗಳೇ ಮುಂತಾಗಿ ಧಾರ್ಮಿಕ ವ್ಯಕ್ತಿಗಳಂತೂ ಗೊಂದಲಪುರದ ಹೆಸರು ಕೇಳಿದರೂ ಕನಸಿನಲ್ಲಿ ಬೆಚ್ಚುತ್ತಾರಂತೆ!

ಪುಟ್ಟಮ್ಮಣ್ಣಿ ಪತ್ತೆ ತರದೂದಿನಲ್ಲಿ ಇದಕ್ಕೆ ಕಾರಣ ಕಂಡುಹಿಡಿದಳು. ಗೊಂದಲಪುರದವರ ಪರಂಪರೆಯಂತೆ ಊರಿಗೆ ದಯಮಾಡಿಸುವ ಮಹನೀಯರನ್ನು ಗೊಬ್ಬರದ ತುಲಾಭಾರ ಮಾಡಿಯೇ ಗೌರವಿಸುತ್ತಾರಂತೆ!

ಜೈ ಗೊಂದಲಪುರೇಶ್ವರ!

ಬೀರಣ್ಣ, ಗೊಂದಲಪುರ



# ಬಾಯಾರಿವೆ ಬಾವಿ, ಕೆರೆಗಳು ಕಟ್ಟೆ ಹೊಂಡಗಳು

ಶಿವಶಕ್ತಿ ಪ್ರಸನ್ನಕುಮಾರ್

**ಚಿ**ತ್ರದುರ್ಗ ಎಂದೊಡನೆ ಕಣ್ಮುಂದೆ ಬರುವುದು ಭವ್ಯವಾದ ಕೋಟೆ, ಮದಕರಿ ನಾಯಕ, ಒನಕೆ ಓಬವ್ವ. ಜೊತೆಗೆ ಅಷ್ಟೇ ಪ್ರಮುಖವಾಗಿ ಕಂಡು ಬರುವುದು ನೀರಿನ ಅಭಾವ. ಈ ನೀರಿನ ಅಭಾವ ಚಿತ್ರದುರ್ಗಕ್ಕೆ ಶಾಶ್ವತವಾಗಿ ಅಂಟಿಕೊಂಡಂತೆ ಕಾಣುತ್ತದೆ.

ಬೃಹತ್ ಅಣೆಕಟ್ಟುಗಳನ್ನು ಕಟ್ಟಿ, ನೂರಾರು ಕಿ.ಮೀ.ವರೆಗೆ ಕಾಲುವೆ, ಕೊಳವೆ ಮಾರ್ಗಗಳನ್ನು ಹಾಕಿ ನೀರನ್ನು ಸಾಗಿಸುವ ಮತ್ತು ಸಾವಿರಾರು ಅಡಿಗಳ ಆಳದಿಂದ ನೀರನ್ನು ಮೇಲೆತ್ತುವ ಇಂದಿನ ದಿನಗಳಲ್ಲಿಯೇ ಈ ಪರಿಸ್ಥಿತಿ ಇರುವಾಗ ಈ ಯಾವುದೇ ಸೌಲಭ್ಯ ಇಲ್ಲದ ಹಿಂದಿನ ಕಾಲದಲ್ಲಿ ಜನರು ಯಾವ ರೀತಿ ಬದುಕಿದ್ದರು ? ನೀರಿಗೆ ಯಾವ ರೀತಿ ವ್ಯವಸ್ಥೆ ಮಾಡಿಕೊಂಡಿದ್ದರು ? ಬೇಸಿಗೆ ಮತ್ತು ಬರಗಾಲವನ್ನು ಯಾವ ರೀತಿ ನಿರ್ವಹಿಸುತ್ತಿದ್ದರು ? ಎಂಬ ಪ್ರಶ್ನೆಗಳನ್ನು ಹಾಕಿಕೊಂಡಾಗ ಸಹಜವಾಗಿ ಆಸಕ್ತಿ, ಕುತೂಹಲ ಮೂಡುತ್ತದೆ.

ಕರ್ನಾಟಕ ಜಿಲ್ಲಾ ವಿಶೇಷ ಪಟ್ಟಿಯಲ್ಲಿ ಅತ್ಯಂತ ಕಡಿಮೆ ಮಳೆ ಬೀಳುವ ಜಿಲ್ಲೆ ಎಂಬ ವಿಶೇಷ ಪಟ್ಟ ಇದ್ದರೂ ಚಿತ್ರದುರ್ಗ ಪರಿಸರದಲ್ಲಿ ಪ್ರಕೃತಿ ಅಷ್ಟೊಂದು ಕ್ರೂರ ವಾಗಿಲ್ಲ. ಎತ್ತರವಾದ ಅರಣ್ಯದಿಂದ ಕೂಡಿದ ಜೋಗಿ ಮಟ್ಟಿ, ಚಂದ್ರವಳ್ಳಿ ಗಿರಿಶ್ರೇಣಿಗಳು ಮತ್ತು ಬೃಹತ್ ಬಂಡೆಗಳನ್ನೊಳಗೊಂಡ ಬೆಟ್ಟ ಶ್ರೇಣಿಗಳಿವೆ. ಇವುಗಳು ಮಳೆ-ಮಾರುತಗಳನ್ನು ಆಕರ್ಷಿಸುವಲ್ಲಿ ಸಫಲವಾಗಿವೆ. ಹೀಗೆ ಈ ಪ್ರದೇಶಗಳಲ್ಲಿ ಬಿದ್ದ ಮಳೆ ನೀರು ಇವುಗಳ ಮಧ್ಯೆ ಇರುವ ವಿಶಾಲವಾದ ಮತ್ತು ಸಮತಟ್ಟಾದ ಕಣಿವೆಗಳಲ್ಲಿ ಹರಿಯುತ್ತದೆ. ಇದನ್ನು ಗಮನಿಸಿದ ನಮ್ಮ ಪೂರ್ವಿಕರು ಈ ನೀರಿಗೆ ಸರಿಯಾದ ಸ್ಥಳಗಳಲ್ಲಿ ಒಡ್ಡು, ಕಟ್ಟೆ, ಕೆರೆಗಳನ್ನು ಕಟ್ಟಿ ನೀರನ್ನು ನಿಲ್ಲಿಸಿದ್ದರು. ಜನಸಂಖ್ಯೆ ಹೆಚ್ಚಿದಂತೆ ನೀರಿನ ಅವಶ್ಯಕತೆ ಹೆಚ್ಚಾಗಿ ಈ ಕೆರೆ-ಕಟ್ಟೆಗಳನ್ನು ನವೀಕರಿಸುವುದು, ವಿಸ್ತರಿಸುವುದು, ಅವು ಹಾಳಾಗದಂತೆ ನಿರ್ವಹಿ ಸುವುದು ಮತ್ತು ಅವಕ್ಕೆ ಇತರೇ ಕಡೆಗಳಿಂದ ನೀರು ಹರಿಯುವಂತೆ ಕಾಲುವೆಗಳನ್ನು ಮಾಡುವುದರಲ್ಲಿ ನಿರತರಾಗಿದ್ದರು. ಕೆರೆಗಳನ್ನು ಕಟ್ಟಿಸು, ಸಸಿಗಳನ್ನು ನೆಡಿಸು, ಗುಡಿಗಳನ್ನು ಕಟ್ಟಿಸು ಎಂಬ ಧರ್ಮವಾಕ್ಯಕ್ಕೆ ರಾಜರುಗಳು ವಿಜಯೋತ್ಸವದ ಸವಿನೆನಪಿಗಾಗಿಯೋ, ಪುತ್ರ ಜನನದ ಕಾರಣಕ್ಕಾಗಿಯೋ ಅಥವಾ ಆ ಹಳ್ಳಿಗಳ ಪ್ರಮುಖರು, ಧನಿಕರು, ತಮ್ಮ ಅವಶ್ಯಕತೆಗಾಗಿಯೋ ರಾಜರ ಅಪ್ಪಣೆ ಪಡೆದು ಕೆರೆಗಳನ್ನು ಕಟ್ಟಿಸುತ್ತಿದ್ದರು. ಹಾಗೂ ಜನಸಾಮಾನ್ಯರು ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಬಾವಿಗಳನ್ನು ತೋಡಿಕೊಳ್ಳುತ್ತಿದ್ದರು.

**ಚಿತ್ರದುರ್ಗ ಎಂದೊಡನೆ ಕಣ್ಮುಂದೆ ಬರುವುದು ಭವ್ಯವಾದ ಕೋಟೆ, ಮದಕರಿ ನಾಯಕ, ಒನಕೆ ಓಬವ್ವ. ಜೊತೆಗೆ ಅಷ್ಟೇ ಪ್ರಮುಖವಾಗಿ ಕಂಡುಬರುವುದು ನೀರಿನ ಅಭಾವ. ಈ ನೀರಿನ ಅಭಾವ ಚಿತ್ರದುರ್ಗಕ್ಕೆ ಶಾಶ್ವತವಾಗಿ ಅಂಟಿಕೊಂಡಂತೆ ಕಾಣುತ್ತದೆ.**

ಚಿತ್ರದುರ್ಗವನ್ನೊಳಗೊಂಡಂತೆ ಇಡೀ ದಕ್ಷಿಣ ಭಾರತದ ವಿಶೇಷ ಲಕ್ಷಣವಾದ, ಮುಖ್ಯವಾಗಿ ಜನ ಜೀವನದ ನೀರಿನ ಮೂಲವಾದ ಈ ಕೆರೆ- ಬಾವಿಗಳು ತೀವ್ರವಾದ ನಿರ್ಲಕ್ಷ್ಯಕ್ಕೆ ಒಳಗಾಗಿರಲು ಮುಖ್ಯಕಾರಣ ಜನಗಳು ನೀರಿಗಾಗಿ ಇವುಗಳ ಬಳಿಗೆ ಹೋಗುವ ಬದಲು ನೀರೇ ಕೊಳವೆಗಳ ಮೂಲಕ ಮನೆಯೊಳಗೆ ಬರುತ್ತಿರುವುದು ಮತ್ತು ಕೃಷಿಗಾಗಿ ಬೃಹತ್ ಅಣೆಕಟ್ಟುಗಳು ನಿರ್ಮಾಣವಾಗಿರುವುದು, ಕೊಳವೆ ಬಾವಿಗಳ ಉಪಯೋಗ.

ಹೀಗೆ ಈ ಆಧುನಿಕ ಸೌಲಭ್ಯ ಇದ್ದಾಗಲೂ ಈ ಹಳೆಯ ಸಾಂಪ್ರದಾಯಿಕ ವ್ಯವಸ್ಥೆಗಳು ಸಾವಿರಾರು ವರ್ಷಗಳ ಕಾಲ ನೀರನ್ನಿತ್ತು ಮನುಷ್ಯನ ಜೊತೆಗೆ ಮರ ಗಿಡ, ಪ್ರಾಣಿ ಪಕ್ಷಿಗಳಿಗೆ ನೀರಿನ ಆಸರೆಯಾಗಿವೆ. ಹಲವಾರು ಮುತ್ತಿಗೆ ಯುದ್ಧಗಳಲ್ಲಿ ರಕ್ಷಣೆ ಕೊಟ್ಟು ದುರ್ಗದ ಜನರ ಜೀವ ಕಾಪಾಡಿ ದುರ್ಗದ ಪ್ರತಿಷ್ಠೆ ಹೆಚ್ಚಿಸಿ ಸ್ವಾತಂತ್ರ್ಯಹರಣ ವಾಗದಂತೆ ತಡೆದಿವೆ. ಬರಗಾಲದ ಪರಿಣಾಮವನ್ನು ಸಹ ಕಡಿಮೆ ಮಾಡಿವೆ. ಕೆರೆಗಳು ನೀರನ್ನು ಹಿಡಿದಿಟ್ಟುಕೊಳ್ಳುವುದಷ್ಟೆ ಅಲ್ಲದೆ ಅಂತರ್ಜಲ ಮಟ್ಟ ಹೆಚ್ಚಿಸಿ, ತಮ್ಮ ಸುತ್ತಮುತ್ತಲ ಹಲವಾರು ಕಿ.ಮೀ.ಗಳ ವ್ಯಾಪ್ತಿಯಲ್ಲಿನ ಗಿಡ-ಮರಗಳಿಗೆ ನೀರನ್ನು ಕೊಟ್ಟು ಅವುಗಳ ಬೆಳವಣಿಗೆಗೆ ಸಹಕರಿಸಿ ವಾತಾವರಣವನ್ನು ತಂಪಾಗಿಸಿ ಮತ್ತು ಶುದ್ಧ ಗಾಳಿಯನ್ನು ಪರಿಸರಕ್ಕೆ ನೀಡಿ ಮಾಲಿನ್ಯ ತಡೆದು ಸಹಕರಿಸುತ್ತವೆ. ಮೀನು ಸಾಕಾಣಿಕೆ ಕೃಷಿ ಮತ್ತು ಜಾನುವಾರುಗಳು ಸಂಪೂರ್ಣವಾಗಿ ಇವುಗಳ ಮೇಲೆ ಅವಲಂಬಿತವಾಗಿರುವುದು ಇವುಗಳ ಮಹತ್ವವನ್ನು ತಿಳಿಸುತ್ತದೆ. ಜತೆಗೆ ಮಣ್ಣಿನ ಸವಕಳಿಯನ್ನು ತಡೆಯುವುದು, ಕೆಳ ಪ್ರದೇಶದಲ್ಲಿ ಪ್ರವಾಹವನ್ನು ತಡೆಯುವುದು ಇವುಗಳ ಇತರ ಪ್ರಮುಖ ಉಪಯೋಗಗಳು.

ಚಿತ್ರದುರ್ಗದಲ್ಲಿರುವ ಈ ಕೆರೆ ಕಟ್ಟೆ ಬಾವಿಗಳು ಒಣಗಿ ಹಾಳಾಗಲು ಸತತ ಬರಗಾಲದ ಜೊತೆಗೆ ಜನರ ನಿರ್ಲಕ್ಷ್ಯ ಕಾರಣ. ಅವುಗಳನ್ನು ಹಾಳು ಮಾಡಿ ಹತ್ತಾರು ಅಡಿಗಳ ಹೂಳು ತುಂಬಿಕೊಂಡು ಅಂತರ್ಜಲದ ಮೂಲಗಳನ್ನು ಮುಚ್ಚಿಕೊಂಡಿವೆ ಮತ್ತು ನಗರ ವಿಸ್ತರಣೆಯಾದಂತೆ ಇವುಗಳೊಂದಿಗೆ ಇರುವ ಕಾಲುವೆಗಳೂ ಮುಚ್ಚಿಕೊಂಡಿರುವುದರಿಂದ ಇವುಗಳಿಗೆ ಹರಿಯುವ ನೀರಿನ ಪ್ರಮಾಣ ಕಡಿಮೆಯಾಗಿದೆ. ಈ ಅಪಾರ ಪ್ರಮಾಣದ ಹೂಳಿನಿಂದ ನೀರಿನ ಸಂಗ್ರಹಣ ಸಾಮರ್ಥ್ಯ ಅತಿ ಕನಿಷ್ಠಮಟ್ಟಕ್ಕೆ ತಲುಪಿದೆ. ಚಿತ್ರದುರ್ಗ ಪರಿಸರದಲ್ಲಿ ಮಳೆ ಕಡಿಮೆಯಾಗಲು ಉರುವಲಿಗಾಗಿ ಕಟ್ಟಿಗೆಯನ್ನು ಅವಲಂಬಿಸಿದ ಜನತೆ ಜೋಗಿ ಮಟ್ಟಿ ಮತ್ತು ಚಂದ್ರವಳ್ಳಿ ಪ್ರದೇಶದ ಅರಣ್ಯಗಳನ್ನು ಅವು ಮತ್ತೆ ಬೆಳೆಯದ

ಹಾಗೆ ಬೇರುಮಟ್ಟದವರೆಗೂ ಕಡಿದಿದ್ದರಿಂದ ಈ ಪರಿಸ್ಥಿತಿ ತಲೆದೋರಿದೆ. ಇನ್ನೂ ನಾಚಿಕೆಗೇಡಿನ ಸಂಗತಿ ಎಂದರೆ ಈ ಕೆರೆ ಬಾವಿಗಳನ್ನು ಕಟ್ಟಲು ಬಳಸಿದ ಕಲ್ಲುಗಳನ್ನೇ ಕಿತ್ತು ತಮ್ಮ ಮನೆಗಳನ್ನು ಕಟ್ಟಿಕೊಳ್ಳುತ್ತಿರುವುದು !

ನಗರ ಪ್ರದೇಶದಲ್ಲಿ ಮನೆಗಳು ವಿಸ್ತಾರವಾದಂತೆ ನೆಲಕ್ಕೆಲ್ಲ ಕಾಂಕ್ರೀಟ್ ಹಾಕಿ ಅಲ್ಲಿ ಬಿದ್ದ ಮಳೆ ನೀರು ನೆಲದಲ್ಲಿ ಸಹಜವಾಗಿ ಹಿಂಗುವುದು ತಪ್ಪಿಸಿದ್ದರಿಂದ ಅಂತರ್ಜಲ ಪಾತಾಳಕ್ಕಿಳಿದಿದೆ.



ಕಾಮನ ಬಾವಿ

ಹೀಗೆ ನಮ್ಮ ಜನಜೀವನದ ಮೂಲಾಧಾರವಾದ ನೀರಿನ ವ್ಯಾಪಕ ಸಂಪನ್ಮೂಲವಿದ್ದರೂ, ಅದನ್ನು ಬಳಸಿಕೊಳ್ಳುವ ಅನಿವಾರ್ಯ ಇದ್ದರೂ ಆ ಕಡೆ ಗಮನಕೊಡದೆ ಇನ್ನೆಲ್ಲೋ ಹತ್ತಾರು ಕಿ.ಮೀ. ದೂರದಲ್ಲಿರುವ ನೀರಿನ ಸಂಪನ್ಮೂಲಕ್ಕೆ ಕಣ್ಣುಹಾಕಿ ಕೋಟ್ಯಂತರ ರೂ. ವೆಚ್ಚಮಾಡಿ ಆ ನೀರನ್ನು ಇಲ್ಲಿಗೆ ತರುವುದು, ಈ ವಿಷಯವನ್ನಿಟ್ಟುಕೊಂಡು ರಾಜಕೀಯ ಮಾಡುವುದು, ಭ್ರಷ್ಟಾಚಾರಕ್ಕೆ ಕಾರಣ ಆಗುವುದು ಅತ್ಯಂತ ನಾಚಿಕೆಗೇಡಿನದಾಗಿದೆ, ಈ ದಡ್ಡತನ. ವೈಚಾರಿಕತೆ, ವೈಜ್ಞಾನಿಕ ಚಿಂತನೆ ಎಂದು ಬೊಬ್ಬೆ ಹೊಡೆದುಕೊಳ್ಳುವ ಈ ಸಂದರ್ಭದಲ್ಲಿ ಹೀಗೆ ಅವೈಜ್ಞಾನಿಕವಾಗಿ ಯೋಚಿಸಿದರೆ ಹೇಗೆ ?

ಈಗ ನಾವು ನಗರ ಪ್ರದೇಶದಲ್ಲಿರುವ ಬಾವಿಗಳತ್ತ (ಬತ್ತಿರುವ ಪುಷ್ಕರಣಿಗಳು) ಸ್ವಲ್ಪ ಕಣ್ಣಾಡಿಸೋಣ. ಜನಗಳು ಸಾಮಾನ್ಯವಾಗಿ ಬಾವಿಗಳೆಂದು ಕರೆದರೂ ತಾಂತ್ರಿಕವಾಗಿ ಅವುಗಳನ್ನು ಪುಷ್ಕರಣಿಗಳೆಂದು ಹೇಳಬಹುದು. ಅತಿ ಅಗಲವಾದ, ಆಳವಾದ ಈ ಪುಷ್ಕರಣಿಗಳು ಇಂದು ಹೂಳು ತುಂಬಿಕೊಂಡು ಬತ್ತಿರುವುದಲ್ಲದೆ ಕಸದ ಗುಂಡಿಗಳಾಗಿ ಮಾರ್ಪಡುತ್ತಿವೆ. ಈ ಎಲ್ಲಾ ಪುಷ್ಕರಣಿಗಳ ಕೆಳಭಾಗದಲ್ಲಿ ಕೊರೆದ ಬಾವಿ ಇರುವುದು ಸಾಮಾನ್ಯ. ಅಲ್ಲದೆ ಸಂತೆಹೊಂಡಕ್ಕೆ ನೀರು ಪೂರೈಸಲು ಒಂದು ವಿಶೇಷವಾದ ಕಾಲುವೆ ಇರುವುದು ವಿಶೇಷ. ಈ ಚಚ್ಚೌಕಾರದ ವಿಶೇಷ ಕಲಾತ್ಮಕ ನಿರ್ಮಾಣಗಳು ನಮ್ಮ ಗಮನವನ್ನು ಸೆಳೆದು ಮನಸ್ಸಿಗೆ ನೆಮ್ಮದಿ ಶಾಂತಿಯನ್ನು ಕೊಡುತ್ತವೆ.

**ಕೆಲ ಮುಖ್ಯ ಬಾವಿಗಳು**

೧. ಲಿಂಗಣ್ಣನ ಬಾವಿ – ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದ ಹತ್ತಿರ ಇರುವ ಇದು ಸಂಪೂರ್ಣವಾಗಿ ಬತ್ತಿದ್ದು, ಇದನ್ನು ಕಸದ ಗುಂಡಿಯನ್ನಾಗಿ ಬಳಸುತ್ತಿದ್ದು, ಇದು ಹೀಗೇ ಮುಂದುವರೆದರೆ ಅಲ್ಪಕಾಲದಲ್ಲೇ ಮುಚ್ಚಿಹೋಗಬಹುದು.

೨. ಚೆನ್ನತ್ತಿ ಹೊಂಡ – ಬೋವಿ ಕಾಲೋನಿಯ ಪಕ್ಕದಲ್ಲಿರುವ ಇದನ್ನು ಗಮನಿಸಿದರೆ ಆಶ್ಚರ್ಯವಾಗಬಹುದು. ಕಾರಣ ಇದು ಸದಾಕಾಲ ತುಂಬಿರುತ್ತದೆ. ಹಾಗೆಂದು ಈ ನೀರನ್ನು ಬಳಸಲು ಬರುವುದಿಲ್ಲ. ಏಕೆಂದರೆ ಕೊಳಚೆ ಪ್ರದೇಶದ ತಗ್ಗಿನಲ್ಲಿರುವ ಇದಕ್ಕೆ ಅಲ್ಲಿನ ನಿವಾಸಿಗಳು ತಮ್ಮ ತ್ಯಾಜ್ಯ ನೀರನ್ನು ಬಿಡುತ್ತಾರೆ. ಹಿಂದೆ ಕುಡಿಯಲು ಮತ್ತು ಬಳಸಲು ನೀರನ್ನು ಪೂರೈಸುತ್ತಿದ್ದ ಈ ಹೊಂಡ ಇಂದು ಆ ಬಳಸಿದ ನೀರನ್ನು ಹಿಡಿದಿಟ್ಟುಕೊಳ್ಳುವ ಕೊಳಕು ಗುಂಡಿಯಾಗಿದೆ.

೩. ಚೆನ್ನಕೇಶವ ಸ್ವಾಮಿ ದೇವಸ್ಥಾನದ ಬಾವಿ – ಇದು ಸಹ ಸಂಪೂರ್ಣ ಬತ್ತಿದ್ದು ಇದರಲ್ಲಿ ಕಸ, ಕಡ್ಡಿ, ಪ್ಲಾಸ್ಟಿಕ್ ತ್ಯಾಜ್ಯಗಳನ್ನು ತುಂಬಿಕೊಳ್ಳುತ್ತಿದ್ದು ಅದರ ಸುತ್ತ ಬೆಳೆದ ಆಲದ ಮರದಿಂದ ಅದು ವಿನಾಶದತ್ತ ಸಾಗಿದೆ.

೪. ಸಂಗಪ್ಪನ್ನ ಬಾವಿ, ಕೆರೆ ಅಂಗಳದ ಬಾವಿ – ಕೆ.ಎಸ್.ಆರ್.ಟಿ.ಸಿ. ಡಿಪ್ಪೋ ಹಿಂಭಾಗದಲ್ಲಿರುವ ಈ ಬಾವಿಗಳು ಸಂಪೂರ್ಣವಾಗಿ ಬತ್ತಿದ್ದು ಅದರ ಸುತ್ತಲಿನ ಕಲ್ಲಿನ ಕಟ್ಟಡ ಶಿಥಿಲಗೊಂಡು ಬೀಳುವಂತಿವೆ.

೫. ಕೆಂಚಮಲ್ಲಪ್ಪನ ಬಾವಿ – ರಾಷ್ಟ್ರೀಯ ಹೆದ್ದಾರಿಯಲ್ಲಿ ಎಲ್.ಐ.ಸಿ. ಕಚೇರಿ ಪಕ್ಕದಲ್ಲಿರುವ ಬೃಹತ್ ಪುಷ್ಕರಣಿ ಕೂಡ ಪೂರ್ತಿ ಬತ್ತಿದ್ದು ಕಾಯಕಲ್ಪಕ್ಕೆ ಕಾಯುತ್ತಿದೆ.

೬. ಈ ಎಲ್ಲಕ್ಕೂ ಮುಖ್ಯವಾಗಿ ಅತಿ ಪ್ರಸಿದ್ಧವಾದದ್ದು ಸಂತೆಹೊಂಡ. ಅತ್ಯಂತ ವ್ಯವಸ್ಥಿತವಾದ ೧೦೦ ಅಡಿ ಆಳದ ಈ ಬೃಹತ್ ಪುಷ್ಕರಣಿಯನ್ನು ಬರಮಣ್ಣ ನಾಯಕ ಕಟ್ಟಿಸಿದನೆಂದು ಹೇಳುತ್ತಾರೆ. ಇದರಲ್ಲಿ ನೀರು ಗರಿಷ್ಠ ಪ್ರಮಾಣದಲ್ಲಿ ಶೇಖರಿಸಿಕೊಳ್ಳುವಂತೆ ಮಾಡಿ ಅದನ್ನು ವ್ಯವಸ್ಥಿತವಾಗಿ ಬಳಸಿಕೊಳ್ಳುವ ದೃಷ್ಟಿಯಲ್ಲಿ ಯೋಜನೆ ಹಾಕಬೇಕಾಗಿದೆ. ಸುತ್ತಮುತ್ತಲ ವ್ಯಾಪಾರಿಗಳು ಇದರಲ್ಲಿ ಕಸ ಹಾಕದಂತೆ ಕೂಡಲೇ ತಡೆಯಬೇಕಾಗಿದೆ.

**ಬೆಟ್ಟ ಪರಿಸರದ ಬಾವಿಗಳು, ಹೊಂಡಗಳು**

ಪಾಳೆಗಾರರ ಕಾಲದವರೆಗೂ ಅತ್ಯಂತ ಜನನಿಬಿಡ ನಗರವಾಗಿದ್ದ ಕೋಟೆ ಪ್ರದೇಶ ದಲ್ಲಿ ಆ ಜನಸಮೂಹಕ್ಕೆ ಮತ್ತು ರಾಜ ಪರಿವಾರಕ್ಕೆ ನೀರನ್ನು ಒದಗಿಸಲು ನೀರಿನ ಸಂಗ್ರಹಕಗಳು ಅತ್ಯಂತ ಅಗತ್ಯವಾಗಿದ್ದವು. ಅವುಗಳಲ್ಲಿ ಮುಖ್ಯವಾದವು:

**೧. ನಾಗತೀರ್ಥ ಹರವು** : ಅರಮನೆ ಆವರಣದಲ್ಲಿರುವ ಇದು ಅಂದು ರಾಜ ಪರಿವಾರಕ್ಕೆ ಸೀಮಿತವಾಗಿದ್ದಿರಬಹುದು. ಈ ಹೊಂಡದಲ್ಲಿ ಕಳೆ ಬೆಳೆದು ಕೆಲ ಭಾಗದಲ್ಲಿ ಕಲ್ಲುಗಳು ಬಿದ್ದು ಅಳಿವಿನ ಹಂತದಲ್ಲಿದೆ.

**೨. ಗೋಪಾಲಸ್ವಾಮಿ ಹೊಂಡ** : ದುರ್ಗದ ಜನತೆಯ ಮನೆ ಮನಸ್ಸಿನಲ್ಲಿ ಪ್ರಸಿದ್ಧವಾಗಿರುವ ಹಲವಾರು ಭಯಾನಕ ಊಹಾಪೋಹಗಳಿಗೆ ಕಾರಣವಾಗಿರುವ ಹೊಂಡ. ದೊಡ್ಡದಾಗಿರುವ ಕಾರಣ ಇದನ್ನು ದೊಡ್ಡ ಹೊಂಡ ಎಂದು ಕರೆಯುತ್ತಾರೆ. ಹೆಚ್ಚು ಪ್ರಸಿದ್ಧ ವಾಗಿರುವುದೂ ಆ ಹೆಸರಿನಿಂದ. ಈ ನಿಂತ ನೀರಲ್ಲಿ ಹತ್ತಾರು ವರ್ಷಗಳಿಂದ ಸಾವಿರಾರು ಜನರು ಈಜಾಡುವುದು, ಸ್ನಾನ ಮಾಡುವುದು, ಮಲಮೂತ್ರ ವಿಸರ್ಜನೆ ಮಾಡುವುದು, ಮತ್ತು ವ್ಯಾಪಕವಾಗಿ ಬಟ್ಟೆ ತೊಳೆಯುವುದರಿಂದ ಈ ನೀರು ಯಾವುದೇ ಉಪಯೋಗಕ್ಕೆ ಬಾರದಷ್ಟು ಮಲಿನಗೊಂಡಿದೆ. ಈಗ ಬಟ್ಟೆ ತೊಳೆಯುವುದು ನಿರ್ಬಂಧಿಸಿದರೂ ಈಜು, ಸ್ನಾನ ಇತ್ಯಾದಿ ಮಲಿನ ಕಾರಕ ಕೆಲಸಗಳು ನಿಂತಿಲ್ಲ. ಇದರ ಬಗ್ಗೆ ಗಮನ ಕೊಡುವ ಅವಶ್ಯಕತೆ ಹೆಚ್ಚಿದೆ.

**೩. ಅಕ್ಕ-ತಂಗಿ ಹೊಂಡ** : ಇವು ಕೂಡ ಪ್ರಸಿದ್ಧ ಹೊಂಡಗಳೇ. ಆದರೆ ಇವುಗಳಲ್ಲಿ ನೀರೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಹೂಳು ತುಂಬಿಕೊಂಡು ಕಳೆ ಬೆಳೆದಿದೆ. ಒಂದು ಹೊಂಡ ಮೊದಲಿನಿಂದಲೂ ಹಾಗೆ ಇದ್ದರೂ ಇನ್ನೊಂದು ಹೊಂಡದ ನೀರು ಸುಮಾರು ೭-೮ ವರ್ಷದ ಹಿಂದೆ ಶುಭ್ರ ಸ್ಫಟಿಕದಷ್ಟು ಶುಚಿಯಾಗಿ ಮತ್ತು ರುಚಿಯಾಗಿತ್ತು. ಆದರೆ ಪ್ರವಾಸಿಗರು ಎಸೆದ ಪ್ಲಾಸ್ಟಿಕ್ ಇತರೆ ತ್ಯಾಜ್ಯಗಳು ಇಲ್ಲಿ ಕಳೆ ಬೆಳೆಯಲು ಆಸ್ಪದ ನೀಡಿದವು. ಸಂಬಂಧಪಟ್ಟ ಇಲಾಖೆಯವರು ಇದನ್ನು ನಿರ್ಲಕ್ಷಿಸಿದ್ದರಿಂದ ಇದು ಕೂಡ ಅದೇ ದಾರಿ ಹಿಡಿಯಿತು. ೨ ವರ್ಷಗಳ ಹಿಂದೆ ಹೂಳು ತೆಗೆಯುವ



ಗೋನೂರು ಕೆರೆ

ಮುಂದಿನ ಪುಟಕ್ಕೆ

# ಸಾದರ ಸ್ವೀಕಾರ

**ಬೆಳಕು ಹಂಚಿದ ಬಾಲಕ ಮತ್ತು ನಾನು ಗಾಂಧಿ ಆಗ್ತೇನೆ** (ಮಕ್ಕಳ ನಾಟಕ) *ಡಾ॥ ಆರ್. ವಿ. ಭಂಡಾರಿ*
**ಪುಟ :** *೫೬* **ಬೆಲೆ :** *ರೂ. ೨೫*
**ಬಂಡಾಯ ಪ್ರಕಾಶನ,** ಅರೆಅಂಗಡಿ, ಹೊನ್ನಾವರ -೫೮೧ ೪೩೦

**ಹರಕೆಯ ಕುರಿಗಳು** (ವೈಚಾರಿಕ ಲೇಖನಗಳ ಸಂಗ್ರಹ)
ವಿಶ್ವಾರಾಧ್ಯ ಸತ್ಯಂಪೇಟೆ
**ಪುಟ :** *೧೦೨* **ಬೆಲೆ :** *ರೂ. ೭೫*
**ಅಗ್ನಿ ಅಂಕುಶ ಪತ್ರಿಕೆ ಪ್ರಕಾಶನ,** ಶಹಾಪುರ, ಕಲ್ಬುರ್ಗಿ ಜಿಲ್ಲೆ

**ಥೇಮ್ಸ್ ನದಿಯ ದಡದಲ್ಲಿ** (ಪ್ರವಾಸಿ ಕಥನ)
ವ್ಹಿ. ಸಿ. ಮಾಲಗತ್ತಿ
**ಪುಟ :** *೧೦೬* **ಬೆಲೆ :** *ರೂ. ೮೦*
**ಮಾಲಗತ್ತಿ ಆಫ್‌ಸೆಟ್ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್** ಬೆಳಗಾವಿ

**ಚಿತ್ರ ಚಿತ್ತ** (ಕವನ ಸಂಕಲನ) ಅಶೋಕ್‌ಕುಮಾರ್ ಎಂ. ಬಿ.
**ಪುಟ :** *೧೨೪* **ಬೆಲೆ :** *ರೂ. ೬೦*
**ಕಲಾನಿಕೇತನ ಪ್ರಕಾಶನ,** ಶ್ರೀ ಬಸವೇಶ್ವರ ಚಿತ್ರಕಲಾ ಮಹಾವಿದ್ಯಾಲಯ, ಬಸವಕಲ್ಯಾಣ, ಬೀದರ ಜಿಲ್ಲೆ

**ಇದು ಕವಿ ಸಮಯವಲ್ಲ** (ಕವನ ಸಂಕಲನ)
ಹೆಚ್. ಶೇಷಗಿರಿ ರಾವ್
**ಪುಟ :** *೭೦* **ಬೆಲೆ :** *ರೂ. ೩೦*
**ಮಲ್ಲಿಗೆ ಪ್ರಕಾಶನ,** ಹೂವಿನ ಹಡಗಲಿ, ಬಳ್ಳಾರಿ ಜಿಲ್ಲೆ

**ಸಮಷ್ಟಿ** (ಲೇಖನ ಸಂಗ್ರಹ) *ಡಾ॥ ಎಂ. ಎಸ್. ಪಾಟೀಲ*
**ಪುಟ :** *೧೨೦* **ಬೆಲೆ :** *ರೂ. ೬೦*
**ನಮ್ಮ ಅನುವಾದಕ** (ಪ್ರೊ॥ ಭಾಲಚಂದ್ರ ಜಯಶೆಟ್ಟಿ ಅಭಿನಂದನ ಗ್ರಂಥ)
ಸಂ. ಡಾ॥ ಮಲ್ಲಿಕಾರ್ಜುನ ಶಿವಪ್ಪಲಡ್ಡೆ

**ಪುಟ :** *೪೬೦* **ಬೆಲೆ :** *ರೂ. ೩೪೦*
ಮೇಲಿನ ಎರಡೂ ಪುಸ್ತಕಗಳ ಪ್ರಕಾಶಕರು
ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಸರಸ್ವತಿ ಗೋದಾಮ, ಗುಲಬರ್ಗಾ

**ಬೆಂಕಿಯೂ ನಾನೇ ಆಹುತಿಯೂ ನಾನೇ** (ಲೇಖನ ಸಂಗ್ರಹ) ಸಂ. ಶಶಿಧರ ಹೆಮ್ಮಾಡಿ
**ಪುಟ :** *೧೦೦* **ಬೆಲೆ :** *ರೂ. ೨೫*
**ತಿಂಗಳ ಬೆಳಕು ಪ್ರಕಾಶನ,** ಕುಂದಾಪುರ - ೫೭೬ ೨೦೧

**ಲೋಹಾದ್ರಿಯ ಮಡಿಲು** (ಸ್ಮರಣ ಸಂಚಿಕೆ)
ಪ್ರ.ಸಂ. ಡಾ॥ ಎ. ವೃಷಬೇಂದ್ರಾಚಾರ್
**ಪುಟ :** *೮೮* **ಬೆಲೆ :** *ರೂ. ೧೦೦*
**ಹೊಸಮನಿ ಪ್ರಾಂತ ಸಾಹೇಬರು** (ಜೀವನ ಚಿತ್ರಣ)
ಡಾ॥ ಸಿ. ಜಿ. ಹತ್ತಿ
**ಪುಟ :** *೯೩* **ಬೆಲೆ :** *ರೂ. ೫*
**ಲಿಂಗಾಯತ ಅಧ್ಯಯನ ಸಂಸ್ಥೆ** ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ-ಗದಗ

**ಮಹದೇವ ಬಣಕಾರ** (ಜೀವನ ಚಿತ್ರಣ)
ಬೆನಕನಹಳ್ಳಿ ಶೇಖರಗೌಡ
**ಪುಟ :** *೧೧೨* **ಬೆಲೆ :** *ರೂ. ೧೦*
**ಶಿಕ್ಷಣತಜ್ಞ ಎಂ. ಪಿ. ಜಾಲಿ** (ಜೀವನ ಚಿತ್ರಣ).
ಪ್ರೊ॥ ಬಸವರಾಜ ಗೊರವರ
**ಪುಟ :** *೮೪* **ಬೆಲೆ :** *ರೂ. ೫*
**ಶಾಸ್ತ್ರಿ ಮಲ್ಲನಗೌಡ** (ಜೀವನ ಚಿತ್ರಣ)
ಡಾ॥ ಚನ್ನಬಸವ ಹಿರೇಮಠ
**ಪುಟ :** *೮೮* **ಬೆಲೆ :** *ರೂ. ೫*
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ವೀರಶೈವ ಅಧ್ಯಯನ ಸಂಸ್ಥೆ,** ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ, ಗದಗ

---

*ಹಿಂದಿನ ಪುಟದಿಂದ*

ಕೆಲಸ ನಡೆದರೂ ಅದು ಪೂರ್ಣಗೊಳ್ಳದೆ ಅವು ಮತ್ತೆ ಮೊದಲಿನಂತೆ ಆಗಿವೆ.

**೪. ತಣ್ಣೀರು ದೋಣಿ :** ಈ ತಣ್ಣೀರು ದೋಣಿಯದು ಕಣ್ಣೀರು ಕತೆ. ತನ್ನ ಒಡಲಲ್ಲಿ ಸದಾ ಕಾಲ ತಣ್ಣಗಿನ ನೀರನ್ನು ಇಟ್ಟುಕೊಂಡು ಜನರನ್ನು ಆಕರ್ಷಿಸುವ ಈ ದೋಣಿ ಬೆಟ್ಟದ ಜನರ ದಾಹವನ್ನು ಇಂಗಿಸಿ ಉತ್ಸಾಹವನ್ನು ನೀಡುತ್ತದೆ. ಆದರೆ ಬಳಸುವವರು ಅದರ ಶುಚಿತ್ವವನ್ನು ನಿರ್ಲಕ್ಷಿಸುವುದರಿಂದ ಮಲಿನ ಗೊಂಡು ದುರ್ನಾತ ಬೀರುತ್ತಿದೆ. ಇದರ ಶುಚಿತ್ವ ಕಾಪಾಡುವುದರ ಕಡೆಗೆ ಗಮನ ಕೊಡಬೇಕಾಗಿದೆ.

**೫. ಸಿಹಿನೀರು ಹೊಂಡ :** ಕೋಟೆ ಹಿಂಭಾಗದ ಬುಡದಲ್ಲಿರುವ ಈ ಹೊಂಡ ಅಗಲದಲ್ಲಿ ಕಿರಿದಾದರೂ ನೂರಾರು ಅಡಿಗಳ ಉದ್ದವಿದ್ದು ಕಂದಕದಂತಿದೆ. ನೀರನ್ನು ಸಂಗ್ರಹಿಸಿಟ್ಟುಕೊಳ್ಳುವುದರ ಜೊತೆಗೆ ಕೋಟೆಗೆ ರಕ್ಷಣೆಯನ್ನು ನೀಡುತ್ತಿದೆ. ಸಂಪೂರ್ಣ ಹೂಳಿನಿಂದ ತುಂಬಿರುವ ಈ ಹೊಂಡದಲ್ಲಿ ಮೊಣಕಾಲುದ್ದ ನೀರು ನಿಲ್ಲುತ್ತದೆ. ಈ ಕಾರಣಕ್ಕಾಗಿ ಹೂಳೆತ್ತಲು ಸಂಬಂಧಪಟ್ಟ ಇಲಾಖೆಯವರು ೨೦ಲಕ್ಷ ರೂ. ಅನುದಾನ ನೀಡಿ ಆ ಸಂಬಂಧ ಉದ್ಘಾಟನೆ ಸಮಾರಂಭವನ್ನು ಕೂಡ ನಡೆಸಿದ್ದರು. ಆದರೆ ಅದೇ ಸಮಾರೋಪ ಸಮಾರಂಭ ಕೂಡ ಆಗಿದ್ದು ವಿಪರ್ಯಾಸ. ೨೦ ಲಕ್ಷ ಎಲ್ಲಿ ಹೋಯಿತೆಂದು ಯಾರಿಗೂ ಗೊತ್ತಿಲ್ಲದಿರುವುದು ವಿಸ್ಮಯ.

**೬. ಕರುವರ್ತಿ ಬಾವಿ :** ಬೆಟ್ಟದ ಬುಡದಲ್ಲಿರುವ ಅತ್ಯಂತ ಸುಂದರ ಕಲಾತ್ಮಕ ರಚನೆಯ ವಿಶಿಷ್ಟ ಪುಷ್ಕರಣಿ. ಈ ಪುಟ್ಟದಾದ ಪುಷ್ಕರಣಿಯಲ್ಲಿರುವ ಜಾಮಿತಿಯ ನಿರ್ಮಾಣಗಳು ಆ ಬಾವಿಗೆ ಸೀಮಿತವಾಗಿವೆ. ಮತ್ತು ತನ್ನ ಎದುರಿಗಿರುವ ಕರುವರ್ತೇಶ್ವರ ದೇವಸ್ಥಾನ ಕೂಡ ಅತ್ಯಂತ ಕಲಾತ್ಮಕ, ಸೂಕ್ಷ್ಮ ಕೆತ್ತನೆಗಳಿಂದ ಅಲಂಕೃತಗೊಂಡು ಚಿತ್ರದುರ್ಗದ ದೇವಸ್ಥಾನಗಳಲ್ಲಿ ತನ್ನ ಸ್ಥಾನವನ್ನು ವಿಶಿಷ್ಟಗೊಳಿಸಿದೆ. ೩೦ ಅಡಿಗೂ ಹೆಚ್ಚು ಆಳ ಇರುವ ಈ ಪುಷ್ಕರಣಿ ಶೇಕಡ ೯೦ ಭಾಗ ಹೂಳಿನಿಂದ ತುಂಬಿಹೋಗಿತ್ತು. ಇದನ್ನು ಮನಗಂಡ ಸ್ಥಳೀಯ ಯುವ ಮುಖಂಡರ ನೇತೃತ್ವದಲ್ಲಿ ಯುವಕರು ಆ ಹೂಳನ್ನು ಸಂಪೂರ್ಣ ತೆಗೆದುಹಾಕಿದ ನಂತರವೇ ಆ ವಿಶಿಷ್ಟ ನಿರ್ಮಾಣ ಗೋಚರಗೊಂಡಿದ್ದು. ಹಳೆ ತಲೆಮಾರಿನ ಜನತೆಯು ಅದನ್ನು ನೋಡಿರಲಿಲ್ಲ. ಈ ಕೆಲಸ ಸ್ಥಳೀಯರು ಇಂತಹ ಅಭಿಮಾನ ಪಡುವ ಕೆಲಸದಲ್ಲಿ ಪಾಲ್ಗೊಂಡರೆ ಆಗುವ ಲಾಭವನ್ನು ತೋರಿಸುತ್ತದೆ.

ಇನ್ನು ಅನೇಕ ಕಂದಕ, ಕೆರೆ, ಘಾಟ್, ಒಡ್ಡುಗಳ ಪರಿಸ್ಥಿತಿಯೂ ಬಹು ಚಿಂತಾಜನಕ ಸ್ಥಿತಿಯಲ್ಲಿದ್ದು ಸಂಬಂಧಪಟ್ಟವರಿಂದ ದುರಸ್ತಿಗಾಗಿ ಹಾತೊರೆಯುತ್ತಿವೆ.

ನೂರಾರು ಬಾವಿಗಳ ನೀರನ್ನು ದುರ್ಗದ ಜನತೆ ಇಂದು ಕೂಡ ಹೆಚ್ಚಿನ ಪ್ರಮಾಣದಲ್ಲಿ ಬಳಸುತ್ತಿದ್ದು ನಲ್ಲಿ ನೀರು ಕೈಕೊಟ್ಟರೆ ಈ ಬಾವಿಗಳೇ ಆಧಾರವಾಗಿವೆ. ಗಮನಿಸಬೇಕಾದ ಕೆಲ ಅಂಶಗಳಲ್ಲಿ ಚಿಕ್ಕಪೇಟೆ ಮತ್ತು ಅಯ್ಯಣ್ಣನ ಪೇಟೆಯಲ್ಲಿರುವ ಬಾವಿಗಳು ಹೆಚ್ಚು ಕಮ್ಮಿ ಒಂದೇ ಸರಳ ರೇಖೆಯಲ್ಲಿರುವಂತೆ ಕಂಡುಬರುತ್ತವೆ. ಇಲ್ಲಿ ಅಂತರ್ಜಲ ಪ್ರಾಕೃತಿಕ ಕಾಲುವೆ ಇರುವ ಸಾಧ್ಯತೆ ಇದೆ.

ಈ ಅಂಶಗಳನ್ನೆಲ್ಲ ಕ್ರೋಢೀಕರಿಸಿಕೊಂಡು ಆ ಜಲಸಂಪನ್ಮೂಲಗಳ ಸಂರಕ್ಷಣೆಗೆ, ಪುನರೋದ್ಧಾರಕ್ಕೆ, ಮುಂತಾದ ಕಾರ್ಯಗಳಿಗೆ ನಗರದ ನಾಗರಿಕರು ಪ್ರಾಮಾಣಿಕವಾಗಿ ಕಾರ್ಯೋನ್ಮುಖರಾಗಬೇಕು. ಮತ್ತು ಸರ್ಕಾರದ ವಿವಿಧ ಇಲಾಖೆಗಳಾದ ಅರಣ್ಯ ಇಲಾಖೆ, ಸಣ್ಣ ನೀರಾವರಿ ಇಲಾಖೆ, ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ನಗರಾಭಿವೃದ್ಧಿ ಪ್ರಾಧಿಕಾರ, ಜಲಾನಯನ ಪ್ರದೇಶ ಅಭಿವೃದ್ಧಿ ಮಂಡಳಿ, ಬಯಲು ಸೀಮೆ ಅಭಿವೃದ್ಧಿ ಮಂಡಳಿ, ಕೇಂದ್ರ ಸರ್ಕಾರದ ಪುರಾತತ್ವ ಸರ್ವೇಕ್ಷಣ ಇಲಾಖೆ, ಸ್ಥಳೀಯ ಆಡಳಿತ ಸಂಸ್ಥೆಗಳಾದ ನಗರಸಭೆ, ಜಿಲ್ಲಾ ಪಂಚಾಯತ್ ಮತ್ತು ಸಂಸತ್ ಸದಸ್ಯರ ಸ್ಥಳೀಯ ಪ್ರದೇಶಾಭಿವೃದ್ಧಿ ನಿಧಿ, ಶಾಸಕರ ಅನುದಾನ ಹೀಗೆ ಹತ್ತು ಹಲವು ಆರ್ಥಿಕ ಮತ್ತು ಇತರೆ ಸಂಪನ್ಮೂಲಗಳನ್ನು ಹೊಂದಿರುವ ಇಲ್ಲವೆ ಅಗತ್ಯವಾದ ಸಂಪನ್ಮೂಲಗಳನ್ನು ದೊರಕಿಸಿಕೊಡುವ ಈ ಎಲ್ಲಾ ಸಂಸ್ಥೆಗಳ ಮುಖ್ಯಸ್ಥರು ಈ ಬಗ್ಗೆ ಹೆಚ್ಚು ಆಸಕ್ತಿ ವಹಿಸುವುದು ಅನಿವಾರ್ಯ ವಾಗಿದೆ. ಅಲ್ಲದೆ ಅಪಾರ ಪ್ರಮಾಣದಲ್ಲಿರುವ ಯುವ ಶಕ್ತಿಯನ್ನು ಈ ಕೆಲಸಕ್ಕೆ ತೊಡಗಿಸಿಕೊಳ್ಳಬಹುದು.

ಶಿವಶಕ್ತಿ ಪ್ರಸನ್ನಕುಮಾರ್
ಶ್ರೀ ಏಕನಾಥೇಶ್ವರಿ [illegible], ಚಿತ್ರದುರ್ಗ

# ಗೋಕಾಕ್ ವರದಿ, ಭಾಷಾ ಯಜಮಾನಿಕೆ ಮತ್ತು....

**ಒಂ**ದು ಭಾಷೆಯ ಯಜಮಾನಿಕೆಯು ಕೇವಲ ಭಾಷೆಯ ಯಜಮಾನಿಕೆಯಾಗಿರುವುದಿಲ್ಲ; ಆ ಭಾಷೆಯನ್ನು ಆಡುವವರ ಯಜಮಾನಿಕೆಯೇ ಆಗಿರುತ್ತದೆ. ಅಂತಹ ಯಜಮಾನಿಕೆಯ ಎದುರಿನಲ್ಲಿ ಕಾಣುವ ಭಾಷೆಯು ಅದರ ಪರವಾದ ಮೇಲರಿಮೆಯನ್ನು ಮತ್ತು ತನ್ನ ಪರವಾದ ಕೀಳರಿಮೆಯನ್ನು ಹೊಂದಿರುತ್ತದೆ. ಇಲ್ಲಿ ಒಡೆಯ ಮತ್ತು ಆಳು ಎಂಬ ವರ್ಗಭೇದದ ಮನಸ್ಥಿತಿ ನೆಲೆಗೊಂಡು ಅಸಮಾನ ಸಮಾಜ ವ್ಯವಸ್ಥೆಯೂ ಪೋಷಣೆಗೊಳ್ಳುತ್ತಿರುತ್ತದೆ. ಇಂಥಲ್ಲಿ ಮೇಲ್‌ಸ್ತರದ್ದಾಗುವ ಭಾಷೆ ದುಷ್ಟ 'ಅಹಂ'ಅನ್ನು ಪಡೆದು ಕೊಬ್ಬುತ್ತಿದ್ದರೆ, ಕೆಳಸ್ತರದಲ್ಲಿ ಕೈಕಟ್ಟಿಕೊಂಡು ನಿಲ್ಲುವ ಭಾಷೆಯು ಗುಲಾಮೀ ಮನಸ್ಥಿತಿಯಿಂದ ಕುಬ್ಜವಾಗುತ್ತಿರುತ್ತದೆ. ಇದು ವರ್ಗ ಸಮಾಜದ ಅನೇಕ ವಿಕೃತಿಗಳಲ್ಲಿ ಒಂದು.

ಇಂತಹ ವರ್ಗದ ಕಲ್ಪನೆ ಕನ್ನಡದಲ್ಲಿಯೂ ಇದೆ. ಸುಮಾರು ೧,೫೦೦ ವರ್ಷಗಳ ಕನ್ನಡ ಸಾಹಿತ್ಯ ಚರಿತ್ರೆಯು ಇದಕ್ಕೆ ಭಿತ್ತಿಯಾಗಿದೆ. ಈ ಭಿತ್ತಿಯ ಚಾರಿತ್ರಿಕ ಪರಿಶೀಲನೆ ಇಲ್ಲಿ ಸಾಧ್ಯವಾಗಬೇಕು.

**ಸಂಸ್ಕೃತ ಪುರೋಹಿತಶಾಹಿ**

ಕನ್ನಡದ ಸಂದರ್ಭದಲ್ಲಿ ಮೊದಲು ಯಜಮಾನಿಕೆಯನ್ನು ವಹಿಸಿದ್ದು, ಸಂಸ್ಕೃತ ಭಾಷೆ. ಸಂಸ್ಕೃತವು ಭಾಷಿಕವಾಗಿ ಮೇಲ್‌ಸ್ತರದ್ದಾಗಲು ಕಾರಣ, ಅದನ್ನು ಆಡುತ್ತಿದ್ದವರು ಮತ್ತು ಅವರ ಸಾಮಾಜಿಕ ಅಂತಸ್ತು. ಇದು ನಮ್ಮ ಸಾಮಾಜಿಕ ಶ್ರೇಣೀಕರಣ ವ್ಯವಸ್ಥೆಯಲ್ಲಿ ಮೇಲ್‌ಸ್ತರದ್ದಾದುದರಿಂದ ಸಂಸ್ಕೃತ ಭಾಷೆಗೆ ಮೊದಲ ದರ್ಜೆಯ ಸ್ಥಾನವು ಸಿಕ್ಕಿತು. ಇದನ್ನು ಬಳಸುವವರು ದೇವರು ಮತ್ತು ದೇವದೂತರಾದುದರಿಂದ ಇದಕ್ಕೆ ದೇವಭಾಷೆಯ ಪಟ್ಟವೂ ಸಿಕ್ಕಿತು. ಈ ಅನಾಯಾಸ ಪಟ್ಟಕ್ಕೆ ಸಂಸ್ಕೃತದ ಮಸಲತ್ತು ಇಲ್ಲ; ಅದನ್ನು ಬಳಸುತ್ತಿದ್ದವರದು ಇದೆ.

ಇಂತಹ ಭಾಷೆ ಕನ್ನಡದ ಮೇಲಿನ ಯಜಮಾನಿಕೆಯನ್ನು ಮಾಡಿದೆ. ಇದು ಎರಡು ಸಾವಿರ ಅಥವಾ ಅದಕ್ಕೂ ಮೀರಿದ ಸಾವಿರ ವರ್ಷಗಳ ಸತ್ಯ. ಇದನ್ನು ಮೊಟ್ಟ ಮೊದಲಿಗೆ ವ್ಯಾಪಕವಾಗಿ ಪ್ರತಿರೋಧಿಸಿದವರು ವಚನಕಾರರು. ಇದಕ್ಕೆ ಹೊರತಾದ ಸ್ನೇಹ-ಸಾಮರಸ್ಯದ ಸಂಬಂಧವು ಸಹ ಕನ್ನಡ ಸಾಹಿತ್ಯಕ್ಕೆ ಇತ್ತು. ಈ ಸಂಬಂಧದ ನೆಲೆಯಲ್ಲಿ ಕವಿರಾಜ ಮಾರ್ಗಕಾರ, ಪಂಪ, ರನ್ನ, ಜನ್ನ ಮೊದಲಾದವರು ಅದನ್ನು ಕಲಿತು ಕನ್ನಡವನ್ನು ಶ್ರೀಮಂತಗೊಳಿಸಿದ್ದಾರೆ. ಇವರಿಗೆ ಕಾವ್ಯ ಮತ್ತು ಜನ – ಈ ಎರಡು ಆದ್ಯತೆಗಳಲ್ಲಿ ಮೊದಲನೆಯದಾದ ಕಾವ್ಯವು ಆಯ್ಕೆಯಾಗುತ್ತದೆ. ಇದು 'ಕಲೆಗಾಗಿ ಕಲೆ' ಎಂಬ ತತ್ತ್ವದ ನೆಲೆಯದ್ದು. ಇನ್ನು ಎರಡನೆಯದಾಗಿ, ಜನ ಇವರ ಮೊದಲ ಆದ್ಯತೆಯಾಗಿ ಇದ್ದಿದ್ದರೆ ಅಲ್ಲಿ 'ಜನತೆಗಾಗಿ ಕಲೆ' ಎಂಬ ತತ್ತ್ವ ನೆಲೆಯಾಗುತ್ತಿತ್ತು. ಅಲ್ಲಿ ಅವರಿಗೆ ಕೇವಲ ಕಾವ್ಯದ ಮೇಲಿನ ಜವಾಬ್ದಾರಿಗಿಂತ ಕಾವ್ಯದ ಮೂಲಕವಾದ ಜನತೆಯ ಮೇಲಿನ ಜವಾಬ್ದಾರಿ ಮುಖ್ಯವಾಗುತ್ತಿತ್ತು. ಹೀಗೆ ಜನರಿಗಿಂತ ಕಲೆ ಮೊದಲ ಆದ್ಯತೆಯಾದ್ದರಿಂದ ಸಂಸ್ಕೃತ ಭಾಷೆಯಾಗಲೀ ಅದರೊಳಗಿನ ಜನವಿದೂರ ವಿಚಾರಗಳಾಗಲೀ ಪ್ರಧಾನವಾಗಲಿಲ್ಲ. ಬದಲಿಗೆ ಇವರು 'ಕವಿ'ಗಳಾಗಿ ಜನಲೋಕಕ್ಕೆ ಕೊಂಚ ದೂರವಾದ ಕಾವ್ಯಲೋಕದಲ್ಲಿ ಹೀರೋಗಳಾದರು!

ಇವರಿಗಿಂತ ಭಿನ್ನ ಆಸಕ್ತಿ, ಆದ್ಯತೆ ವಚನಕಾರರದು. ಇವರ ದೃಷ್ಟಿ ಮುಖ್ಯವಾಗಿ ಜನರತ್ತ; ಅವರ ಸಾಮಾಜಿಕ ಬದುಕಿನ ಬದಲಾವಣೆಯತ್ತ. ಆದ್ದರಿಂದ ಇವರಿಗೆ ಕಾವ್ಯಲೋಕದೊಳಗಿನ ವಿಹಾರಕ್ಕಿಂತ ಜನಲೋಕದೊಳಗಿನ ಸಂಚಾರ ಮುಖ್ಯವಾಯಿತು. ಕವಿಗಳೊಂದಿಗಿನ ಮಾತಿಗಿಂತ ಜನರೊಡನೆಯ ಮಾತು ಮುಖ್ಯವಾಯಿತು. ಆಗ ಇವರು ಸಂಸ್ಕೃತವನ್ನು ಬಳಸಲಿಲ್ಲ; ಕನ್ನಡವನ್ನು ಬಳಸಿದರು. ಕನ್ನಡದ ಮೂಲಕ ಜನರಿಗೆ ಹತ್ತಿರವಾದರು. ತಮ್ಮ ವಿಚಾರಗಳನ್ನು ಅಲ್ಲಿ ತುಂಬಿದರು. ಇಂತಹ ಮಾತಿನ ಕ್ರಿಯೆಯಿಂದ ಸಮಾಜವು ಸ್ಥಾವರತೆಯಿಂದ ಜಂಗಮತೆಗೊಳಗಾಯಿತು. ಅದನ್ನು ಸ್ಥಾವರವನ್ನಾಗಿ ಪೋಷಿಸಿಕೊಂಡು ಬಂದಿದ್ದ ಸಂಸ್ಕೃತಕ್ಕೆ ಹತ್ತಿರದ ಪುರೋಹಿತ ಜಗತ್ತು ಕ್ರುದ್ಧವಾಯಿತು.

ಹೀಗೆ ಸಂಸ್ಕೃತದ ಭಾಷಾ ಯಜಮಾನಿಕೆಯನ್ನು ಪ್ರಶ್ನಿಸಿದ ಕನ್ನಡದ ಮನಸ್ಸು ಅದನ್ನು ಕುರಿತ ಎಚ್ಚರದ ಸ್ಥಿತಿಯಲ್ಲಿ ಎಂಟುನೂರು ವರ್ಷಗಳನ್ನು ಕಳೆದಿದೆ. ಈ ಅವಧಿಯಲ್ಲಿ ಅದನ್ನು ಕುರಿತ ಮೇಲರಿಮೆಯನ್ನು ಪೂರ್ಣವಾಗಿ ಬಿಟ್ಟುಕೊಟ್ಟಿಲ್ಲ. ಕಾರಣ, ಈ ಸಂಬಂಧಕ್ಕೆ ಹಿನ್ನೆಲೆಯಾಗಿ ಬದಲಾಗದೇ ಇದ್ದ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆ. ಆದರೂ ಈ ಅವಧಿಯಲ್ಲಿ ಗುಪ್ತ ಗುಲಾಮಗಿರಿಯನ್ನು ಅನುಭವಿಸಿಕೊಂಡೇ ಕನ್ನಡವು ಶ್ರೀಮಂತಗೊಳ್ಳುತ್ತಿದೆ. ಇಂತಹ ಯಜಮಾನ ಶಾಹಿಯಿಂದ ಪಾಠವನ್ನು ಕಲಿಯುತ್ತಾ ಬಂದ ಕನ್ನಡವು ಯಜಮಾನಶಾಹಿ ಸಂಸ್ಕೃತಿಯ ನಿರ್ಮೂಲನೆಯಲ್ಲಿ ಆಸಕ್ತಿ ವಹಿಸಬೇಕೋ ಅಥವಾ ತಾನೇ ಮತ್ತೊಂದು ಯಜಮಾನ ಶಾಹಿಯಾಗಿ ಚರಿತ್ರೆಯಲ್ಲಿ ಜರುಗಿದ ತಪ್ಪಿಗೆ ಸೇಡನ್ನು ತೀರಿಸಿಕೊಳ್ಳಬೇಕೋ ಎಂಬುದರ ಬಗ್ಗೆ ಗಮನ ಹರಿಸಬೇಕು. ಇಂತಹ ಯಜಮಾನಿಕೆಯು ಮಾಡುವ ತಪ್ಪನ್ನು ಕನ್ನಡಕ್ಕೆ ಕಲ್ಪಿಸಿದ್ದು ಗೋಕಾಕ್ ವರದಿ. ಅದರ ಜಾರಿಗಾಗಿ ನಡೆದ ಹೋರಾಟ ರಾಜ್ಯವ್ಯಾಪಕ. ಕನ್ನಡ ಚಳುವಳಿಯ ಇತಿಹಾಸದಲ್ಲಿ ಇದಕ್ಕೆ ಸಮ ಬರುವ ಹೋರಾಟ, ಕರ್ನಾಟಕ ಏಕೀಕರಣ ಹೋರಾಟವನ್ನೂ ಒಳಗೊಂಡು, ಇವತ್ತಿಗೂ ಮತ್ತೊಂದಿಲ್ಲ. ಆದರೆ ಆದದ್ದೇನು ?

೧೯೭೭ರ ಸುಮಾರಿನಲ್ಲಿ ಕರ್ನಾಟಕದ ಪ್ರೌಢ ಶಿಕ್ಷಣದಲ್ಲಿ ಸಂಸ್ಕೃತವು ಪ್ರಥಮ ಭಾಷೆಯ ಸ್ಥಾನದಲ್ಲಿತ್ತು. ಇದರೊಂದಿಗೆ ಕನ್ನಡವೂ ಸೇರಿ ತಮಿಳು, ಉರ್ದು, ತೆಲುಗು – ಹೀಗೆ ಅನೇಕ ಭಾಷೆಗಳು ಆ ಸ್ಥಾನದಲ್ಲಿ ಇದ್ದವು. ಆದರೆ ವಿದ್ಯಾರ್ಥಿಗಳು ಪ್ರಥಮ ಭಾಷೆಯ ಸ್ಥಾನದಲ್ಲಿದ್ದ ಈ ಹಲವು ಭಾಷೆಗಳಲ್ಲಿ ಸಂಸ್ಕೃತವನ್ನು ವಿಶೇಷವಾಗಿ ಆರಿಸಿಕೊಳ್ಳುತ್ತಿದ್ದರು. ಇದು ಮೂಲತಃ ಅವರ ಪೋಷಕರ ಒತ್ತಾಯದಿಂದ ಆಗುತ್ತಿತ್ತು. ಸಂಸ್ಕೃತ ಅಧ್ಯಾಪಕರ ಕುಮ್ಮಕ್ಕು ಸಹ ಇದಕ್ಕಿತ್ತು.

ಹೀಗೆ ಕನ್ನಡವನ್ನು ಒಳಗೊಂಡ ಹಲವು ಭಾಷೆಗಳಲ್ಲಿ ಹೆಚ್ಚು ವಿದ್ಯಾರ್ಥಿಗಳು ಸಂಸ್ಕೃತವನ್ನು ಪ್ರಥಮ ಭಾಷೆಯನ್ನಾಗಿ ಕಲಿಯುತ್ತಿದ್ದರು. ಇವರು ಇದಕ್ಕೂ ಮುಂಚಿನ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದ ಹಂತದಲ್ಲಿ ಇದನ್ನು ಕಲಿತದ್ದು ಇಲ್ಲ. ಇದು ಇವರ ಮಾತೃಭಾಷೆಯೂ ಅಲ್ಲ. ಅಲ್ಲದೇ ಯಾರ ಮಾತೃಭಾಷೆಯೂ ಅಲ್ಲ. ಇಂತಹ ಭಾಷೆಯನ್ನು ಮಾತೃಭಾಷೆಯ ಸ್ಥಾನವಾದ ಪ್ರಥಮ ಭಾಷೆಯ ಸ್ಥಾನದಲ್ಲಿ ಇಟ್ಟು ಅಧ್ಯಯನ ಮಾಡುತ್ತಿದ್ದರು. ಪರೀಕ್ಷೆಯಲ್ಲಿ ಕನ್ನಡದಲ್ಲಿಯೇ ಬರೆಯುತ್ತಿದ್ದರು. ಇವರಿಗೆ ಹೆಚ್ಚು ಪ್ರಮಾಣದ ಅಂಕಗಳು ಲಭಿಸುತ್ತಿದ್ದವು. ಕನ್ನಡವನ್ನು ಮಾತೃಭಾಷೆಯನ್ನಾಗಿ ಹೊಂದಿ, ಪರಿಸರದಲ್ಲಿಯೂ ಅದನ್ನು ಆಡಿ ಕಲಿತು, ಶಾಲೆಯಲ್ಲಿಯೂ ಅಧ್ಯಯನ ಮಾಡಿ ಉತ್ತರ ಪತ್ರಿಕೆಯನ್ನು ಬರೆಯುತ್ತಿದ್ದವರಿಗೆ ಅವರಿಗಿಂತ ಕಡಿಮೆ ಅಂಕಗಳು ದೊರೆಯುತ್ತಿದ್ದವು. ಇದರಿಂದಾಗಿ ಹೆಚ್ಚು ಅಂಕಗಳನ್ನು ಗಳಿಸಬೇಕೆಂಬ ಏಕೈಕ ಧ್ಯೇಯದೊಂದಿಗೆ ಮತ್ತು ಇಂತಹ 'Marks'ವಾದಕ್ಕೆ ಸಂಸ್ಕೃತದ ಅಧ್ಯಾಪಕರು ಜವಾಬ್ದಾರಿ ಯೋಗ್ಯವಲ್ಲದ

ಕನ್ನಡವು ಯಜಮಾನಶಾಹಿ ಸಂಸ್ಕೃತಿಯ ನಿರ್ಮೂಲನೆಯಲ್ಲಿ ಆಸಕ್ತಿ ವಹಿಸಬೇಕೋ ಅಥವಾ ತಾನೇ ಮತ್ತೊಂದು ಯಜಮಾನಶಾಹಿಯಾಗಿ ಚರಿತ್ರೆಯಲ್ಲಿ ಜರುಗಿದ ತಪ್ಪಿಗೆ ಸೇಡನ್ನು ತೀರಿಸಿಕೊಳ್ಳಬೇಕೋ ಎಂಬುದರ ಬಗ್ಗೆ ಗಮನಹರಿಸಬೇಕು. ಇಂತಹ ಯಜಮಾನಿಕೆಯು ಮಾಡುವ ತಪ್ಪನ್ನು ಕನ್ನಡಕ್ಕೆ ಕಲ್ಪಿಸಿದ್ದು ಗೋಕಾಕ್ ವರದಿ. ಅದರ ಜಾರಿಗಾಗಿ ನಡೆದ ಹೋರಾಟ ರಾಜ್ಯವ್ಯಾಪಕ. ಕನ್ನಡ ಚಳುವಳಿಯ ಇತಿಹಾಸದಲ್ಲಿ ಇದಕ್ಕೆ ಸಮ ಬರುವ ಹೋರಾಟ ಕರ್ನಾಟಕ ಏಕೀಕರಣ ಹೋರಾಟವನ್ನೂ ಒಳಗೊಂಡು ಇವತ್ತಿಗೂ ಮತ್ತೊಂದಿಲ್ಲ. ಆದರೆ ಆದದ್ದೇನು ?

ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ

ಧಾರಾಳತನವನ್ನು ತೋರಿಸುತ್ತಿದ್ದುದಕ್ಕೆ ಸಂಸ್ಕೃತದ 'ಪ್ರಥಮ ಭಾಷೆ'ಯ ಸ್ಥಾನವೇ ವಿವಾದಕ್ಕೊಳಗಾಯಿತು. ಇದಕ್ಕೆ ಅಂತ್ಯವನ್ನು ಹಾಡುವ ಸಲುವಾಗಿ ಸಂಸ್ಕೃತವು ಯಾರ ಮಾತೃಭಾಷೆಯೂ ಅಲ್ಲವಾದ ಕಾರಣ, ಅದನ್ನು ಪ್ರಥಮ ಭಾಷೆಯ ಸ್ಥಾನದಿಂದ ತೆಗೆಯಬೇಕು ಎಂಬ ಕೂಗು ಅಲ್ಲಲ್ಲಿ ಕೇಳಲಾರಂಭಿಸಿತು.

ಕ್ರಮೇಣ ಈ ಕೂಗು ದೊಡ್ಡದಾಗಿ ಮೊಳಗಿ ವಿ.ಕೃ. ಗೋಕಾಕರ ನೇತೃತ್ವದಲ್ಲಿ ಸಮಿತಿಯೊಂದು ರಚನೆಯಾಯಿತು. ಇದರ ಮುಖ್ಯ ಗಮನ ಸಂಸ್ಕೃತ ಮತ್ತು ಕನ್ನಡದ ಸ್ಥಾನ ನಿಷ್ಕರ್ಷೆಯಾಗಿತ್ತು. ಅದು ವರದಿ ನೀಡಿತು. ಅದರ ಪ್ರಕಾರ ಸಂಸ್ಕೃತವು ಪ್ರಥಮ ಭಾಷೆಯ ಸ್ಥಾನದಲ್ಲಿ ಇರತಕ್ಕದ್ದಲ್ಲ ಮತ್ತು ಕನ್ನಡವೊಂದೇ ಪ್ರಥಮ ಭಾಷೆಯ ಸ್ಥಾನದಲ್ಲಿ ಇರತಕ್ಕದ್ದು ಎಂಬುದಾಗಿತ್ತು.

ಮೊದಲ ಹಂತದಲ್ಲಿ ಈ ಸಮಿತಿಯ ಸಾಧನೆಗೆ ಪ್ರತಿರೋಧವಾಗಿ ಹುಟ್ಟಿದ ಹೋರಾಟವು ತನ್ನ ಎರಡನೆಯ ಹಂತದಲ್ಲಿ ಅದರ ಜಾರಿಗಾಗಿ ತನ್ನ ಚಟುವಟಿಕೆಗಳನ್ನು ಹಮ್ಮಿಕೊಂಡಿತು. ಬಹುತೇಕ ಪ್ರಜ್ಞಾವಂತ ಕನ್ನಡಿಗರು ಈ ಹೋರಾಟದಲ್ಲಿ ಧುಮುಕಿದರು. ಈ ಹೋರಾಟದ ಒಂದೇ ಒತ್ತಾಯವೆಂದರೆ, ಕನ್ನಡಕ್ಕೊಂದೇ ಪ್ರಥಮ ಭಾಷೆಯ ಸ್ಥಾನವನ್ನು ಕೊಟ್ಟ ಗೋಕಾಕ ವರದಿಯನ್ನು ಜಾರಿ ಮಾಡುವುದು.

ಸರ್ಕಾರವು ಇದನ್ನು ಯಥಾವತ್ತಾಗಿ ಜಾರಿ ಮಾಡಲಿಲ್ಲ. ಇದಕ್ಕೆ ಮಾರ್ಪಾಡು ಮಾಡಿತು. ಅದರ ಪ್ರಕಾರ ಕನ್ನಡವೊಂದೇ ಮಾತೃಭಾಷೆಯ ಸ್ಥಾನದಲ್ಲಿ ಇರತಕ್ಕದ್ದಲ್ಲ; ಕನ್ನಡದಂತೆಯೇ ತಮಿಳು, ಉರ್ದು, ತೆಲುಗು ಮುಂತಾದವು ಸಹ ಅನೇಕರಿಗೆ ಮಾತೃಭಾಷೆಯೇ ಆದುದರಿಂದ ಅವುಗಳನ್ನು ಸಹ ಕನ್ನಡದ ಸಾಲಿನಲ್ಲಿ ಪ್ರಥಮ ಭಾಷೆಯ ಸ್ಥಾನದಲ್ಲಿ ಇಟ್ಟಿತು. ಇಲ್ಲಿ ಮಾತೃಭಾಷೆಗೆ ಪ್ರಥಮ ಭಾಷೆಯ ಸ್ಥಾನ ಎಂಬ ವೈಜ್ಞಾನಿಕ ಸತ್ಯ ಸಾಕಾರಗೊಂಡಿತು. ಇಂತಹ ಮಾರ್ಪಾಟುಗಳನ್ನು ಒಳಗೊಂಡ ವರದಿ ಸರ್ಕಾರದ ಆದೇಶವಾಗಿ ಜಾರಿಯೂ ಆಯಿತು. ಅಲ್ಲದೇ ಪ್ರಥಮ ಭಾಷೆಯ ಸ್ಥಾನದಲ್ಲಿ ಕನ್ನಡದಲ್ಲಿ ಕಲಿಯದವರು ಎರಡನೆಯ ಭಾಷೆಯನ್ನಾಗಿ ಅದನ್ನು ಕಡ್ಡಾಯವಾಗಿ ಕಲಿಯಬೇಕೆಂದು ಹೇಳಿತು. ಈ ಮೂಲಕ ಕನ್ನಡವನ್ನು ರಾಜ್ಯದಲ್ಲಿ ಇರುವ ಎಲ್ಲರೂ ಪ್ರಥಮ ಭಾಷೆಗೆ ಸಮನಾದ ೧೦೦ ಅಂಕಗಳಿಗೆ ಕಡ್ಡಾಯವಾಗಿ ಕಲಿಯುವುದು ಸಾಧ್ಯವಾಯಿತು.

**ಕನ್ನಡ ಯಜಮಾನಶಾಹಿ**

ಗೋಕಾಕ್ ವರದಿಯನ್ನು ಪರಿಷ್ಕರಿಸಿ ಹೊರಡಿಸಿದ ರಾಜ್ಯದ ಆದೇಶವನ್ನು ಕನ್ನಡದ ಪ್ರಜ್ಞಾವಂತರೆಲ್ಲರೂ ವಾಸ್ತವವಾಗಿ ಸ್ವಾಗತಿಸಬೇಕಿತ್ತು. ಕಾರಣ, ಇಲ್ಲಿ ಸಂಸ್ಕೃತಕ್ಕೆ ಪ್ರಥಮ ಭಾಷೆಯ ಸ್ಥಾನವಿಲ್ಲ; ಕನ್ನಡವು ಪ್ರಥಮ ಭಾಷೆಯಾಗದಿದ್ದಾಗಲೂ ದ್ವಿತೀಯ ಭಾಷೆಯ ಜಾಗದಲ್ಲಾದರೂ ಕನ್ನಡವನ್ನು ಪ್ರಥಮ ಭಾಷೆಯ ಅಂಕಗಳಿಗೆ ಸಮನಾದ ಅಂಕಗಳಿಗೆ ಕಲಿಯುವುದು ಕಡ್ಡಾಯ, ಎಂದು ವರದಿ ಹೇಳಿತ್ತು.




ಮೈಸೂರಿನ ನಂಜರಾಜ್ ಬಹದ್ದೂರ್ ಛತ್ರದಲ್ಲಿ ೨೮.೬.೨೦೦೪ರಂದು ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ಪ್ರೊ॥ ಜೆ. ಆರ್. ಲಕ್ಷ್ಮಣರಾವ್ ಉದ್ಘಾಟಿಸಿದರು. ಶ್ರೀ ಟಿ. ಪಿ. ಲಿಂಗಪ್ಪ ಅವರು ರಚಿಸಿರುವ ಮೂರು ಗಣಿತ ಪುಸ್ತಕಗಳನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಕೆ. ಗಂಗಪ್ಪ ಗೌಡ ಅವರು ಬಿಡುಗಡೆ ಮಾಡಿದರು.

ಹೀಗೆ ಯಾವುದೋ ಒಂದು ಬಗೆಯಲ್ಲಿ ಕನ್ನಡವು ಎಲ್ಲರಿಗೂ ಕಡ್ಡಾಯವಾಗಿತ್ತು.

ಆದರೆ ಇದನ್ನು ಪ್ರತಿರೋಧಿಸುತ್ತಾ ಹೋರಾಟ ಮುಂದುವರೆಯಿತು. ಈ ಹೋರಾಟವು ಜನರ ಮುಂದೆ ಇಟ್ಟ ಕಾರಣವೆಂದರೆ, ಧಾರ್ಮಿಕ ಮತ್ತು ಭಾಷಿಕ ಅಲ್ಪ ಸಂಖ್ಯಾತರ ಮಾತೃಭಾಷಾ ಶಿಕ್ಷಣದಲ್ಲಿ ಕನ್ನಡಕ್ಕೆ ಪ್ರಥಮ ಭಾಷೆಯ ಸ್ಥಾನವನ್ನು ದೊರಕಿಸದೇ ಇದ್ದುದು. ರಾಜ್ಯದಲ್ಲಿರುವ ಯಾವುದೇ ಮಾತೃಭಾಷಿಕರಿಗೂ ಕನ್ನಡವೇ ಏಕೈಕ ಪ್ರಥಮ ಭಾಷೆಯಾಗಿರಬೇಕು ಎಂಬುದು ಇವರ ಹಠ.

ಮಾತೃಭಾಷೆಯನ್ನು ಪ್ರಥಮ ಭಾಷೆಯ ಸ್ಥಾನದಲ್ಲಿ ಇಡುವುದು ವೈಜ್ಞಾನಿಕವೇ ಹೊರತು ಅನ್ಯಭಾಷೆಯನ್ನು ಅಲ್ಲ. ಜಗತ್ತಿನ ಶಿಕ್ಷಣ ತಜ್ಞರ ಅಭಿಮತ ಇದಕ್ಕಿದೆ. ಹೀಗಿರುವಾಗ, ಇದಕ್ಕೆ ಪೂರಕವಾಗಿ ಹೊರಟ ಕರ್ನಾಟಕ ರಾಜ್ಯದ ಆದೇಶವನ್ನು ಪ್ರಶ್ನಿಸಿ ಕನ್ನಡಕ್ಕೆ ಮಾತ್ರ ಏಕೈಕ ಪ್ರಥಮ ಭಾಷೆಯ ಸ್ಥಾನವನ್ನು ನೀಡಬೇಕೆಂದು ಹುಟ್ಟಿಕೊಂಡ ಹೋರಾಟ ಯಾವ ವೈಚಾರಿಕ ನೆಲೆಗಟ್ಟನ್ನು ಪಡೆಯಲು ಸಾಧ್ಯ ? ಇದು, ಇತರೆ ಮಾತೃಭಾಷೆಗಳ ಮೇಲೆ ಕನ್ನಡವೂ ಮಾಡ ಹೊರಟ ದಮನಕಾರಿ ನೀತಿಯಲ್ಲವೇ ? ಸಂಸ್ಕೃತದ ಯಜಮಾನಿಕೆಯನ್ನು ಅನುಭವಿಸಿ ಕೊಂಡುಬಂದ ಕನ್ನಡವು ಇಲ್ಲಿ ತಾನೇ ಮತ್ತೊಬ್ಬ ಯಜಮಾನನಾಗಿ ವಿರಾಜಿಸುವುದು, ಊಳಿಗಮಾನ್ಯ ವ್ಯವಸ್ಥೆಯ ಒಂದು ಭಾಷಾ ಅಂಶವನ್ನು ಒಪ್ಪಿ ಹೊರಟ ವಾದವೇ !

ಇಂತಹ ವಾದಕ್ಕೆ ಕರ್ನಾಟಕದಾದ್ಯಂತ ಜಯಭೇರಿ, ರಣಘೋಷಣೆ. ಸಾಮಾನ್ಯ ಜನರು ಹಾಗಿರಲಿ (ಇವರು ಕನ್ನಡಾಭಿಮಾನ ಎಂಬ ಒಂದೇ ಕಾರಣಕ್ಕೆ ಚಳುವಳಿಗೆ ಬಂದವರು), ಪ್ರಜ್ಞಾವಂತರೆನಿಸಿಕೊಂಡವರು ಸಹ ಈ ಹೋರಾಟವನ್ನು ಮುಂದುವರೆಸಿದರು. ಅವರ ಪಟ್ಟಿ ಕರ್ನಾಟಕದ ಉದ್ದಗಲವನ್ನು ಚಾಚಿಕೊಂಡಿತು. ಇವರ ನಡುವೆ ಮೂರು ಮಂದಿ ಮಾತ್ರ ಈ ಚಳುವಳಿಯಿಂದ ದೂರ ಉಳಿದರು. ಅವರೆಂದರೆ, ಹಂಪ ನಾಗರಾಜಯ್ಯ, ಹಾ.ಮಾ. ನಾಯಕ ಮತ್ತು ವಾಟಾಳ್ ನಾಗರಾಜ್. ಇವರು, ಸರ್ಕಾರವು ಜಾರಿ ಮಾಡಿದ ಆದೇಶದ ಪರವಾಗಿ ನಿಂತರು. ಇದು ಸರಿ. ಆದರೆ ಸಂಸ್ಕೃತದ ಸ್ಥಾನ ನಿಷ್ಕರ್ಷೆಯ ಮತ್ತು ಕನ್ನಡದ ಸ್ಥಾನ ನಿರ್ಣಯದ ಸಲುವಾಗಿ ಹುಟ್ಟಿಕೊಂಡ ಗೋಕಾಕ ಸಮಿತಿಯ ರಚನೆಯ ಪೂರ್ವಭಾವಿ ಹೋರಾಟದ ಬಗೆಗೆ ಇವರು ತಾಳಿದ ನಿಲುವು ವಿವಾದಾಸ್ಪದವೇ ಸರಿ.

ಅಂತೂ ಜಾರಿಯಾದ ಆದೇಶದ ಪರವಾಗಿ ನಿಂತ ಸಂವಿಧಾನ, ಕಾನೂನು, ತಜ್ಞರ ಅಭಿಮತ ಮುಂತಾದ ವಿಚಾರಗಳ ನೆಲೆಯಲ್ಲಿ ಅತ್ಯಂತ ಸ್ವಾಗತಾರ್ಹವೇ ಹೌದು.

ಇರಲಿ; ಹೋರಾಟ ಇನ್ನಷ್ಟು ಜೋರಾಯಿತು. ಇದಕ್ಕೆ ಮಣಿದ ಸರ್ಕಾರವು ಪರಿಷ್ಕೃತ ಆದೇಶವನ್ನು ಜಾರಿ ಮಾಡಿತು. ಅದರ ಪ್ರಕಾರ ಕನ್ನಡವೊಂದೇ ಪ್ರಥಮ ಭಾಷೆಯ ಸ್ಥಾನದಲ್ಲಿ ಇರತಕ್ಕದಾಗಿತ್ತು.

ಇದಕ್ಕೆ ಎಲ್ಲೆಡೆಯೂ ಸ್ವಾಗತ ದೊರಕಿತು. ಆದರೆ ಕೆಲವೇ ಕಾಲದಲ್ಲಿ ಇದು ಕೋರ್ಟಿನಲ್ಲಿ ಬಿದ್ದುಹೋಯಿತು. ಅನಂತರ ಕನ್ನಡವನ್ನೂ ಒಳಗೊಂಡಂತೆ ಕರ್ನಾಟಕದಲ್ಲಿನ ಹಲವು ಮಾತೃಭಾಷೆಗಳಿಗೆ ಪ್ರಥಮ ಭಾಷೆಯ ಸ್ಥಾನವನ್ನು ನೀಡಿದ ಹೊಸ ಆದೇಶವು ೧೯೯೪ರಲ್ಲಿ, ಅದೂ ಕೋರ್ಟಿನ ನಿರ್ದೇಶನದ ಮೇರೆಗೆ, ಜಾರಿಯಾಯಿತು.

ಹಾಗಾದರೆ ಕನ್ನಡವೊಂದಕ್ಕೆ ಮಾತ್ರ ಪ್ರಥಮ ಭಾಷೆಯ ಸ್ಥಾನ ನೀಡಿದ ಗೋಕಾಕ ವರದಿ ಏನಾಯಿತು ? ಅದಕ್ಕಾಗಿ ಒತ್ತಾಯಿಸಿದ ಹೋರಾಟವೇನಾಯಿತು ? ಅವತ್ತು ಪ್ರಜ್ಞಾವಂತರೆನಿಸಿಕೊಂಡವರು ತೋರಿದ ಪ್ರಜ್ಞಾವಂತಿಕೆ ಎಂಥದು ? ಕೋರ್ಟಿನಲ್ಲಿ ಸಹ ನಿಲ್ಲುವಂತಹ ರೀತಿಯಲ್ಲಿ ಗೋಕಾಕ್ ವರದಿಯನ್ನು ಪರಿಷ್ಕರಿಸಿ ರಾಜ್ಯದ ಆದೇಶವನ್ನಾಗಿ ಮಾಡಿದ ಐ.ಎ.ಎಸ್. ಅಧಿಕಾರಿಗಳು ಮತ್ತು ಕೋರ್ಟು ಮೆರೆದ ಪ್ರಜ್ಞಾವಂತಿಕೆಯ ಬೆಳಕಿನೆದುರಿನಲ್ಲಿ ಇವರ ಪ್ರಜ್ಞಾವಂತಿಕೆಯ ಬೆಳಕು ಮಂದವಾಯಿತೇನು ? ಗೋಕಾಕ್ ಚಳುವಳಿ ಈ ಎಲ್ಲಾ ಪ್ರಶ್ನೆಗಳನ್ನು ಎತ್ತುತ್ತದೆ.

ಒಟ್ಟಾರೆ ಇದು ಕನ್ನಡವನ್ನು ಭಾಷೆಯನ್ನಾಗಿ ಕಲಿಸಲು ಸಿದ್ಧಗೊಂಡ ವರದಿ ಮತ್ತು ಹೋರಾಟವೇ ಹೊರತು ಅದನ್ನು ಮಾಧ್ಯಮವನ್ನಾಗಿ ಮಾಡುವ ವಿಚಾರದ್ದಲ್ಲ. ಇದು ಈ ವರದಿ ಮತ್ತು ಚಳುವಳಿಗಳ ಮಿತಿ. ಆದರೆ ಇದು ಉಂಟುಮಾಡಿದ ಕನ್ನಡದ ಬಗೆಗಿನ ಜಾಗೃತಿ ಮರೆಯುವಂಥದ್ದಲ್ಲ. ಆದರೆ ಈ ಚಳುವಳಿ ಮುಂದೆ 'ಭುವನೇಶ್ವರಿ ಭಕ್ತಿ'ಗೆ ಸೀಮಿತವಾಯಿತೇ ಹೊರತು ಎಡವಾದೀ ನೆಲೆಯಲ್ಲಿ ಕನ್ನಡವನ್ನು ಕಟ್ಟುವ ಪ್ರಜ್ಞಾವಂತಿಕೆಗೆ ವಿಸ್ತರಣೆಗೊಳ್ಳದಿದ್ದುದು ವಿಷಾದನೀಯ. ಇದಕ್ಕೆ ಪೂರಕವಾಗಿ ಬೇಕಾದ 'ಅಧ್ಯಯನ ಶಿಬಿರ'ಗಳು ಪ್ರಜ್ಞಾವಂತರಿಂದ ಒತ್ತಾಸೆಯೂ ಆಗಲಿಲ್ಲ; ನಾಯಕ-ಸಂಘಟಕರಿಂದ ಕಾರ್ಯರೂಪಕ್ಕೂ ಬರಲಿಲ್ಲ.

ಮುಂದಿನ ಪುಟಕ್ಕೆ

## ಹೆಚ್ಚು ಸಂಪನ್ಮೂಲ ಸಂಗ್ರಹಿಸುವುದು ಇಂದಿನ ಅಗತ್ಯ

### – ಕರ್ನಾಟಕ ಬಜೆಟ್ ೨೦೦೪

**ಕ**ರ್ನಾಟಕದ ಸಂಯುಕ್ತ ಸರ್ಕಾರ ಈಗಷ್ಟೆ ಕನಿಷ್ಠ ಸಾಮಾನ್ಯ ಕಾರ್ಯಕ್ರಮವನ್ನು ಪ್ರಕಟಿಸಿ, ಮರುದಿನ ತನ್ನ ವಾರ್ಷಿಕ ಬಜೆಟ್ ಮಂಡಿಸಿದೆ. ಇದರಲ್ಲಿ ಆ ಕಾರ್ಯಕ್ರಮದ ಕೇಂದ್ರ ವಿಷಯಗಳಾದ ಗ್ರಾಮೀಣ ಕ್ಷೇತ್ರದ ಪುನರುದ್ಧಾರಕ್ಕೆ ಒತ್ತುನೀಡುವ ಕಾರ್ಯಕ್ರಮಗಳಿಗೆ ಸಾಕಷ್ಟು ಗಮನ ನೀಡಲಾಗಿದೆ. ಎರಡು ದಶಕಗಳ ಕಾಲ ನಗರಕ್ಷೇತ್ರಕ್ಕೇ ಆಳುವ ವರ್ಗಗಳು ತಮ್ಮ ಎಲ್ಲ ಗಮನವನ್ನು ಕೇಂದ್ರೀಕರಿಸಿ, ನಿರ್ಲಕ್ಷ್ಯದಿಂದ ಸೊರಗಿಹೋಗಿದ್ದ ಕೃಷಿ ಮುಂತಾದ ಗ್ರಾಮೀಣ ಕ್ಷೇತ್ರಗಳಲ್ಲಿನ ದಾರುಣ ಪರಿಸ್ಥಿತಿ ನಗರಕ್ಷೇತ್ರದ ಅರ್ಥವ್ಯವಸ್ಥೆಗೇ ಗರಬಡಿಯುವ ತಿರುವಿನ ಸಂದರ್ಭವಿದ್ದು, ಈಗಷ್ಟೆ ಎಚ್ಚೆತ್ತುಕೊಂಡಂತಿದೆ. ಶಿಕ್ಷಣ ಕ್ಷೇತ್ರಕ್ಕೆ ಕೊಟ್ಟಿರುವ ಒತ್ತು, ಬಿಸಿಯೂಟವನ್ನು ಸರ್ಕಾರಿ ಶಾಲೆಯ ಹತ್ತನೆಯ ತರಗತಿಯವರೆಗೆ ವಿಸ್ತರಿಸುವುದು ತೀರ ಅಗತ್ಯವಿತ್ತು. ಈಗ ಹಾಗೆ ಮಾಡಿರುವುದಲ್ಲದೆ, ಅನುದಾನಿತ ಶಾಲೆಗಳ ಏಳನೆ ತರಗತಿಯವರೆಗೆ ವಿಸ್ತರಿಸಿರುವುದು ಸ್ತುತ್ಯರ್ಹ. ಗ್ರಾಮಾಂತರ ಆರೋಗ್ಯಕ್ಷೇತ್ರಕ್ಕೆ ಎಂದಿಲ್ಲದ ಒತ್ತು, ಹಾಗೂ ಕೃಷಿ ಸಾಲಗಳ ಮನ್ನ, ಬಡ್ಡಿಯನ್ನು ಶೇಕಡ ೬ಕ್ಕೆ ಇಳಿಸಿರುವುದು ಬಹು ಸಾಹಸಮಯ ಹಾಗೂ ಒಂದು ಸ್ವಾಗತಾರ್ಹ ಕ್ರಮ. ಪಡಿತರ ವ್ಯವಸ್ಥೆಯಲ್ಲಿ ಕಡುಬಡವರಿಗೆ ಬೆಲೆ ಇಳಿಸಿರುವುದು ಸಮಯೋಚಿತವಾಗಿದೆ. ಕರ್ನಾಟಕದ ಪ್ರಸಿದ್ಧ ಆಂಗ್ಲ ಪತ್ರಿಕೆಯೊಂದಕ್ಕೆ ಬಜೆಟ್ ಕುರಿತ ತನ್ನ ಸಂಪಾದಕೀಯದಲ್ಲಿ ಸಾರಾಯಿ ವಿತರಣೆ ಮತ್ತು ಆನ್‌ಲೈನ್ ಲಾಟರಿ ಬಗ್ಗೆ ಕಣ್ಣೀರು ಸುರಿಸುವುದಕ್ಕಿಂತ ಹೆಚ್ಚಿನ ವಿಷಯ ಗಮನಕ್ಕೆ ಬಾರದೆಹೋದುದಕ್ಕೆ ಆಶ್ಚರ್ಯಪಡಬೇಕಾಗಿಲ್ಲ. ಇದರಲ್ಲಿ ಕುಡಿತಕ್ಕೆ ಪ್ರೇರಣೆ ಎಂಬ ಅಣಕಿನ ಹಿಂದೆ ಹೊಸ ಪದ್ಧತಿಯಲ್ಲಿ ಈ ಉದ್ಯಮಿಗಳಿಗೆ ಆಗುವ ನಷ್ಟದ ಬಗೆಗೇ ಕೊರಗು ಇದೆ ಎಂಬುದು ಸ್ಪಷ್ಟ. ಹೈದರಾಬಾದ್ ಕರ್ನಾಟಕಕ್ಕೆ ಏನು ಮಾಡುತ್ತೇವೆಂಬ ಬಗ್ಗೆ ಸ್ಪಷ್ಟ ಕಲ್ಪನೆ ಬಜೆಟ್‌ನಲ್ಲಿ ಕಾಣಲಿಲ್ಲ. ಹಾಗೂ ನಿರುದ್ಯೋಗ ಭತ್ಯೆಯ ಬಗ್ಗೆ ಏನೂ ಹೇಳಿಲ್ಲ. ಬಹುಶಃ ಆರು ತಿಂಗಳಲ್ಲೇ ಮತ್ತೆ ಬರಲಿರುವ ಬಜೆಟ್ ವೇಳೆಗೆ ಈ ಅಂಶಗಳು ಸ್ಪಷ್ಟವಾಗಬಹುದು. ಬರಲಿರುವ ದಿನಗಳಲ್ಲಿ ನಿರೀಕ್ಷಿಸಬಹುದಾದ ಸರ್ಕಾರದ ಉತ್ತಮವೆನಿಸುವ ಕಾರ್ಯಕ್ರಮಗಳು ಈ ಹಿಂದೆ ಆದಂತೆ ಆಗದೆ, ಪ್ರಾಮಾಣಿಕವಾಗಿ ಅವುಗಳ ಉದ್ದೇಶವನ್ನು ಸಾಧಿಸಿ, ಸೌಲಭ್ಯಗಳು ಉದ್ದೇಶಿತ ಗುಂಪುಗಳಿಗೇ ತಲಪಲು, ಜೊತೆಗೆ ಲಂಚ-ರುಷವತ್ತುಗಳ ಮೂಲಕ ಸೋರಿಹೋಗದಂತೆ, ಆಡಳಿತ ವ್ಯವಸ್ಥೆಯನ್ನು ಹೇಗೆ ಪುನರ್ರಚಿಸುತ್ತಾರೆಂಬುದು ಬಹುಮುಖ್ಯವಾಗುತ್ತದೆ. ಮತ್ತೊಮ್ಮೆ ಪಡಿತರ ಅಕ್ಕಿ ರಾದ್ಧಾಂತದಂತೆ ಆದರೆ ಜನತೆ ಕ್ಷಮಿಸುವುದಿಲ್ಲ.

ಹೊಸ ಸುಂಕ-ತೆರಿಗೆ ವಿಧಿಸಿದಾಗಲೆಲ್ಲಾ ಬೆಲೆ ಏರುವ ಅಗತ್ಯವೇನಿಲ್ಲ. ಹಾಗಾಗುವುದಕ್ಕೆ ಇನ್ನೂ ಆಧುನಿಕ ಬಂಡವಾಳ ಅರ್ಥವ್ಯವಸ್ಥೆಯ ನಿರೀಕ್ಷೆಗೆ ಏರದ ಲೇವಾದೇವಿ ಪಾಳೆಯಗಾರಿಕೆಯ ಮನಸ್ಥಿತಿಯನ್ನೇ ಹೊಂದಿರುವ ವರ್ತಕ ವೃಂದವೇ ಕಾರಣ. ಎರಡು ದಶಕಗಳಿಂದ ಯಾವ ಲಂಗುಲಗಾಮಿಲ್ಲದೆ ಕೊಬ್ಬಿ, ಸಂಪತ್ತನ್ನು ಶೇಖರಿಸಿಕೊಂಡಿರುವ ಉತ್ಪಾದಕವರ್ಗ, ಈ ಬಾರಿ ಈ ಸಾಧಾರಣ ಮಟ್ಟದ ತೆರಿಗೆಗಳನ್ನು ತಾವೇ ಭರಿಸಿಕೊಂಡು, ಬೆಲೆ ಏರದಂತೆ, ಹಣದುಬ್ಬರಕ್ಕೆ ಎಡೆಕೊಡದಂತೆ, ವರ್ತಿಸುವುದು ವಿವೇಕಯುತವೆನಿಸುತ್ತದೆ. ಸಾಮಾಜಿಕ ಕ್ಷೇತ್ರ, ಶಿಕ್ಷಣ, ಆರೋಗ್ಯ, ಕೃಷಿ ಕ್ಷೇತ್ರಗಳಲ್ಲಿ ಉಳ್ಳವರಿಂದ ಸಂಗ್ರಹಿಸಿ ವ್ಯಯ ಮಾಡುವುದು, ಜನಸಮೂಹದ ಒಟ್ಟಾರೆ ಉತ್ಪಾದಕ ಸಾಮರ್ಥ್ಯವನ್ನು ಹೆಚ್ಚಿಸಿದಂತೆಯೇ. ಹೀಗಾಗಿ ಹೆಚ್ಚು ಸಂಪನ್ಮೂಲಗಳನ್ನು ಸಂಗ್ರಹಿಸುವಾಗ ಅಭಿವೃದ್ಧಿಶೀಲ ರಾಜ್ಯಗಳ ಹಣಕಾಸುಮಂತ್ರಿಗಳು ಬಂಡವಾಳದ ಸ್ವಾರ್ಥಪೂರ್ಣ ಟೀಕೆಗಳಿಗೆ ಬೆಲೆ ಕೊಡಬೇಕಾಗಿಲ್ಲ.

**ಕೆ. ಎಸ್. ಪಾರ್ಥಸಾರಥಿ**

*ಹಿಂದಿನ ಪುಟದಿಂದ*

**ಇಂಗ್ಲಿಷ್ ಸಾಮ್ರಾಜ್ಯಶಾಹಿ**

ವಸಾಹತುಶಾಹಿಯೊಂದಿಗೆ ಭಾರತಕ್ಕೆ ಇಂಗ್ಲಿಷಿನ ಆಗಮನವಾಯಿತು. ಮುಖ್ಯವಾಗಿ ಬ್ರಿಟಿಷರ ವಸಾಹತುವಾಗಿದ್ದ ಕರ್ನಾಟಕಕ್ಕೆ ಬ್ರಿಟಿಷರ ಭಾಷೆಯಾಗಿದ್ದಂತಹ ಇಂಗ್ಲಿಷ್ ವಿಶೇಷವಾಗಿ ಪ್ರವೇಶಿಸಿತು. ಬ್ರಿಟಿಷರಿಗೆ ಸಿಕ್ಕಂತಹ ರಾಜಕೀಯ, ಸಾಮಾಜಿಕ ಅಲ್ಲದೇ ಆರ್ಥಿಕ ಸ್ಥಾನಮಾನಗಳು ಸಹಜವಾಗಿಯೇ ಅವರನ್ನು ಅಭಿವ್ಯಕ್ತಿಸಿದ ಇಂಗ್ಲಿಷ್ ಭಾಷೆಗೆ ಸಿಕ್ಕಿತು. ಅವರೆದುರುಗಿನ ಜನರು ಎರಡನೆಯ ದರ್ಜೆಯವರಾಗಿ ಪ್ರತಿಷ್ಠಾಪಿತಗೊಂಡಿದ್ದರಿಂದ ಅವರ ಭಾಷೆಯೂ ಅವರಂತೆಯೇ ಎರಡನೆಯದ್ದೂ ದಾಸ್ಯದ್ದೂ ಆಯಿತು. ಇಲ್ಲಿ ಸಂಘರ್ಷವಿದೆ. ಸಂಸ್ಕೃತಿಗಳ ಸಂಪರ್ಕದಲ್ಲಿ ಸಂಘರ್ಷವೂ ಅಲ್ಲದೆ ಅನುಸಂಧಾನವೂ ಇರುವುದರಿಂದ ಕೊಳು-ಕೊಡುಗೆಗಳು ಇಲ್ಲಿ ನಡೆದಿವೆ. ಅಂತಿಮವಾಗಿ ಯಜಮಾನನಾಗಿ ಭಾರತದಾದ್ಯಂತ ಕಾಣಿಸಿಕೊಂಡ ಇಂಗ್ಲಿಷ್ ಹಿಂದಿನ ಸಂಸ್ಕೃತದ ಸ್ಥಾನವನ್ನು ಪಡೆದುಕೊಂಡಿತು. ಹಿಂದೆ ಪುರೋಹಿತಶಾಹಿ ವ್ಯವಸ್ಥೆಯಲ್ಲಿ ಸಾಧ್ಯವಾಗಿದ್ದ ಸಂಸ್ಕೃತದ ಮಾರುಕಟ್ಟೆ ಮೌಲ್ಯ ಈ ಹೊಸ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಇಂಗ್ಲಿಷಿನ ಪಾಲಾಯಿತು. ಈ ನಿಟ್ಟಿನಲ್ಲಿ ಸಂಸ್ಕೃತ ಕಲಿತರೆ ಸಾಗುತ್ತಿದ್ದ ಹೊಟ್ಟೆಪಾಡು ಈಗ ಇಂಗ್ಲಿಷಿನಿಂದ ಸಾಧ್ಯವಾಯಿತು. ಹೀಗಾದುದರಿಂದ ಸಾಮಾಜಿಕ ಮೇಲು ಶ್ರೇಣಿಯ ಜನರೇ ಮೊದಲು ಸಂಸ್ಕೃತಕ್ಕೆ ಕೈಕೊಟ್ಟು ಇಂಗ್ಲಿಷ್‌ಗೆ ಮುತ್ತಿಟ್ಟರು. ಇಲ್ಲಿ ಸಂಸ್ಕೃತವು ದೇವಭಾಷೆಯೆಂಬುದೇ ಮರೆತುಹೋಯಿತು!

ಇಲ್ಲಿ ಆರಂಭವಾದ ಇಂಗ್ಲಿಷ್ ಭಾಷೆಯ ಯಾಜಮಾನ್ಯ ತದನಂತರದಲ್ಲಿ ವಿಸ್ತರಿಸುತ್ತಲೇ ಹೋಯಿತು. ೧೯೪೭ ಆಗಸ್ಟ್ ೧೫ ಇದಕ್ಕೆ ಗಡಿಯಾಗಲಿಲ್ಲ; ಅದರಾಚೆಗೂ ಹೋಯಿತು. ಇವತ್ತಂತೂ ಜಗದ ಭಾಷೆಗಳೇ ಕಾಣದಷ್ಟು ದಟ್ಟವಾಗಿ ವಿಶ್ವವನ್ನು ಆವರಿಸಿದೆ.

ವಿಶ್ವದಲ್ಲಿ ಹೆಚ್ಚು ಮಾರುಕಟ್ಟೆ ಮೌಲ್ಯವನ್ನು ಪಡೆದಿರುವುದೇ ಇಂಗ್ಲಿಷ್ ಭಾಷೆ. ಅಂದು ಇದರ ರಥವು ಬ್ರಿಟನ್‌ನಿಂದ ಹೊರಟ ಅಶ್ವಮೇಧವಾಗಿತ್ತು; ಇಂದು ಅಮೆರಿಕಾದಿಂದ ಹೊರಟಿದೆ. ಇಂಗ್ಲಿಷ್‌ಗೆ ಕನ್ನಡವೊಂದೇ ಎರಡನೆಯ ದರ್ಜೆಯ ಭಾಷೆ-ಸಂಸ್ಕೃತಿಯಲ್ಲ; ಇತರ ಭಾಷೆಗಳೂ ಕೂಡಿ ಇದನ್ನು ಪೋಷಿಸುವ ನಿಟ್ಟಿನಲ್ಲಿ ಸ್ಥಳೀಯರ ಪಾತ್ರವೂ ನಿಯತವಾಗಿದೆ. ಇಂತಹ ಯಜಮಾನಿಕೆಯನ್ನು ಪ್ರಶ್ನಿಸುವ ಮತ್ತು ಪ್ರಾದೇಶಿಕವಾಗಿ ಕನ್ನಡದಂತಹ ಜನಭಾಷೆಗಳಿಗೆ ಆದ್ಯತೆ ನೀಡುವ ಸಮಾಜವಾದಿಗಳ ಮಾತುಗಳು ಸರ್ಕಾರ ಮತ್ತು ಜನರಿಗೆ ಮುಟ್ಟುತ್ತಿವೆಯೇ ಹೊರತು ಅಂತರಾಳಕ್ಕೆ ತಲುಪುತ್ತಿಲ್ಲ. ಇದರಿಂದ ಸ್ಥಳೀಯ ಭಾಷೆಗಳು ಮಾತ್ರ ಕುಬ್ಜವಾಗುತ್ತಿಲ್ಲ; ಆ ಭಾಷೆಯಲ್ಲಿ ಅಡಗಿರುವ ಚರಿತ್ರೆ, ಸಂವೇದನೆ, ಆತ್ಮವಿಶ್ವಾಸ ಮುಂತಾದ ಎಲ್ಲ ಗುಣಗಳೂ ಕುಬ್ಜವಾಗುತ್ತಿವೆ; ಸಾಯುತ್ತಿವೆ. ಇದು ಉತ್ಪ್ರೇಕ್ಷೆಯಲ್ಲ, ಇದರ ಉದಾಹರಣೆಯಾಗಿ ವಸಾಹತುಶಾಹಿಯ ಯಜಮಾನಿಕೆಗೆ ಒಳಗಾಗಿ ತಮ್ಮ ಪರಂಪರೆಯ ಸ್ಮೃತಿ ಮತ್ತು ಅಸ್ಮಿತೆಯನ್ನು ಕಳೆದುಕೊಂಡ ಆಫ್ರಿಕಾದ ಅನೇಕ ದೇಶಗಳು ಇಂದು ನಮ್ಮ ಮುಂದಿವೆ. ಚರಿತ್ರೆಯನ್ನು ಅರಿಯದ ಹೊರತು ಚರಿತ್ರೆಯ ನಿರ್ಮಾಣವಿಲ್ಲ. ಅದರ ಸಾಧನವೇ ಪರಂಪರೆಯನ್ನು ತುಂಬಿಕೊಂಡಿರುವ ಭಾಷೆ. ಇದು ಕಾಣುವುದಿಲ್ಲ; ಕಾರಣ, ಪ್ರಾಣರೂಪಿ. ಪ್ರಾಣವು ದೇಹದಿಂದ ಹೊರಟ ಹೊತ್ತು, ದೇಹವು ಸ್ಮಶಾನವನ್ನು ನೋಡುತ್ತದೆ. ಅಂಥಾದ್ದಾಗದಿರಲಿ ಕನ್ನಡ. ಅಂತೆಯೇ ಜಗತ್ತಿನ ವೈವಿಧ್ಯ ಸಂಸ್ಕೃತಿಯನ್ನು ಶ್ರೀಮಂತವಾಗಿ ಕಟ್ಟಿಕೊಡುವ ಯಾವುದೇ ಭಾಷೆ ಒಬ್ಬ ಯಜಮಾನನೆದುರಿನಲಿ ಕುಬ್ಜವಾಗುತ್ತಾ, ಕಡೆಗೆ ಸಾಯದಿರಲಿ. ಸಮಾಜದ ಎಲ್ಲ ಭಾಷೆಗಳು, ಸಂಸ್ಕೃತಿಗಳು ಉಳಿದು ನಾಳಿನವರಿಗೂ ದಕ್ಕಲಿ. ನಾಳಿನವರ ಶಾಪ ನಮಗೆ ತಟ್ಟದಿರಲಿ.

**ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ**
ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು - ೫೬೦ ೦೫೬

ಆತ್ಮಹತ್ಯೆ ಈಗ ದಿನನಿತ್ಯದ ಸುದ್ದಿ. ಓದಿದಾಗ ಅಯ್ಯೋ ಪಾಪ ಎನ್ನುತ್ತೇವೆ. ಹೀಗೆ ಸಾಯಬಾರದಿತ್ತು, ಕಷ್ಟ ಬಂದರೇನಂತೆ, ಇದ್ದು ಜಯಿಸಬೇಕಲ್ಲವೇ. ಆತ್ಮಹತ್ಯೆ ಮಾಡಿಕೊಳ್ಳುವವರು ಹೇಡಿಗಳು ಪಲಾಯನವಾದಿಗಳು ಎಂದು ಟೀಕಿಸುತ್ತೇವೆ. ಆತ್ಮಹತ್ಯೆ ಮಾಡಿಕೊಳ್ಳಲು ಧೈರ್ಯ ಬೇಕು. ಆದ್ದರಿಂದ ಆತ ಹೇಡಿ ಹೇಗಾದಾನು? ಬಹಳ ಜನಕ್ಕೆ ಆತ್ಮಹತ್ಯೆ ಮಾಡಿಕೊಳ್ಳಬೇಕು ಎನಿಸುತ್ತದೆ. ಆದರೆ ಧೈರ್ಯ ಬರುವುದಿಲ್ಲ ಎನ್ನುವುದನ್ನು ಕೇಳುತ್ತೇವೆ. ಆತ್ಮಹತ್ಯೆ ತಪ್ಪು, ಪಾಪ. ಆತ್ಮಹತ್ಯೆ ಮಾಡಿಕೊಂಡವರಿಗೆ ಸದ್ಗತಿ ಇಲ್ಲ, ಅವರು ಅಂತರಪಿಶಾಚಿಗಳಾಗಿ ಅಲೆಯಬೇಕಾಗುತ್ತದೆ ಎಂದು ನಮ್ಮ ಸಮಾಜ ಹೆದರಿಸುತ್ತದೆ. ಆತ್ಮಹತ್ಯೆ ಶಿಕ್ಷಾರ್ಹ ಅಪರಾಧ ಎಂದು ಭಾರತ ದಂಡ ಸಂಹಿತೆ (ಸೆಕ್ಷನ್ ೩೦೯) ಹೇಳುತ್ತದೆ. ಆತ್ಮಹತ್ಯೆ ಪ್ರಯತ್ನ ಮಾಡಿ, ಉಳಿದುಕೊಂಡವರನ್ನು ಅವರ ಮನೆಯವರೂ ಸೇರಿದಂತೆ ಎಲ್ಲರೂ ಟೀಕಿಸುತ್ತಾರೆ, ಹೀನಾಯ ಮಾಡುತ್ತಾರೆ. ಅವರ ಮೇಲೆ ಆಕ್ರೋಶವನ್ನು ವ್ಯಕ್ತಪಡಿಸುತ್ತಾರೆ. ಆದರೂ ನಮ್ಮ ದೇಶದಲ್ಲಿ, ಪೊಲೀಸು ಅಂಕಿ ಅಂಶಗಳ ಪ್ರಕಾರ ಒಂದು ವರ್ಷಕ್ಕೆ ಒಂದು ಲಕ್ಷಕ್ಕಿಂತ ಅಧಿಕ ಜನ ಆತ್ಮಹತ್ಯೆ ಮಾಡಿಕೊಂಡು ಸಾಯುತ್ತಾರೆ. ಅಂದರೆ ಆತ್ಮಹತ್ಯೆಗೆ ಪ್ರಯತ್ನ ಮಾಡುವವರ ಸಂಖ್ಯೆ ವರ್ಷಕ್ಕೆ ಇಪ್ಪತ್ತು ಲಕ್ಷವನ್ನು ಮುಟ್ಟಬಹುದು. ನಮ್ಮ ರಾಜ್ಯದಲ್ಲೇ ೨೦೦೦ನೇ ವರ್ಷದಲ್ಲಿ ೧೨,೩೭೫ ಮಂದಿ, ೨೦೦೧ರಲ್ಲಿ ೧೧,೮೮೧ ಮಂದಿ, ೨೦೦೨ರಲ್ಲಿ ೧೨,೨೭೦ ಮಂದಿ ಆತ್ಮಹತ್ಯೆಯ ಮೂಲಕ ಸತ್ತಿದ್ದಾರೆ. ಬೆಂಗಳೂರು ನಗರ ಜಿಲ್ಲೆಯಲ್ಲಿ ಇದು ಅತ್ಯಧಿಕವಾದರೆ (೨೦೦೨ರಲ್ಲಿ ೧೪೪೦) ಅತಿಕಡಿಮೆ ರಾಯಚೂರು, ಬೀದರ್, ಗದಗ್ ಜಿಲ್ಲೆಯಲ್ಲಿ (೨೦೦೨ರಲ್ಲಿ ೧೫೦) ಎಂದು ತಿಳಿದುಬರುತ್ತದೆ. ಆತ್ಮಹತ್ಯೆ ಮಾಡಿಕೊಂಡು ಸತ್ತವರಲ್ಲಿ ಶೇಕಡಾ ೩೬ ಮಂದಿಯ ವಯಸ್ಸು ೧೫ರಿಂದ ೨೯ವರ್ಷ ಹಾಗೂ ಶೇಕಡಾ ೩೪ರಷ್ಟು ಮಂದಿಯ ವಯಸ್ಸು ೩೦ರಿಂದ ೪೪ವರ್ಷ. ಯುವಜನರಲ್ಲಿ ಹಾಗೂ ಬೆಳೆದ ಮಕ್ಕಳಲ್ಲಿ ಆತ್ಮಹತ್ಯಾ ಪ್ರಕರಣಗಳು ಹೆಚ್ಚುತ್ತಿರುವುದು ಕಳವಳಕಾರಿ. ಏಕೆ ಆತ್ಮಹತ್ಯೆ ಮಾಡಿಕೊಂಡಿದ್ದು ಎಂಬುದಕ್ಕೆ ದಾಖಲೆಗಳಲ್ಲಿ ನಮೂದಾದ ಕಾರಣಗಳು ಇಂತಿವೆ:

| | |
|---|---|
| ೧. ದೈಹಿಕ ಅಥವಾ ಮಾನಸಿಕ ಕಾಯಿಲೆಗಳು (ಏಯ್ಡ್ಸ್, ಕ್ಯಾನ್ಸರ್, ವಾಸಿಯಾಗದ ಹೊಟ್ಟೆನೋವು, ಮಾನಸಿಕ ರೋಗ ಇತ್ಯಾದಿ) | ಶೇ. ೩೧ |
| ೨. ಕೌಟುಂಬಿಕ ಸಮಸ್ಯೆ-ಕಲಹಗಳು | ಶೇ. ೧೭ |
| ೩. ಬಡತನ/ಹಣಕಾಸಿನ ನಷ್ಟ | ಶೇ. ೫ |
| ೪. ಪರೀಕ್ಷೆಯಲ್ಲಿ ವಿಫಲತೆ | ಶೇ. ೧.೬ |
| ೫. ಕಾರಣ ಗೊತ್ತಿಲ್ಲ | ಶೇ. ೨೩ |

ವಾಸಿಯಾಗದ ಕಾಯಿಲೆ ಇದ್ದವರೆಲ್ಲ ಆತ್ಮಹತ್ಯೆ ಮಾಡಿಕೊಳ್ಳುವುದಿಲ್ಲ. ಹಾಗೇ ಸೋಲು, ನಿರಾಶೆಗಳಿಗೆ ಒಳಗಾದವರೆಲ್ಲ ತಮ್ಮನ್ನು ತಾವು ಕೊಂದುಕೊಳ್ಳುವುದಿಲ್ಲ. ಕೆಲವರು ಆತ್ಮಹತ್ಯೆಯ ದಾರಿಯನ್ನು ಏಕೆ ಆಯ್ಕೆಮಾಡಿಕೊಳ್ಳುತ್ತಾರೆ? ನೋವು ನಷ್ಟ ನಿರಾಶೆಯ ತೀವ್ರತೆ ಅದಕ್ಕೆ ಕಾರಣವೇ? ವ್ಯಕ್ತಿಯ ವ್ಯಕ್ತಿತ್ವದ (ಮನಸ್ಸು) ದುರ್ಬಲತೆ ಕಾರಣವೇ? ಸನ್ನಿವೇಶ, ಪರಿಸರ ಕಾರಣವೇ? ಅವರು ಆತ್ಮಹತ್ಯೆ ಮಾಡಿಕೊಂಡರು ಇವರು ಮಾಡಿಕೊಂಡರು ನಾನೂ ಏಕೆ ಮಾಡಿಕೊಳ್ಳಬಾರದು ಎಂದು ಅನುಕರಣೆ ಮಾಡುವುದು ಕಾರಣವೇ? ಅಥವಾ ಮನೆಯವರನ್ನು, ಸಮಾಜವನ್ನು ಹೆದರಿಸಲು, ಬ್ಲಾಕ್‌ಮೇಲ್ ಮಾಡಲು, ಸಿಟ್ಟು ಕೋಪವನ್ನು ಪ್ರಕಟಿಸಲು ವ್ಯಕ್ತಿ ಆತ್ಮಹತ್ಯೆ ಮಾರ್ಗ ಹಿಡಿಯುತ್ತಾನೆಯೇ? ಎಂದು ಕೇಳಲಾಗುತ್ತದೆ. ವೈಜ್ಞಾನಿಕ ಕಾರಣಗಳೇನು ಎಂದು ಸಂಬಂಧಪಟ್ಟವರು ಕೇಳುತ್ತಾರೆ.

**ಗರ್ಭಿಣಿ ಆತ್ಮಹತ್ಯೆ**

ಯಲಹಂಕ ಉಪನಗರ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ಗೌರಿ (26) ಎಂಬ ಗರ್ಭಿಣಿಯೊಬ್ಬರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ.

ಅಲ್ಲಿನ ಜನಪ್ರಿಯ ಅಪಾರ್ಟ್‌ಮೆಂಟ್‌ನಲ್ಲಿ ವಾಸಿಸುತ್ತಿದ್ದ ಅವರು, ಯೋಜನಾ ಎಂಜಿನಿಯರ್ ಆಗಿರುವ ರವಿ (30) ಎಂಬುವರ ಪತ್ನಿ.

ಆರು ವರ್ಷದ ಹಿಂದೆ ವಿವಾಹವಾಗಿದ್ದು, ಐದು ವರ್ಷಗಳ ಮಗು ಇದೆ. ಮನೆ ಕೆಲಸಕ್ಕೆ ಸಹಾಯ ಮಾಡುವಂತೆ ಪತಿಯನ್ನು ಕೇಳಿದ್ದರು. ಈ ವಿಷಯ ಜಗಳಕ್ಕೆ ಕಾರಣವಾಗಿತ್ತು. ಬುಧವಾರ ರಾತ್ರಿ ಪತಿ ಕೆಲಸಕ್ಕೆ ಹೋದ ಬಳಿಕ ಅವರು ನೇಣು ಹಾಕಿಕೊಂಡಿದ್ದಾರೆ.

ರವಿ ನಡುರಾತ್ರಿ 1.30ರಲ್ಲಿ ಮನೆಗೆ ಹಿಂದಿರುಗಿದಾಗ ಘಟನೆ ಬೆಳಕಿಗೆ ಬಂದಿದೆ ಎಂದು ಪೊಲೀಸರು ತಿಳಿಸಿದ್ದಾರೆ.

**ಅನುವಂಶೀಯವೇ?**

ಕೆಲವು ಪ್ರಕರಣಗಳಲ್ಲಿ ಕುಟುಂಬದಲ್ಲಿ ಒಬ್ಬರಿಗಿಂತ ಹೆಚ್ಚಿನ ಜನ ಆತ್ಮಹತ್ಯೆ ಮಾಡಿಕೊಂಡು ಸಾಯುವುದನ್ನು ಕಂಡು, ಇದು ಅನುವಂಶೀಯವೇ ಎಂಬ ಪ್ರಶ್ನೆ ಏಳುತ್ತದೆ. ಅಧ್ಯಯನಗಳ ಪ್ರಕಾರ, ಅತ್ಯಲ್ಪ ಸಂಖ್ಯೆಯ ಪ್ರಕರಣಗಳಲ್ಲಿ ಅನುವಂಶೀಯತೆ ಕೆಲಸ

ಡಾ|| ಸಿ. ಆರ್. ಚಂದ್ರಶೇಖರ್

# ಆತ್ಮಹತ್ಯೆಯನ್ನು ತಡೆಯಬಹುದೇ?

ಮಾಡಬಹುದು. ತಂದೆಯಿಂದ ಮಗನಿಗೆ, ತಾಯಿಯಿಂದ ಮಗಳಿಗೆ ಆತ್ಮಹತ್ಯಾ ನಡೆವಳಿಕೆ ವರ್ಗಾವಣೆಯಾಗಬಹುದು. ಅಥವಾ ಆತ್ಮಹತ್ಯೆಗೆ ಪ್ರಚೋದಿಸುವ ಖಿನ್ನತೆ, ವ್ಯಕ್ತಿತ್ವ ದೋಷಗಳು ಆನುವಂಶೀಯವಾಗಿ ಬರಬಹುದು.

**ಬಾಲ್ಯದ ಅಹಿತ ಅನುಭವಗಳು :** ತಂದೆತಾಯಿ-ಪಾಲಕ-ಪೋಷಕರ ಪ್ರೀತಿಯಿಂದ ವಂಚಿತರಾಗಿ, ಅಸಡ್ಡೆ, ಹೀನಾಯ ಅತಿ ಶಿಕ್ಷೆ, ಅಭದ್ರತೆಯ ಭಾವನೆಗಳಿಂದ ತತ್ತರಿಸುವ ಜನ, ಮೇಲಿಂದ ಮೇಲೆ ಬಾಲ್ಯದಲ್ಲಿ ಅಹಿತಕಾರಿ ಅನುಭವ-ಘಟನೆಗಳಿಗೆ ಒಳಗಾದವರು ಇತರರಿಗಿಂತ ಆತ್ಮಹತ್ಯೆ ನಡೆವಳಿಕೆಯನ್ನು ಹೆಚ್ಚಾಗಿ ಪ್ರದರ್ಶಿಸುತ್ತಾರೆ.

**ಶಿಕ್ಷಣ :** ಕಾಲೇಜು ಶಿಕ್ಷಣ ಪಡೆದವರಲ್ಲಿ ಆತ್ಮಹತ್ಯಾ ಪ್ರಕರಣಗಳು ಕಡಿಮೆ. ಅವಿದ್ಯಾವಂತರಲ್ಲಿ, ಕಡಿಮೆ ಶಿಕ್ಷಣ ಪಡೆದವರಲ್ಲಿ ಹೆಚ್ಚು. ಅಂದರೆ ಹೆಚ್ಚಿನ ಶಿಕ್ಷಣ ವ್ಯಕ್ತಿಗೆ ಕಷ್ಟ-ನೋವುಗಳನ್ನು ನಿಭಾಯಿಸುವ ಶಕ್ತಿ-ಕೌಶಲಗಳನ್ನು ಕೊಡುತ್ತದೆ.

ಸಾಮಾಜಿಕ ಆಸರೆ ಇಲ್ಲದವರು ಹಾಗೂ ಒಂಟಿಯಾಗಿ ಬದುಕುವವರಲ್ಲಿ ಆತ್ಮಹತ್ಯೆ ಹೆಚ್ಚು. ಕಷ್ಟವಾಗಲೀ, ಸುಖವಾಗಲೀ, ನೋವಾಗಲೀ, ನಲಿವಾಗಲೀ, ಹಂಚಿಕೊಳ್ಳಲು ನಾವೆಲ್ಲ ಇಷ್ಟಪಡುತ್ತೇವೆ. ಹಂಚಿಕೊಂಡಷ್ಟೂ ಸುಖ ಹೆಚ್ಚಿದರೆ, ದುಃಖ ತಗ್ಗುತ್ತದೆ. ಅಸಹಾಯ ಸನ್ನಿವೇಶದಲ್ಲಿ ಜೊತೆಗೆ ಇನ್ನೊಬ್ಬರು ಇದ್ದರೆ, ಮನಸ್ಸಿಗೆ ಹಿತ, ಧೈರ್ಯ. ಇಲ್ಲದಿದ್ದರೆ ಒಂಟಿತನ, ಅಸಹಾಯಕತೆ ಹಾಗೂ ನಿರಾಶಾವಾದ ವ್ಯಕ್ತಿಯ ಮನಸ್ಸನ್ನು ಆವರಿಸಿ, ಆತ್ಮಹತ್ಯೆಗೆ ಪ್ರೇರಣೆ ನೀಡಬಹುದು.

**ಖಿನ್ನತೆ :** ಆತ್ಮಹತ್ಯೆಗೆ ಪ್ರಯತ್ನ ಮಾಡುವವರಲ್ಲಿ, ಮೂರು ನಾಲ್ಕು ವಾರಗಳ ಕಾಲ, ವ್ಯಕ್ತಿಯ ಮನಸ್ಸನ್ನು ಖಿನ್ನತೆ ಆವರಿಸಿರುತ್ತದೆ ಎಂದು ಅಧ್ಯಯನಗಳಿಂದ ತಿಳಿದುಬರುತ್ತದೆ. ಪ್ರಚಲಿತ ಸಮಸ್ಯೆಯೋ, ತಪ್ಪಿತಸ್ಥ ಭಾವನೆಯೋ, ಪ್ರೀತಿ ಆಸರೆಯ ಕೊರತೆಯೋ, ಬೇಕು ಬೇಡಗಳು ಪೂರೈಕೆ ಆಗದೆಯೋ, ದೈಹಿಕ ಅಥವಾ ಮಾನಸಿಕ ಶ್ರಮ-ದಣಿವಿನಿಂದಲೋ



ಖಿನ್ನತೆಯ ಲಕ್ಷಣಗಳು ಕಂಡುಬರುತ್ತವೆ. ಬೇಸರ, ದುಃಖ, ನಿರಾಸಕ್ತಿ, ನಿರಾಶೆ, ಅಸಹಾಯಕತೆ, ತಾನು ಅಪ್ರಯೋಜಕ ಎಂಬ ಅನಿಸಿಕೆ, ಆಹಾರ ಸೇವನೆ, ನಿದ್ರೆಯ ತೊಂದರೆಗಳು, ನಕಾರಾತ್ಮಕ ಆಲೋಚನೆಗಳು ಇರುತ್ತವೆ. ಮಿದುಳಿನಲ್ಲಿ ನರವಾಹಕ ವಸ್ತುಗಳಾದ ಡೋಪಮಿನ್, ಸೆರೋಟೋನಿನ್ ಕಡಿಮೆ ಇರುತ್ತವೆ. ಈ ಖಿನ್ನತೆಯಿಂದಾಗಿ ವ್ಯಕ್ತಿಯ ಶಕ್ತಿ ಸಾಮರ್ಥ್ಯಗಳು ತಗ್ಗುವುದಲ್ಲದೆ, ದೈಹಿಕ ರೋಗಲಕ್ಷಣಗಳು ಮೂಡಿ, ವ್ಯಕ್ತಿ ವೈದ್ಯರನ್ನು ಕಂಡಿರುತ್ತಾನೆ ಎಂಬುದು ಗಮನಾರ್ಹ.

**ದುರ್ಬಲ ವ್ಯಕ್ತಿತ್ವ:** ಒತ್ತಡ/ಸಮಸ್ಯೆಗಳನ್ನು ಬಗೆಹರಿಸುವ ಕೌಶಲದ ಕೊರತೆ, ಭಾವೋದ್ವೇಗಗಳನ್ನು ನಿಯಂತ್ರಿಸುವ ಸಾಮರ್ಥ್ಯ ಇಲ್ಲದಿರುವುದು, ನಕಾರಾತ್ಮಕ ಧೋರಣೆ, ಸಂಕುಚಿತ ಮನೋಭಾವ, ಕೀಳರಿಮೆಗಳಿಂದ ವ್ಯಕ್ತಿ ದುರ್ಬಲನಾಗಿರಬಹುದು. ಆಗ ಸಾಧಾರಣ ಅಥವಾ ಸಣ್ಣಪುಟ್ಟ ಕಷ್ಟನಷ್ಟ ನೋವುನಿರಾಶೆಗಳೇ ವ್ಯಕ್ತಿಯನ್ನು ಆತ್ಮಹತ್ಯೆಗೆ ದೂಡಬಹುದು. ಅಪಕ್ವ ವ್ಯಕ್ತಿತ್ವ, ಬಾರ್ಡರ್‌ಲೈನ್ ವ್ಯಕ್ತಿತ್ವ ದೋಷ ಇರುವವರಲ್ಲಿ ಆತ್ಮಹತ್ಯಾ ನಡೆವಳಿಕೆ ಹೆಚ್ಚು.

**ಮಾನಸಿಕ ಕಾಯಿಲೆಗಳು :** ಒಳಜನ್ಯಖಿನ್ನತೆ, ಸ್ಕಿಜೋಫ್ರೀನಿಯಾ, ಹೊಂದಾಣಿಕೆಯ ಅಸ್ವಸ್ಥತೆಗಳು (Adjustment Disorders), ಮದ್ಯಪಾನ-ಮಾದಕವಸ್ತುಗಳ ಸೇವನೆಯ ಚಟ, ಡೆಮೆನ್ಷಿಯ ರೋಗಗಳಿಂದ ನರಳುವವರಲ್ಲಿ ಆತ್ಮಹತ್ಯೆ ಹೆಚ್ಚು.

ಆತ್ಮಹತ್ಯೆಗೆ ಪ್ರಯತ್ನಿಸುವವರೆಲ್ಲ ಸಾಯಲು ಇಷ್ಟಪಡುವುದಿಲ್ಲ! ಸಾವೇ ಸರಿ, ಸಾವೇ ತಮ್ಮ ಬದುಕಿಗೆ, ಸಮಸ್ಯೆಗೆ ಪರಿಹಾರ ಎಂದು ನಂಬಿ ಸಾಯುವವರು ಒಂದು ಗುಂಪಿಗೆ ಸೇರಿದವರು. ಇನ್ನೊಂದು ಗುಂಪು, ಆತ್ಮಹತ್ಯಾ ಪ್ರಯತ್ನದ ಮೂಲಕ ಇತರರಿಗೆ ಒಂದು ಸಂದೇಶವನ್ನು ಕೊಡಲು ಇಚ್ಛಿಸುತ್ತಾರೆ. ಇವರಿಗೆ ಸಾಯುವ ಇಚ್ಛೆ ಇರುವುದಿಲ್ಲ. ಇದರ ಆಧಾರದ ಮೇಲೆ SUICIDES ಮತ್ತು Para Suicide ಎಂದು ವಿಭಜನೆ ಮಾಡಲಾಗುತ್ತದೆ. ಹೀಗಾಗಿ ಆತ್ಮಹತ್ಯೆ ಮಾಡಿಕೊಳ್ಳುವವರಲ್ಲಿ ಎರಡು ಗುಂಪಿನ ಜನ ಇದ್ದಾರೆ. ಒಂದು ಗುಂಪು, ಬದುಕಿನಲ್ಲಿ ಅರ್ಥವಿಲ್ಲ ಸುಖವಿಲ್ಲ ಎಂದು ಭಾವಿಸಿ, ತಮ್ಮ ಸಮಸ್ಯೆಗೆ, ತಮ್ಮ ಕಷ್ಟ, ನೋವುಗಳಿಗೆ ಸಾವೇ ಅಂತಿಮ ಹಾಗೂ ಯೋಗ್ಯ ಪರಿಹಾರ ಎಂದು ನಂಬಿ ಆತ್ಮಹತ್ಯೆಗೆ ಪ್ರಯತ್ನ ಮಾಡುವವರು. ಇವರು ತೀವ್ರ ಖಿನ್ನತೆ, ಅಸಹಾಯಕತೆಗೆ ಒಳಗಾಗಿರುತ್ತಾರೆ. ಪರಿಹಾರದ ಯಾವ ಮಾರ್ಗವೂ ಅವರಿಗೆ ಗೋಚರವಾಗಿರುವುದಿಲ್ಲ. ಹೀಗಾಗಿ ಅವರು ಸಾಯಲು ಪ್ರಾಮಾಣಿಕ ಹಾಗೂ ತೀವ್ರವಾದ ಪ್ರಯತ್ನ ಮಾಡುತ್ತಾರೆ. ಆತ್ಮಹತ್ಯೆಗೆ ಯಾರೂ ಅವರನ್ನು ತಡೆಯದ ಸಮಯ ಸ್ಥಳವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ನೇಣು, ಬೆಂಕಿ ಹಚ್ಚಿಕೊಳ್ಳುವುದು, ಆಸಿಡ್ ಕುಡಿಯುವುದು, ಬಹು ಎತ್ತರದ ಕಟ್ಟಡದಿಂದ ಕೆಳಗೆ ಬೀಳುವುದು, ಗುಂಡಿಟ್ಟುಕೊಳ್ಳುವುದು ಇತ್ಯಾದಿ ತೀವ್ರ ವಿಧಾನಗಳನ್ನು ಬಳಸುತ್ತಾರೆ. ಇದಕ್ಕಾಗಿ ಸರಿಯಾದ ಯೋಜನೆಯನ್ನು ರೂಪಿಸುತ್ತಾರೆ.

ಇನ್ನೊಂದು ಗುಂಪು ಆತ್ಮಹತ್ಯೆಯನ್ನು ತಮ್ಮ ಕೋಪ, ತಾಪ, ಅಸಮಾಧಾನವನ್ನು ಪ್ರಕಟಿಸಲು, ಸಂಬಂಧಪಟ್ಟವರನ್ನು ಹೆದರಿಸಲು ಅಥವಾ ಅವರಿಗೆ ಪಾಠ ಕಲಿಸಲು, ಅವರ ಗಮನ ಸೆಳೆಯಲು, ಅವರನ್ನು ನೋಯಿಸಲು, ಅಪಮಾನ ಮಾಡಲು ಬಳಸುತ್ತಾರೆ. ಅಥವಾ ಭಾವೋದ್ವೇಗಕ್ಕೆ ಒಳಗಾಗಿ ತಾವೇನು ಮಾಡುತ್ತಿದ್ದೇವೆಂಬುದನ್ನು ಅರಿಯದೆ, ಆ ಕ್ಷಣಕ್ಕೆ ಆತ್ಮಹತ್ಯೆಯೇ ಸರಿ ಎಂಬ ದುಡುಕು ನಿರ್ಧಾರಕ್ಕೆ ಬಂದುಬಿಡುತ್ತಾರೆ. ಈ ಗುಂಪಿಗೆ ನಿಜವಾಗಿ ಸಾಯಲು ಮನಸ್ಸಿರುವುದಿಲ್ಲ. ಆ ಕ್ಷಣ ಅಥವಾ ಆ ಸನ್ನಿವೇಶ ತಪ್ಪಿದರೆ ಅವರು ಆತ್ಮಹತ್ಯೆಯ ಪ್ರಯತ್ನವನ್ನು ಖಂಡಿತಾ ಮಾಡುವುದಿಲ್ಲ. ಸಮಸ್ಯಾ ಪರಿಹಾರಕ್ಕೆ ಇತರ ಮಾರ್ಗಗಳನ್ನು ಆಲೋಚಿಸುತ್ತಾರೆ ಅಥವಾ ಸಮಸ್ಯೆಯೊಂದಿಗೆ ಬದುಕಲು ಕಲಿಯುತ್ತಾರೆ.

**ಆತ್ಮಹತ್ಯೆಯನ್ನು ತಡೆಗಟ್ಟಲು ಸಾಧ್ಯವೇ ?**

ಖಂಡಿತವಾಗಿ ತಡೆಯಬಹುದು. ಆದರೆ ಎಲ್ಲಾ ಆತ್ಮಹತ್ಯೆಗಳನ್ನು ತಡೆಯಲು ಸಾಧ್ಯವಿಲ್ಲ. ಕೆಲವು ತಾತ್ಕಾಲಿಕ, ತುರ್ತುಕ್ರಮಗಳಿಂದ, ಕೆಲವು ದೀರ್ಘಾವಧಿ ಕ್ರಮಗಳಿಂದ ಸಾಕಷ್ಟು ಆತ್ಮಹತ್ಯಾ ಪ್ರಕರಣಗಳನ್ನು ತಡೆಯಬಹುದು.

**ತಾತ್ಕಾಲಿಕ ತುರ್ತುಕ್ರಮಗಳು**

ಆತ್ಮಹತ್ಯಾ ಪ್ರಯತ್ನ ನಡೆಯಬಹುದಾದ ಕುಟುಂಬ ಮತ್ತು ವ್ಯಕ್ತಿಗಳನ್ನು ಗುರುತಿಸುವುದು.

**ಕುಟುಂಬಗಳ ಲಕ್ಷಣಗಳು**

ಕೌಟುಂಬಿಕ ಸಾಮರಸ್ಯ ಇಲ್ಲದಿರುವುದು, ದಾಂಪತ್ಯವಿರಸ, ಆಸ್ತಿ-ಪಾಸ್ತಿ, ವರದಕ್ಷಿಣೆ ಸಮಸ್ಯೆಗಳು, ಮದ್ಯಪಾನ ಸೇವನೆಯ ಚಟ, ಕುಟುಂಬದಲ್ಲಿ ಹಿಂದಿನ ಆತ್ಮಹತ್ಯಾ ಪ್ರಯತ್ನ ಅಥವಾ ಸಾವು, ವಲಸೆ ಬಂದ ಕುಟುಂಬ, ಕನಿಷ್ಠ ಸಂಪನ್ಮೂಲಗಳ ಕೊರತೆ, ಸಾಮಾಜಿಕ ಆಸರೆ ಇಲ್ಲದ ಕುಟುಂಬ, ಮನೋರೋಗಿ ಇರುವ ಕುಟುಂಬ, ಆರ್ಥಿಕ ಸಂಕಷ್ಟದಲ್ಲಿರುವ ಅಥವಾ ಅನಾರೋಗ್ಯಪೀಡಿತ ಕುಟುಂಬ.

**ವ್ಯಕ್ತಿಯ ಲಕ್ಷಣಗಳು**

ವ್ಯಕ್ತಿಯ ವರ್ತನೆಯಲ್ಲಿ ಬದಲಾವಣೆ, ಮಂಕುತನ, ನಿರಾಸಕ್ತಿ, ಕೆಲಸ ಕರ್ತವ್ಯದಲ್ಲಿ ನಿರ್ಲಕ್ಷ್ಯ, ಸಿಟ್ಟು ಕೋಪ, ಆಕ್ರಮಣಶೀಲತೆ, ಇತರರೊಡನೆ ಬೆರೆಯಲು ನಿರಾಕರಣೆ, ಆಹಾರ ನಿದ್ದೆ ಮೈಥುನದಲ್ಲಿ ವ್ಯತ್ಯಾಸಗಳು, ಕೀಳರಿಮೆ, ತಪ್ಪಿತಸ್ಥ ಭಾವನೆ, ಅಸಹಾಯಕತೆ, ನಿರಾಶಾವಾದ, ಹೆಚ್ಚು ಮದ್ಯಪಾನ ಮಾಡುವುದು, ಇವು ನೇರವಾಗಿ ಅಥವಾ ಪರೋಕ್ಷವಾಗಿ

**ಆತ್ಮಹತ್ಯೆ ಯತ್ನ:** ಪರೀಕ್ಷೆಗೆ ಪ್ರವೇಶ ಪತ್ರ ದೊರಕಲಿಲ್ಲ ಎಂದು ಬೇಸರಗೊಂಡ ವಿದ್ಯಾರ್ಥಿಯೊಬ್ಬ ಕಾಲೇಜು ಕಟ್ಟಡದ ಮೂರನೇ ಮಹಡಿಯಿಂದ ಧುಮುಕಿ ಆತ್ಮಹತ್ಯೆಗೆ ಯತ್ನಿಸಿದ ಘಟನೆ ಇಂದು ಮಧ್ಯಾಹ್ನ ಹೆಬ್ಬಾಳ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ಸಂಭವಿಸಿದೆ.

ಕೆಂಪಾಪುರದ ಪ್ರೆಸಿಡೆನ್ಸಿ ಕಾಲೇಜಿನ ಬಿಸಿಎ ಎರಡನೇ ಸೆಮಿಸ್ಟರ್ ವಿದ್ಯಾರ್ಥಿ ವೇದ್ ಪ್ರಕಾಶ್ (22) ಧುಮುಕಿ ಗಾಯಗೊಂಡ ವಿದ್ಯಾರ್ಥಿಯಾಗಿದ್ದು, ಅವರನ್ನು ಶಿವಾನಂದ ವೃತ್ತ ಸಮೀಪದ ಮಲ್ಲಿಗೆ ಆಸ್ಪತ್ರೆಗೆ ದಾಖಲಿಸಲಾಗಿದೆ ಎಂದು ಪೊಲೀಸರು ತಿಳಿಸಿದ್ದಾರೆ.

ಹಾಜರಾತಿಯ ಕೊರತೆಯಿಂದ ಪರೀಕ್ಷೆ ಬರೆಯಲು ಕಾಲೇಜಿನ ಆಡಳಿತ ಮಂಡಳಿ ಪ್ರವೇಶ ಪತ್ರ ನೀಡಲು ನಿರಾಕರಿಸಿತ್ತು. ಇದರಿಂದ ಆತ ಬೇಸರಗೊಂಡಿದ್ದರು. ಘಟನೆಗೆ ಸಂಬಂಧಿಸಿದಂತೆ ಕಾಲೇಜಿನ ಆಡಳಿತ ಮಂಡಳಿಯ ವಿರುದ್ಧ ಕ್ರಮ ತೆಗೆದುಕೊಳ್ಳಲಾಗುವುದು ಎಂದು ಪೊಲೀಸರು ತಿಳಿಸಿದ್ದಾರೆ.

ಸಾಯುವ ಇಚ್ಛೆಯನ್ನು ವ್ಯಕ್ತಪಡಿಸುವುದು.

ಹೀಗೆ ಕುಟುಂಬ-ವ್ಯಕ್ತಿಯನ್ನು ಗುರುತಿಸಿದ ಮೇಲೆ :

* ತಮ್ಮ ಕಷ್ಟ-ನಷ್ಟ-ನೋವುಗಳನ್ನು ಹೇಳಿ ಕೊಳ್ಳಲು ಪ್ರೋತ್ಸಾಹಿಸಬೇಕು.

* ಭಾವನಾತ್ಮಕ ಆಸರೆ-ನೆರವನ್ನು ನೀಡಬೇಕು.

* ಸಮಸ್ಯೆಯ ವಾಸ್ತವಿಕ ವಿಶ್ಲೇಷಣೆ ಮತ್ತು ಪ್ರಾಯೋಗಿಕ ಪರಿಹಾರ ಮಾರ್ಗಗಳ ಬಗ್ಗೆ ಚರ್ಚಿಸಬೇಕು.

* ವ್ಯಕ್ತಿಯನ್ನು ಒಂಟಿಯಾಗಿರಲು ಬಿಡಬಾರದು. ಆತ/ಆಕೆ ಯಾವುದಾದರೊಂದು ಚಟುವಟಿಕೆಯಲ್ಲಿ ನಿರತನಾಗಿರಲು ಪ್ರೋತ್ಸಾಹಿಸಬೇಕು.

* ದೇವರ ಪ್ರಾರ್ಥನೆ, ಭಜನೆ, ದೇವಸ್ಥಾನ/ಮಸೀದಿ/ಚರ್ಚುಗಳಿಗೆ ಭೇಟಿ, ಧಾರ್ಮಿಕ ಪುಸ್ತಕಗಳ ಪಠಣ ಮಾಡಲು ಹೇಳಬೇಕು. ದೇವರು ಒಳ್ಳೆಯದನ್ನು ಮಾಡುತ್ತಾನೆ ಎಂಬ ಭರವಸೆಯನ್ನು ಮೂಡಿಸಬೇಕು.

* ಯಾವುದೇ ಕಷ್ಟ/ಸಮಸ್ಯೆಗೆ ಆತ್ಮಹತ್ಯೆ ಪರಿಹಾರ ವಲ್ಲ, ಸಾವು ಪರಿಹಾರವಾಗ ಬಾರದು, ಆತ್ಮಹತ್ಯೆಯಿಂದ ವ್ಯಕ್ತಿಯ ಹೆಂಡತಿ/ಮಕ್ಕಳು/ಆಶ್ರಿತರು/ಪ್ರೀತಿ ಪಾತ್ರರು ಅನಾಥ ರಾಗುತ್ತಾರೆ ಎಂಬುದನ್ನು ವ್ಯಕ್ತಿಯ ಗಮನಕ್ಕೆ ತರಬೇಕು.

* ಕಷ್ಟಗಳು/ಸಮಸ್ಯೆಗಳು ಮೋಡಗಳಿದ್ದಂತೆ. ಪರಿಹಾರದ ಗಾಳಿ ಬೀಸಿದಾಗ ಚದುರಿ ಹೋಗುತ್ತವೆ. ಶಾಶ್ವತವಾಗಿ ಉಳಿಯುವುದಿಲ್ಲ ಎಂದು ತಿಳಿಯಹೇಳಬೇಕು.

* ಖಿನ್ನತೆಯ ಲಕ್ಷಣಗಳಿದ್ದರೆ, ವೈದ್ಯರಿಂದ ಖಿನ್ನತೆ ನಿವಾರಕ ಹಾಗೂ ಶಮನಕಾರಿ ಮಾತ್ರೆಗಳನ್ನು ಬರೆಸಿಕೊಡಬೇಕು. ಈ ಔಷಧಿಯನ್ನು ಎರಡರಿಂದ ಮೂರು ತಿಂಗಳುಗಳು ಸೇವಿಸಲು ಹೇಳಬೇಕು.

* ಕಷ್ಟ ಸಮಸ್ಯೆಯ ಪರಿಹಾರದ ಭಾರವನ್ನು ಇತರರೂ ಹೊರುತ್ತಾರೆ. ಸಹಾನುಭೂತಿ ತೋರಿಸಿ, ನೆರವಾಗುವ ಜನರಿದ್ದಾರೆ ಎಂಬುದನ್ನು ವ್ಯಕ್ತಿಗೆ ಮನದಟ್ಟು ಮಾಡಿಕೊಡಬೇಕು.

* ಪತ್ರಿಕೆಗಳು, ರೇಡಿಯೋ, ಟೀವಿಗಳಲ್ಲಿ ಆತ್ಮಹತ್ಯೆಗಳನ್ನು ವೈಭವೀಕರಿಸಬಾರದು. ಅವುಗಳಲ್ಲಿ ಆತ್ಮಹತ್ಯೆ ಒಂದು ಪರಿಹಾರ, ಪ್ರತಿಭಟನೆಯ ವಿಧಾನ, ಎಂಬ ಸಂದೇಶ ಇರ ಬಾರದು. ಆತ್ಮಹತ್ಯೆ ವರದಿ ನೀಡುವಾಗ, ಆತ್ಮಹತ್ಯೆ ಬೇಡವಾಗಿತ್ತು. ಯುಕ್ತ ಪರಿಹಾರ ವಿಧಾನಗಳ ಬಗ್ಗೆ ಮಾಹಿತಿಯನ್ನು ಕೊಡಬೇಕು. ವ್ಯಕ್ತಿಯ ಮಾನಸಿಕ ಸ್ಥೈರ್ಯವನ್ನು ಹೆಚ್ಚಿಸುವ ಮಾತುಗಳು, ಪ್ರೋತ್ಸಾಹಗಳನ್ನು ಪ್ರಸಾರ ಮಾಡಬೇಕು, ಮುದ್ರಿಸಬೇಕು.

* **ಸಹಾಯವಾಣಿ ಕೇಂದ್ರಗಳು :** ಪ್ರತಿ ಹಳ್ಳಿ/ಊರು/ಕೇರಿಗಳಲ್ಲಿ ಫೋನ್ ಮೂಲಕ ಅಥವಾ ನೇರವಾಗಿ ಭೇಟಿ ಮಾಡಿ ಸಹಾಯ-ಸಾಂತ್ವನ-ಆಸರೆಯ ಮಾತುಗಳನ್ನು ಪಡೆಯುವ ವ್ಯವಸ್ಥೆ ಸಹಾಯವಾಣಿ ಕೇಂದ್ರ (Help Line, Helping Centres) ಗಳಿರಬೇಕು. ವ್ಯಕ್ತಿಯೊಂದಿಗೆ ಸಹಾನುಭೂತಿಯಿಂದ ಕಷ್ಟ-ನಷ್ಟ ಅಭಿಪ್ರಾಯಗಳಿಗೆ ಕಿವಿಗೊಡುವ ಸ್ವಯಂ ಸೇವಕರಿರಬೇಕು. ಆಪ್ತಸಲಹೆ ಮಾರ್ಗದರ್ಶನ ನೀಡಬಲ್ಲ ಸಮಾಲೋಚಕರು ಇರಬೇಕು. ಈ ಕೆಲಸವನ್ನು ತರಪೇತಿ ಪಡೆದು ಯಾರು ಬೇಕಾದರೂ ಮಾಡಬಹುದು. ಮನಃಶಾಸ್ತ್ರ ಓದಿದವರಿದ್ದರೆ ಇನ್ನೂ ಹೆಚ್ಚಿನ ಅನುಕೂಲ.

**ದೀರ್ಘಾವಧಿ ಕ್ರಮಗಳು**

ಜೀವನದ ಯಾವುದೇ ಸಮಸ್ಯೆಗಳನ್ನು ಎದುರಿಸಲು ಶಾಲಾ ಕಾಲೇಜುಗಳಲ್ಲಿ ತರಪೇತಿ ನೀಡಬೇಕು. ತಂದೆ ತಾಯಿಗಳು ತಮ್ಮ ಮಕ್ಕಳಿಗೆ ಕಷ್ಟನಷ್ಟಗಳ ಪರಿಚಯ ಮಾಡಿಸಬೇಕು. ಧೈರ್ಯವಾಗಿ ವಿವೇಚನೆಯಿಂದ ಎದುರಿಸಲು ಕಲಿಸಬೇಕು. ವಸ್ತುನಿಷ್ಠವಾಗಿ, ವಿಶ್ಲೇಷಣಾತ್ಮಕವಾಗಿ ಚಿಂತಿಸುವುದು, ಸಮಸ್ಯಾಪರಿಹಾರ ಮಾರ್ಗಗಳ ಅನ್ವೇಷಣೆ, ಸೂಕ್ತ-ಸರಿ ನಿರ್ಧಾರಗಳನ್ನು ಕೈಗೊಳ್ಳುವುದು, ತಮ್ಮ ಬಲಾಬಲಗಳನ್ನು ಇತಿಮಿತಿಗಳನ್ನು ತಿಳಿದುಕೊಳ್ಳುವುದು, ಕೀಳರಿಮೆ-ದುರಭಿಮಾನ ಬೆಳೆಸಿಕೊಳ್ಳದೇ ಸ್ವಾಭಿಮಾನ ಆತ್ಮವಿಶ್ವಾಸವನ್ನು ಬೆಳೆಸಿಕೊಳ್ಳುವುದು, ಎಲ್ಲ ರೀತಿಯ ಸ್ವಭಾವದ ಜನರೊಂದಿಗೆ ಹೊಂದಿಕೊಳ್ಳುವ ಕೌಶಲ, ನಿರಾಶೆಗಳನ್ನು ನಿಭಾಯಿಸುವಿಕೆ, ಅನಿಸಿಕೆ, ಭಾವನೆಗಳನ್ನು ಇತರರೊಂದಿಗೆ ಹೇಳಿಕೊಳ್ಳುವುದು, ಹಾಸಿಗೆ ಇದ್ದಷ್ಟು ಕಾಲು ಚಾಚುವ ಮನೋಧರ್ಮ, ಸಂಗೀತ-ಸಾಹಿತ್ಯ-ಕ್ರೀಡೆ-ಯೋಗ-ಧ್ಯಾನಗಳಂತಹ ಆರೋಗ್ಯಕರ ಹವ್ಯಾಸಗಳನ್ನು ಬೆಳೆಸಿಕೊಳ್ಳುವುದು, ಮದ್ಯಪಾನ ಮದ್ದು ಸೇವನೆ, ಜೂಜು, ಅಗ್ಗದ-ಅನಾರೋಗ್ಯಕರ ಮನರಂಜನೆಗಳಿಂದ ದೂರವಿರುವುದು, ಬರುವ ಆದಾಯದಲ್ಲಿ, ಲಭ್ಯವಿರುವ ಸಂಪನ್ಮೂಲಗಳಲ್ಲಿ ಸರಳವಾಗಿ ತೃಪ್ತಿಯಾಗಿ ಜೀವನ ಮಾಡುವುದು, ಸಹಾನುಭೂತಿ ಬೆಂಬಲ ಕೊಡುವ ಬಂಧು-ಮಿತ್ರರು ಸಹೋದ್ಯೋಗಿಗಳ ಸಹವಾಸ, ಸ್ವಾರ್ಥಕ್ಕಿಂತ ಪರಹಿತಕ್ಕೆ ಹೆಚ್ಚು ಒತ್ತು, ಸಕಾರಾತ್ಮಕ ಚಿಂತನೆ ಇತ್ಯಾದಿ ಜೀವನ ಕೌಶಲಗಳನ್ನು ಕಲಿಯುವ ಕಲಿಸುವ ಏರ್ಪಾಟು ಮಾಡಬೇಕು. ಹೀಗೆ ಎಲ್ಲರೂ ಸಹಕರಿಸಿದರೆ ಆತ್ಮಹತ್ಯಾ ಪ್ರಕರಣಗಳನ್ನು ಸಾಕಷ್ಟು ಮಟ್ಟಿಗೆ ತಡೆಯಬಹುದು.

**ವ್ಯಕ್ತಿಗೆ ಸೂಚನೆಗಳು :** ಯಾವುದೇ ಕಾರಣದಿಂದ ನೀವು ನಿರಾಶರಾಗಿದ್ದೀರಾ, ನೊಂದಿದ್ದೀರಾ ? ಬದುಕು ಬೇಡ ಎನಿಸುತ್ತಿದೆಯೇ ? ಹಾಗಾದರೆ:

೧. ಒಂಟಿಯಾಗಿರಬೇಡಿ. ಸುಮ್ಮನೆ ಕೂರಬೇಡಿ.

೨. ನಿಮ್ಮ ಮನೆಯವರೊಂದಿಗೋ, ಸ್ನೇಹಿತರೊಂದಿಗೋ, ಸಹೋದ್ಯೋಗಿಯೊಂದಿಗೋ, ನೆರೆಹೊರೆಯವರೊಂದಿಗೋ, ಪರಿಚಯದ ವೈದ್ಯರೊಂದಿಗೋ, ಗುರು-ಪಾದ್ರಿ-ಮೌಲ್ವಿಗಳೊಂದಿಗೋ ಒಟ್ಟನಲ್ಲಿ ಯಾರನ್ನು ನೀವು ಕೂಡಲೇ ಸಂಪರ್ಕಿಸಬಲ್ಲಿರೋ, ಅವರನ್ನು ಕಂಡು ಮಾತನಾಡಿ. ನಿಮ್ಮ ದುಗುಡ, ಭಯ, ಸಮಸ್ಯೆಗಳನ್ನೆಲ್ಲ ಹೇಳಿಕೊಳ್ಳಿ. ಚರ್ಚಿಸಿ.

೩. ನಿಮ್ಮ ಮನೆಯವರೊಂದಿಗೆ, ವಿಶ್ವಾಸಾರ್ಹ ವ್ಯಕ್ತಿಗಳೊಂದಿಗೆ ನಿಮ್ಮ ಸಮಸ್ಯೆಯ ವಿಶ್ಲೇಷಣೆ ಹಾಗೂ ವಿವಿಧ ಪರಿಹಾರ ಮಾರ್ಗಗಳ ಕುರಿತು ಮಾತನಾಡಿ. ಸಾವು ಯಾವುದೇ ಕಷ್ಟ ಸಮಸ್ಯೆಗೆ ಪರಿಹಾರವಲ್ಲ ಎಂಬುದನ್ನು ಮರೆಯಬೇಡಿ.

೪. ಸಮಸ್ಯೆಯ ಸುತ್ತಲೇ ಗಿರಕಿ ಹೊಡೆಯುವ ಮನಸ್ಸನ್ನು ಇತರ ವಿಚಾರಗಳತ್ತ ತಿರುಗಿಸಿ. ದೇವರ ಧ್ಯಾನ, ಪೂಜೆ, ದೇವಸ್ಥಾನ (ಇತರ ಪೂಜಾಸ್ಥಳಗಳು)ಕ್ಕೆ ಹೋಗುವುದು, ಸಂಗೀತ ಕೇಳುವುದು, ಒಳ್ಳೆಯ ಪುಸ್ತಕಗಳನ್ನು ಓದುವುದು, ಮಕ್ಕಳೊಂದಿಗೆ ಬೆರೆತು ಆಟವಾಡುವುದು, ಬಂಧುಮಿತ್ರರನ್ನು ಭೇಟಿ ಮಾಡುವುದು, ಕಷ್ಟದಲ್ಲಿರುವವರಿಗೆ ಸಹಾಯ ಮಾಡುವುದು ಇತ್ಯಾದಿ ಚಟುವಟಿಕೆಗಳನ್ನು ಹಮ್ಮಿಕೊಳ್ಳಿ.

೫. ನಿಮ್ಮ ಆದಾಯದ ಇತಿಮಿತಿಯನ್ನು ಅರ್ಥಮಾಡಿಕೊಂಡು, ಸರಳ ಜೀವನಕ್ಕೆ ಸಿದ್ಧರಾಗಿ. ಅನಗತ್ಯ ಖರ್ಚುಗಳು, ಆಡಂಬರದ ಜೀವನ, ಪ್ರತಿಷ್ಠೆಗಳಿಗೆ ವಿರಾಮ ಕೊಡಿ.

೬. ನಕಾರಾತ್ಮಕ ಆಲೋಚನೆಗಳನ್ನು ಬಿಡಿ. ನಿರಾಶಾವಾದಿಯಾಗಬೇಡಿ. ನಾಳೆ ಒಳ್ಳೆಯದಾಗುವುದು, ಜನ ನನಗೆ ನೆರವಾಗುತ್ತಾರೆ, ಸಮಸ್ಯೆ ನಿವಾರಣೆ ಆಗೇಆಗುವುದು ಎಂದು ಆತ್ಮವಿಶ್ವಾಸ ಬೆಳೆಸಿಕೊಳ್ಳಿ. ಎಲ್ಲರಲ್ಲಿ, ಎಲ್ಲ ಸನ್ನಿವೇಶ ಸಂದರ್ಭಗಳಲ್ಲಿ ಇರುವ ಒಳ್ಳೆಯದನ್ನು ಗುರುತಿಸಿ. ಕೆಟ್ಟದ್ದನ್ನೇ ಕಾಣುವ ಪ್ರವೃತ್ತಿ ಸಲ್ಲ.

೭. ವಾಸ್ತವಿಕತೆಯನ್ನು ಅರ್ಥಮಾಡಿಕೊಂಡು ಅದಕ್ಕೆ ಹೊಂದಿಕೊಳ್ಳಿ.

೮. ಇತರರಿಂದ ನಿರೀಕ್ಷೆ ಮಾಡುವುದನ್ನು ತಗ್ಗಿಸಿ. ಲಭ್ಯವಿದ್ದಷ್ಟರಲ್ಲೇ ತೃಪ್ತಿ ಇರಲಿ.

೯. ಈ ದಿನಕ್ಕೆ ಪ್ರಾಶಸ್ತ್ಯವಿರಲಿ. ನಿನ್ನೆ ಮತ್ತು ನಾಳೆಯ ಬಗ್ಗೆ ಚಿಂತೆ, ಭಯಗಳನ್ನು ದೂರ ಮಾಡಿ. ತಪ್ಪಿತಸ್ಥ ಭಾವನೆಗಳಿಗೆ ಮನಸ್ಸಿನಲ್ಲಿ ಎಡೆ ಕೊಡಬೇಡಿ. ತಪ್ಪು ಮಾಡುವುದು ಸಹಜ. ತಪ್ಪನ್ನು ತಿದ್ದಿಕೊಂಡು, ಅದು ಪುನರಾವರ್ತನೆ ಆಗದಂತೆ ನೋಡಿಕೊಳ್ಳುವುದೇ ಜಾಣತನ.

೧೦. ನಿದ್ರೆ, ಆಹಾರ ಸೇವನೆ ಏರುಪೇರಾಗಿದ್ದರೆ, ಮೈಕೈ ನೋವು ಅನಾರೋಗ್ಯವಿದ್ದರೆ, ನಿಮ್ಮ ಪರಿಚಯದ ವೈದ್ಯರನ್ನು ಕಾಣಿ.


ಡಾ|| ಸಿ. ಆರ್. ಚಂದ್ರಶೇಖರ್

[illegible], ಬೆಂಗಳೂರು - [illegible]


### ಬುದ್ಧಿಮಾಂದ್ಯ ವ್ಯಕ್ತಿ ಆತ್ಮಹತ್ಯೆ

**ಬುದ್ಧಿಮಾಂದ್ಯ ವ್ಯಕ್ತಿಯೊಬ್ಬನು ಕತ್ತು ಕುಯ್ದುಕೊಂಡು ಆತ್ಮಹತ್ಯೆ ಮಾಡಿಕೊಂಡಿರುವ ಘಟನೆ ನಿನ್ನೆ ರಾತ್ರಿ ನಗರದ ಸಿಟಿ ಮಾರ್ಕೆಟ್ ಪ್ರದೇಶದಲ್ಲಿ ನಡೆದಿದೆ.**

ಮೂಲತಃ ಆಂಧ್ರಪ್ರದೇಶದವನಾದ ಈತ, ತನ್ನ ತಾಯಿ ಸಾಹಿನಾ ಬೇಗಂ (65) ಜತೆಗೆ ಕಳೆದ 10 ವರ್ಷಗಳಿಂದ ನಗರದ ಸಿಟಿ ಮಾರ್ಕೆಟ್ ಪ್ರದೇಶದಲ್ಲಿ ಬದುಕುತ್ತಿದ್ದನು. ನಿನ್ನೆ ರಾತ್ರಿ ಈತ ಒಂದು ಬೆಡ್‌ಶೀಟ್ ಹೊದ್ದುಕೊಂಡು ಮಲಗಿದ್ದನು. ಬೆಳಿಗ್ಗೆ ಎದ್ದು ನೋಡುವಾಗ ಆತನು ತನ್ನ ಕತ್ತನ್ನು ತಾನೇ ಕುಯ್ದುಕೊಂಡು ಸತ್ತಿರುವುದು ಪತ್ತೆಯಾಯಿತು ಎಂದು ಪೊಲೀಸರು ತಿಳಿಸಿದ್ದಾರೆ.

ತಾಯಿ ಸಾಹಿನಾ ದಿನವೂ ಭಿಕ್ಷೆ ಬೇಡಿ ತಂದು ಈತನನ್ನು ಸಾಕುತ್ತಿದ್ದರು. ಈ ಮೊದಲು ಈತ ದುಬೈಗೆ ಹೋಗಿ ಕೆಲ ತಿಂಗಳ ಹಿಂದೆ ಹಿಂದಿರುಗಿ ಬಂದಿದ್ದಾನೆ. ಕಳೆದ ಮೂರು ತಿಂಗಳಿಂದ ಆತನಿಗೆ ತೀವ್ರ ಮಾನಸಿಕ ತೊಂದರೆ ಕಾಣಿಸಿಕೊಂಡಿತ್ತು. ಹೀಗಾಗಿ ಆತ ಇಷ್ಟೊಂದು ಭೀಕರವಾಗಿ ಆತ್ಮಹತ್ಯೆ ಮಾಡಿಕೊಂಡಿದ್ದಾನೆ ಎಂದು ಪೊಲೀಸರು ಹೇಳಿದ್ದಾರೆ. ಈ ಸಂಬಂಧ ಸಿಟಿ ಮಾರ್ಕೆಟ್ ಪೊಲೀಸ್ ಠಾಣೆಯಲ್ಲಿ ಪ್ರಕರಣ ದಾಖಲಾಗಿದ್ದು, ಪೊಲೀ ಮುಂದಿನ ಕ್ರಮ ಕೈಗೊಂಡಿದ್ದಾರೆ.

### ನಿರುದ್ಯೋಗ: ಆತ್ಮಹತ್ಯೆ

ನಿರುದ್ಯೋಗದಿಂದ ಬಳಲುತ್ತಿದ್ದ ರಾಬರ್ಟ್ (28) ಎಂಬ ಯುವಕ ನೇಣು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡ ಘಟನೆ ಶುಕ್ರವಾರ ರಾತ್ರಿ ಅಶೋಕನಗರ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ನಡೆದಿದೆ.

ಮುನೇಗೌಡ ಗಾರ್ಡನ್ ವಾಸಿಯಾದ ಆತ ಬಣ್ಣ ಬಳಿಯುವ ಕೆಲಸ ಮಾಡುತ್ತಿದ್ದರು. ಈಚೆಗೆ ಕೆಲಸ ಇಲ್ಲದ ಕಾರಣ ಬೇಸರದಿಂದಿದ್ದರು. ಕಳೆದ ರಾತ್ರಿ ಪತ್ನಿಯ ಜತೆ ಜಗಳ ಕಾದು ಅವರು ಬಳಿಕ ನೇಣು ಹಾಕಿಕೊಂಡಿದ್ದಾರೆ ಎಂದು ಪೊಲೀಸರು ತಿಳಿಸಿದ್ದಾರೆ

# ಇರಾಕ್: ಅಮೆರಿಕಾದ ಮುಗಿಯದ ಯುದ್ಧ




ನಿಗದಿಪಡಿಸಿದ್ದಕ್ಕಿಂತ ಎರಡು ದಿನಗಳ ಮುಂಚೆಯೇ ಜೂನ್ ತಿಂಗಳ ಕೊನೆಯಲ್ಲಿ ತಾನು ಆಯ್ಕೆ ಮಾಡಿದ್ದ ಇರಾಕಿನ ಹಂಗಾಮೀ ಸರಕಾರಕ್ಕೆ ರಹಸ್ಯವಾಗಿ 'ಅಧಿಕಾರ ಹಸ್ತಾಂತರಿಸಿದ' ಅಮೆರಿಕದ ಕೃತ್ಯ ಇರಾಕಿನ ಜನತೆಗೆ ಎಸಗಿರುವ ಎರಡನೇ ಮೋಸ. ಮೊದಲನೆಯದು, ಸಾಮೂಹಿಕ ವಿನಾಶಕಾರಿ ಅಸ್ತ್ರಗಳ ದಾಸ್ತಾನು ಹೊಂದಿದೆ ಎಂದು ಇರಾಕಿನ ಸರಕಾರದ ಮೇಲೆ ಕೃತ್ರಿಮ ಆರೋಪ ಹೊರಿಸಿ ದೇಶವನ್ನು ದುರಾಕ್ರಮಣ ಮಾಡಿಕೊಂಡಿದ್ದು. ಎರಡೂ ಕೃತ್ಯಗಳು ಎಲ್ಲ ರೀತಿಯಲ್ಲಿಯೂ ಅಂತಾರಾಷ್ಟ್ರೀಯ ನಿಯಮಗಳ, ಒಡಂಬಡಿಕೆಗಳ ಉಲ್ಲಂಘನೆ. ಅಮೆರಿಕ ಮತ್ತು ಅದರ ಮಿತ್ರ ರಾಷ್ಟ್ರಗಳು ಏನೇ ಸಮರ್ಥಿಸಿಕೊಂಡರೂ, ವಿಶ್ವಸಂಸ್ಥೆಯ ಭದ್ರತಾ ಮಂಡಲಿಯಲ್ಲಿ ಏನೇ ನಿರ್ಣಯ ಆಗಿದ್ದರೂ ಇರಾಕಿನ ಜನತೆಯ ಮೇಲೆ ಎಸಗಿರುವ ಅಪರಾಧವನ್ನು ತೊಡೆದುಹಾಕುವುದಿಲ್ಲ. ಅಮೆರಿಕದ ಆಡಳಿತೆಯನ್ನು ಅದು ಸದಾ ಕಾಡುತ್ತಿರುತ್ತದೆ.

ಇರಾಕಿನ ಜನತೆ ದುರಾಕ್ರಮಣಕಾರರ ವಿರುದ್ಧ ನಡೆಸುತ್ತಿರುವ ಸಶಸ್ತ್ರ ಹೋರಾಟವನ್ನು ಅಮೆರಿಕದ ಆಡಳಿತಗಾರರು ಭಯೋತ್ಪಾದಕ ಕೃತ್ಯಗಳು ಎಂದು ತಳ್ಳಿಹಾಕುತ್ತಾರೆ. ಭಯೋತ್ಪಾದಕರನ್ನು ಸದೆಬಡಿಯುವ ಹೆಸರಿನಲ್ಲಿ ಅಮೆರಿಕದ ಸೈನಿಕರು ಇರಾಕಿನ ಜನತೆಯ ಮೇಲೆ ಅಮಾನುಷವಾಗಿ ದೌರ್ಜನ್ಯ ನಡೆಸುತ್ತಿದ್ದಾರೆ. ವಿದೇಶೀ ಆಕ್ರಮಣದ ವಿರುದ್ಧ ಸಶಸ್ತ್ರ ಹೋರಾಟ ನಡೆಸುವ ಹಕ್ಕನ್ನು ಅಂತಾರಾಷ್ಟ್ರೀಯ ಕಾನೂನು ಮಾನ್ಯ ಮಾಡಿದೆ. ಅಮೆರಿಕ ಆಡಳಿತಕ್ಕೆ ಇದು ತಿಳಿದಿದೆ. ಎರಡನೇ ಮಹಾ ಯುದ್ಧದ ಕಾಲದ ಹಿಟ್ಲರನ ನಾಜಿ ಪಡೆಗಳ ವಿರುದ್ಧ ಯೂರೋಪಿನ ಆಕ್ರಮಿತ ದೇಶಗಳಲ್ಲಿ ನಡೆದ ಭೂಗತ ಪ್ರತಿಭಟನಾ ಹೋರಾಟವನ್ನು ಅವರ ನೆನಪಿಗೆ ತರಬೇಕಾಗಿದೆ.

ಹೇಗ್ ಮತ್ತು ಜಿನೀವಾ ಒಡಂಬಡಿಕೆಗಳು ಮತ್ತು ಅಂತಾರಾಷ್ಟ್ರೀಯ ಮಾನವ ಹಕ್ಕುಗಳ ನಿಯಮಾವಳಿ ಆಕ್ರಮಣಕಾರರ ಮೇಲೆ ಕೆಲವು ಮುಖ್ಯ ಕರಾರುಗಳನ್ನು ವಿಧಿಸಿದೆ. ಆಕ್ರಮಿಸಿಕೊಂಡಿರುವ ದೇಶದಿಂದ ಆಕ್ರಮಣಕಾರಿ ಸೇನೆಗಳು ಆದಷ್ಟೂ ಶೀಘ್ರವಾಗಿ ವಾಪಸ್ಸಾಗಬೇಕು, ದುರಾಕ್ರಮಣ ಅಂತ್ಯಗೊಳ್ಳಬೇಕು. ಆಕ್ರಮಿತ ಪ್ರದೇಶದ ಜನತೆಯ ಹಕ್ಕುಗಳನ್ನು ಕಾಪಾಡಬೇಕು. ದೇಶದ ಭವಿಷ್ಯದ ಬಗೆಗೆ ಚೆಲ್ಲಾಟ ವಾಡಕೂಡದು, ಅದರ ಸಂಪನ್ಮೂಲಗಳನ್ನು ದೋಚಕೂಡದು ಮತ್ತು ಜನತೆಯ ಮೇಲೆ ದೌರ್ಜನ್ಯ ನಡೆಸಬಾರದು. ಇವುಗಳಲ್ಲಿ ಒಂದೊಂದನ್ನೂ ಅಮೆರಿಕ ಉಲ್ಲಂಘನೆ ಮಾಡಿದೆ. ಮೊದಲನೆಯದಾಗಿ ಅಮೆರಿಕದ ೧,೪೦,೦೦೦ ಸೈನಿಕರು ಅನಿರ್ದಿಷ್ಟ ಕಾಲ ಇರಾಕಿನಲ್ಲೇ ನೆಲೆಸಿರುವರು. ಆಕ್ರಮಣಕಾರಿ ಸೇನೆ ಉಪಸ್ಥಿತವಾಗಿರುವವರೆಗೆ ಇರಾಕ್ ಸ್ವತಂತ್ರ ಸಾರ್ವಭೌಮ ರಾಷ್ಟ್ರವಾಗದು. ಈಗ ಸ್ಥಾಪನೆಗೊಂಡಿರುವ ಸರಕಾರ ಅಮೆರಿಕದ ಆಯ್ಕೆ, ಜನತೆಯ ಆಯ್ಕೆಯಲ್ಲ ಆದ್ದರಿಂದ ಇರಾಕಿ ಸರಕಾರ ಕ್ರಮಬದ್ಧವಾದದ್ದಲ್ಲ. ಈ ಸರಕಾರ ಯಾವುದೇ ತೀರ್ಮಾನವನ್ನೂ ಸ್ವತಂತ್ರವಾಗಿ ಕೈಗೊಳ್ಳುವಂತಿಲ್ಲ.

ಇರಾಕನ್ನು ಆಕ್ರಮಿಸಿಕೊಂಡ ಅಮೆರಿಕ ಇರಾಕಿ ಸೇನೆಯನ್ನು, ಪೊಲೀಸ್ ವ್ಯವಸ್ಥೆಯನ್ನು ವಿಸರ್ಜನೆ ಮಾಡಿ ದೇಶದಲ್ಲಿ ಅಭದ್ರತೆಯನ್ನು ಉಂಟುಮಾಡಿತೇ ಹೊರತು ಸಾರ್ವಜನಿಕರ ಸುರಕ್ಷತೆಗೆ ಆದ್ಯತೆ ನೀಡಲಿಲ್ಲ. ಇದರಿಂದಾಗಿ ಅರಾಜಕತೆ ಉಂಟಾಯಿತು. ಇರಾಕಿನ ಪರಂಪರಾಗತವಾದ ಕಲಾ ಸಂಪತ್ತನ್ನು ಲೂಟಿ ಹೊಡೆಯಲು ಅಮೆರಿಕ ಮುಕ್ತ ಅವಕಾಶ ಕಲ್ಪಿಸಿತು. ಸಾಂಸ್ಕೃತಿಕ ಸಂಸ್ಥೆಗಳು, ಸರಕಾರಿ ಕಛೇರಿಗಳು, ಖಾಸಗೀ ಉದ್ದಿಮೆ ಸಂಸ್ಥೆಗಳು ಮೊದಲಾದವುಗಳನ್ನು ದೋಚಲು ಅಮೆರಿಕದ ಸೈನ್ಯಾ ಕುಮ್ಮಕ್ಕು ನೀಡಿತು. ಸಹಸ್ರಾರು ಮಂದಿ ಅಮಾಯಕ ಜನರನ್ನು ಬಂಧನದಲ್ಲಿರಿಸಲಾಯಿತು. ರೆಡ್‌ಕ್ರಾಸ್ ಸಂಸ್ಥೆಯ ಅಂದಾಜಿನ ಪ್ರಕಾರ ಬಂಧಿತರಲ್ಲಿ ಶೇ. ೯೦ರಷ್ಟು ಮಂದಿ ನಿರಪರಾಧಿಗಳಾದ ಸಾಮಾನ್ಯ ಜನ. ಇವರ ಮೇಲೆ, ಖೈದಿಗಳ ಮೇಲೆ, ನಡೆಸಿರುವ ಅಮಾನುಷ ದೌರ್ಜನ್ಯ, ಇವೆಲ್ಲ ಮಾನವ ಹಕ್ಕುಗಳ ಉಲ್ಲಂಘನೆಗಳೇ.

ಅಮೆರಿಕದ ಆಕ್ರಮಣದ ನಂತರ ಇರಾಕಿನಲ್ಲಿ ಜನರಿಗೆ ಮೂಲ ಸೌಕರ್ಯಗಳು ಅಲಭ್ಯವಾಗಿವೆ. ಯುದ್ಧ ಮತ್ತು ಹನ್ನೆರಡು ವರ್ಷಗಳ ಆರ್ಥಿಕ ದಿಗ್ಬಂಧನದಿಂದ ಅಸ್ತವ್ಯಸ್ತಗೊಂಡ ಆರ್ಥಿಕ ಪರಿಸ್ಥಿತಿ ಈ ಒಂದೂವರೆ ವರ್ಷದಲ್ಲಿ ಇನ್ನಷ್ಟು ಹದಗೆಟ್ಟಿದೆ. ನೀರು, ವಿದ್ಯುಚ್ಛಕ್ತಿ, ನೈರ್ಮಲ್ಯ, ಈ ಮೂರೂ ವ್ಯವಸ್ಥೆಗಳು ಕುಸಿದುಬಿದ್ದಿವೆ. ಬಡತನ ವ್ಯಾಪಕವಾಗಿದ್ದು ಜನ ಹಸಿವು, ಅನಾರೋಗ್ಯದಿಂದ ಕಂಗಾಲಾಗಿದ್ದಾರೆ. ಸದ್ದಾಮ್ ಹುಸೇನನ ಬಾತ್‌ಪಾರ್ಟಿಯೊಂದಿಗೆ ಸಂಪರ್ಕ ಹೊಂದಿದ್ದಾರೆಂಬ ಸಂಶಯದ ಮೇಲೆ ಸಹಸ್ರಾರು ಮಂದಿ ಸರಕಾರಿ ನೌಕರರನ್ನು ಅಧ್ಯಾಪಕರು, ಇಂಜಿನಿಯರ್‌ಗಳು, ವೈದ್ಯರು ಮೊದಲಾದವರನ್ನು ಅಮೆರಿಕ ಬೀದಿಪಾಲು ಮಾಡಿದೆ. ಒಂದು ಅಂದಾಜಿನ ಪ್ರಕಾರ ಶೇ. ೬೦ರಷ್ಟು ಇರಾಕಿಗಳು ಈಗ ನಿರುದ್ಯೋಗಿಗಳಾಗಿದ್ದಾರೆ. ಆರೋಗ್ಯ ಸೇವಾ ವ್ಯವಸ್ಥೆ ಅಸ್ತವ್ಯಸ್ತಗೊಂಡಿದೆಯಲ್ಲದೆ, ಔಷಧ ಸಾಮಗ್ರಿಗಳು ಅಲಭ್ಯವಾಗಿವೆ. ಶೇ. ೭೦ರಷ್ಟು ಜನ ಆಹಾರಕ್ಕೆ ರೇಷನ್ ಮೇಲೆ ಅವಲಂಬಿತರಾಗಿದ್ದಾರೆ. ೧೧ ಮಿಲಿಯ ಇರಾಕಿಗಳು ಕಡು ಬಡತನದಿಂದಾಗಿ ಆಹಾರ ಪದಾರ್ಥ ಕೊಳ್ಳಲಾಗದೆ ಅತಂತ್ರ ಸ್ಥಿತಿಯಲ್ಲಿದ್ದಾರೆ ಎಂದು ಅಂದಾಜು ಮಾಡಲಾಗಿದೆ. ವಿದ್ಯಾಭ್ಯಾಸ ವ್ಯವಸ್ಥೆ ಸಂಪೂರ್ಣವಾಗಿ ಕುಸಿದುಬಿದ್ದಿದೆ. ಬಾಗ್ದಾದ್ ನಗರವೊಂದರಲ್ಲೇ ಮೂರನೇ ಎರಡರಷ್ಟು ಶಾಲಾ ಮಕ್ಕಳು ಮನೆಗಳಲ್ಲೇ ಕೊಳೆಯುತ್ತಿದ್ದಾರೆ. ಇದು ಸರ್ವಾಧಿಕಾರಿ ಆಡಳಿತೆಯಿಂದ ಅಮೆರಿಕ 'ವಿಮೋಚನೆಗೊಳಿಸಿರುವ' ಇರಾಕಿನ ಇಂದಿನ ಪರಿಸ್ಥಿತಿ.

ಇನ್ನು ಅಮೆರಿಕ ಇರಾಕಿನ ಮೇಲೆ ತನ್ನ ಮುಕ್ತ ಮಾರುಕಟ್ಟೆ ಅರ್ಥವ್ಯವಸ್ಥೆ ಹೊರಿಸಲು ಹೊರಟಿದೆ. ಇರಾಕಿ ಉದ್ಯಮಗಳಲ್ಲಿ ಶೇ. ೧೦೦ರಷ್ಟು ವಿದೇಶೀ ಬಂಡವಾಳಕ್ಕೆ ಅವಕಾಶ ಕಲ್ಪಿಸಿದೆಯಲ್ಲದೆ, ತೆರಿಗೆಯಿಂದ ಮುಕ್ತಗೊಳಿಸಿದೆ. ವಿದೇಶೀ ಕಂಪೆನಿಗಳು ಗಳಿಸುವ ಎಲ್ಲ ಲಾಭಗಳನ್ನೂ ಸ್ವದೇಶಕ್ಕೆ ರವಾನಿಸಲು ಅವಕಾಶ ನೀಡಿದೆ. ಇರಾಕಿನ ಪುನರ್ನಿರ್ಮಾಣಕ್ಕೆ ಎಲ್ಲ ಕಂಟ್ರಾಕ್ಟ್‌ಗಳನ್ನು ಅಮೆರಿಕದ ಕಂಪನಿಗಳಿಗೆ ಕೆಲವು ಬ್ರಿಟಿಷ್ ಕಂಪನಿಗಳಿಗೆ ನೀಡಲಾಗಿದೆ. ಇರಾಕಿನ ಆರ್ಥಿಕದ ಮೇಲೆ ಪೂರ್ಣ ಹಿಡಿತ ಸಾಧಿಸಿಕೊಂಡು ಬಹುರಾಷ್ಟ್ರೀಯ ಕಂಪೆನಿಗಳ ಮೂಲಕ ಜನತೆಯನ್ನು ಶೋಷಣೆ ಮಾಡಲು, ಸಂಪತ್ತನ್ನು ಸೂರೆಮಾಡಲು ಅಮೆರಿಕ ಎಲ್ಲ ಭೂಮಿಕೆಯನ್ನೂ ಸಿದ್ಧಗೊಳಿಸಿದೆ. ಇವೆಲ್ಲದರ ಮೇಲೆ ಅಮೆರಿಕ ಇರಾಕಿನಲ್ಲಿ ಅಮೆರಿಕನ್ ಸೈನಿಕರು ನಡೆಸಿರುವ ಎಲ್ಲ ದೌರ್ಜನ್ಯಗಳಿಗೂ ವಿನಾಯಿತಿ ಕೊಡುವ, ಯಾವುದೇ ಕಾನೂನಿನ ಕ್ರಮಗಳಿಗೂ ಒಳಪಡದಂತೆ ರಕ್ಷಣೆ ನೀಡುವ, ಕಾನೂನನ್ನು ಅಂಗೀಕರಿಸಿದೆ. ಹೀಗೆ ಅಮೆರಿಕ ಇರಾಕಿನ ಮೇಲೆ ಪರೋಕ್ಷವಾಗಿ ವಸಾಹತುಶಾಹಿ ಆಳ್ವಿಕೆಯನ್ನು ನಡೆಸಲು ಸನ್ನಾಹ ನಡೆಸಿದೆ. ಅಮೆರಿಕಾಗೆ ಇಷ್ಟೆಲ್ಲವನ್ನೂ ಜೀರ್ಣಿಸಿಕೊಳ್ಳುವುದು ಸುಲಭವಲ್ಲ. ಅದುವರೆಗೆ ಇದು ಮುಗಿಯದ ಯುದ್ಧ.

ಎರಡನೇ ಮಹಾಯುದ್ಧದ ನಂತರ ಅತ್ಯಂತ ಪ್ರಬಲ ರಾಷ್ಟ್ರವಾಗಿ ಬೆಳೆದಿರುವ ಅಮೆರಿಕ ಜಗತ್ತಿನಲ್ಲಿ ಪ್ರಥಮ ಸ್ಥಾನದಲ್ಲಿರಲು ಎಲ್ಲ ಪ್ರಯತ್ನಗಳನ್ನೂ ನಡೆಸುತ್ತ ಬಂದಿದೆ. ತನ್ನ ಹಿತಾಸಕ್ತಿಗೆ ಅಡ್ಡಬರುವ ದೇಶಗಳನ್ನು ಬಗ್ಗುಬಡಿದು ಕೈಗೊಂಬೆ ಸರಕಾರಗಳನ್ನು ಸ್ಥಾಪಿಸುವ ತಂತ್ರವನ್ನು ಧಾರಾಳವಾಗಿ ಬಳಸುತ್ತ ಬಂದಿದೆ. ಇರಾಕ್ ಅದರಲ್ಲಿ ಈಚಿನದು. ಜಗತ್ತಿನಲ್ಲೇ ಅತ್ಯಂತ ಪ್ರಬಲವಾದ ಮಿಲಿಟರಿ ಬಲವನ್ನು ಹೊಂದಿರುವ ಅಮೆರಿಕ ಕಳೆದ ಐದು ದಶಕಗಳಲ್ಲಿ ನಾಲ್ಕು ಯುದ್ಧಗಳನ್ನು ವಿಯೆಟ್ನಾಮ್, ಕೊರಿಯಾ, ಅಫ್ಘಾನಿಸ್ತಾನ, ಇರಾಕ್‌ಗಳಲ್ಲಿ ನಡೆಸಿದೆ. ಇವಲ್ಲದೆ ನಾಲ್ಕಾರು ಪರೋಕ್ಷ ಯುದ್ಧಗಳನ್ನು – ಗ್ರೀಸ್ (೧೯೪೮), ಇರಾನ್ (೧೯೫೩), ಗ್ವಾಟೆಮಾಲ (೧೯೫೪), ಇಂಡೋನೇಶಿಯಾ (೧೯೬೮), ಲೆಬನಾನ್ (೧೯೮೮), ಲಾವೋಸ್ (೧೯೬೦), ಕ್ಯೂಬ (೧೯೬೧), ಚಿಲಿ (೧೯೭೪), ಅಫ್ಘಾನಿಸ್ತಾನ (೧೯೮೧-೮೯) – ನಡೆಸಿದೆ. ಈ ಬಗೆಯ ಮಿಲಿಟರಿ ಕಾರ್ಯಾಚರಣೆಗಳಲ್ಲಿ ಅಮೆರಿಕದ ರಿಪಬ್ಲಿಕನ್ ಮತ್ತು ಡೆಮಾಕ್ರಟ್ ಆಡಳಿತಗಳು ಸಹಭಾಗಿಯಾಗಿವೆ. ಈ ದುರಾಕ್ರಮಣಕಾರಿ ಧೋರಣೆ ಮುಂದುವರಿಯುವ ಎಲ್ಲ ಸೂಚನೆಗಳೂ ಇವೆ.

ಪೀಯಾರ್ಕೆ
೮೪೯, ಬನಶಂಕರಿ ೩ನೇ ಹಂತ, ಕತ್ತರಗುಪ್ಪೆ, ಬೆಂಗಳೂರು - ೫೬೦ ೦೮೫

# ಚಿತ್ರದುರ್ಗ ಕುರಿತ 'ತ್ರಿವೇಣಿ'

**ಪ್ರೊ||** ಬಿ. ರಾಜಶೇಖರಪ್ಪ ಚಿತ್ರದುರ್ಗದ ಸುತ್ತಣ ಪರಿಸರದಲ್ಲಿ ಕನ್ನಡ ಅಧ್ಯಾಪಕರಾಗಿ, ಇತಿಹಾಸ ಸಂಶೋಧಕರಾಗಿ, ಸಾಹಿತ್ಯಿಕ ಚಟುವಟಿಕೆಗಳ ಸದಸ್ಯರಾಗಿ ತಮ್ಮ ಸಕ್ರಿಯ ಪಾಲ್ಗೊಳ್ಳುವಿಕೆ, ವಿದ್ವತ್ತು, ಸಜ್ಜನಿಕೆಗಳಿಗೆ ಹೆಸರಾದವರು. ಕವಿಯಾಗಿ ('ತರಂಗ' ಕವನ ಸಂಕಲನ – ಬಿ. ರಾಜಶೇಖರಪ್ಪ) ತಮ್ಮ ಸಾಹಿತ್ಯ ಕೃಷಿ ಆರಂಭಿಸಿದ ಅವರು ಇದೀಗ ಕರ್ನಾಟಕದ ಖ್ಯಾತ ಇತಿಹಾಸ ಸಂಶೋಧಕರಾಗಿಯೇ ಗುರುತಿಸಲ್ಪಡುತ್ತಾರೆ. ಆಗಾಗ 'ರಮ್ಯ' (ದೇವರು ರುಜು ಮಾಡಿದನು ಹಾಗೂ ರಾಮಾಯಣ ದರ್ಶನಂನಲ್ಲಿ ರಾಕ್ಷಸ ಶ್ರೀಸಾಮಾನ್ಯ ಲೇಖನಗಳನ್ನು ಗಮನಿಸಿ) ಮಾದರಿ ವಿಮರ್ಶಾ ಲೇಖನಗಳನ್ನು ರಚಿಸಿರುವ ಇವರು ಸಾಹಿತ್ಯಕ್ಷೇತ್ರದಿಂದ ತಮ್ಮನ್ನು ಬಿಡಿಸಿಕೊಂಡದ್ದು ಸಾಹಿತ್ಯಕ್ಷೇತ್ರಕ್ಕಾದ ದೊಡ್ಡ ನಷ್ಟವಾದರೂ 'ಇತಿಹಾಸ' ಕ್ಷೇತ್ರಕ್ಕಂತೂ ಲಾಭವೇ ಆಗಿದೆ ಎಂದರೆ ಅದು ಅತಿಶಯೋಕ್ತಿ ಏನಲ್ಲ.

ಶ್ರೀಯುತರು ಕಳೆದ ಎರಡು-ಮೂರು ದಶಕಗಳಲ್ಲಿ ಚಿತ್ರದುರ್ಗ ಕುರಿತಂತೆ ನಡೆಸಿದ ಸಂಶೋಧನೆಯನ್ನಾಧರಿಸಿದ ಕೆಲವು ಲೇಖನಗಳನ್ನು ಸಂಚಯಿಸಿ ಇತ್ತೀಚೆಗೆ ಮೂರು ಕೃತಿಗಳನ್ನು ಹೊರತಂದಿದ್ದಾರೆ. ಅವೇ, ''ನಿರಂತರ, ದುರ್ಗಶೋಧನೆ, ಮತ್ತು ಇತಿಹಾಸ ಕಥನ.'' (*ನಿರಂತರ – ಶ್ರೀಲೋಕಪಾವನಿ ಪ್ರಕಾಶನ, ಪಾಂಡವಪುರ – ೨೦೦೧. ದುರ್ಗಶೋಧನ – ಕಸಾಪ, ಬೆಂ – ೨೦೦೧, ಇತಿಹಾಸ ಕಥನ – ಸಿ.ವಿ.ಜಿ. ಪ್ರಕಾಶನ, ಬೆಂ – ೨೦೦೧.*) ಈ ಕೃತಿಗಳ ಕುರಿತ ಕೆಲವು ಮಾತು ಮುಂದಿವೆ.

ಸಾವಿರಾರು ವರ್ಷಗಳ ಪ್ರಾಚೀನತೆ ಇರುವ ಈ ದೇಶದ 'ಇತಿಹಾಸ' ಈವರೆಗೆ ರೂಪಿತವಾಗಿರುವ 'ಕ್ರಮ' ಗಮನಿಸಬೇಕಾದ ಅಂಶವಾಗಿದೆ. ಆಯಾ ಕಾಲಘಟ್ಟಗಳಲ್ಲಿ 'ರಾಷ್ಟ್ರೀಯವಾದಿ', 'ರಾಜವಾದಿ', 'ಸ್ಥಳೀಯವಾದಿ', 'ವಂಶವಾದಿ', 'ಬಲಿಷ್ಠವಾದಿ' ಮನೋಧರ್ಮಗಳು ಈ ದೇಶ ಒಂದು ಭೌಗೋಳಿಕ ಒಕ್ಕೂಟವಾಗಲು, 'ಒಂದು' ಭಿತ್ತಿಯಾಗಲು 'ಸಂಘಟಿತ' ಪ್ರಯತ್ನ ನಡೆಸಿರುವುದನ್ನು ಗುರುತಿಸಬಹುದು. ಆದರೆ ಇಂತಹ ಪ್ರಯತ್ನಗಳ ಆಶಯಗಳು ಅಧಿಕಾರ-ಧರ್ಮ-ಶೋಷಣೆ ಇವುಗಳನ್ನು ಕೇಂದ್ರವಾಗಿರಿಸಿಕೊಂಡು ಮಾಡಿದಂಥವು ಎಂಬುದು ಸತ್ಯವೇ ಆಗಿದೆ. ಈ ಬಗೆಯ ಸಂಗತಿಗಳನ್ನು ದಾಖಲಿಸುವಾಗ ಸಹಜವಾಗಿಯೇ ಅವು 'ರಮ್ಯ', 'ಆವೇಶ', 'ಪಕ್ಷಪಾತ', 'ಮೂಲ', 'ಶ್ರೇಷ್ಠತೆ', 'ಸಾಂಸ್ಕೃತಿಕ' ಮೊದಲಾದ ಅಂಶಗಳನ್ನು ತಮ್ಮ ನಿರೂಪಣೆಯ ಮಾನದಂಡಗಳನ್ನಾಗಿಸಿಕೊಂಡಿರುವುದೂ ಸತ್ಯ. ಇಂತಲ್ಲೆಲ್ಲಾ ನಾಡು-ನುಡಿ ಕಟ್ಟಿದ ದೊಡ್ಡ ಸಮುದಾಯವೊಂದರ ದಾಖಲೆ ಮಾತ್ರ ಕಾಣದು. ಅದೇ ಲಿಖಿತ ಇತಿಹಾಸದ 'ದೊಡ್ಡ ಮೋಸ'.

ಎರಡನೆಯದಾಗಿ ಗಮನಿಸಬೇಕಾದ ಮತ್ತೊಂದು ಮುಖ್ಯ ಸಂಗತಿ ಎಂದರೆ, ಸ್ಥಳೀಯ ಅಥವಾ ಪ್ರಾದೇಶಿಕ ಇತಿಹಾಸ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ 'ನಗಣ್ಯ' ಎನಿಸಿಬಿಡುವುದು ! ಮತ್ತು 'ದೇಶೀಯತೆ'ಗಾಗಿ ಹೋರಾಡಿದ, ಇಲ್ಲವೇ 'ರಾಷ್ಟ್ರಕ್ಕಾಗಿ ತ್ಯಾಗ' ಮಾಡಿದ ಅನೇಕ ವೀರರು, ನಾಯಕರು 'ಸ್ಥಳೀಯತೆ'ಯ ಕಾರಣಕ್ಕಾಗಿ ಲಿಖಿತ ಇತಿಹಾಸದಲ್ಲಿ ರಾಷ್ಟ್ರವಿರೋಧಿ, ಪ್ರಭುತ್ವವಿರೋಧಿ, ದಂಗೆಕೋರರು, ಆಕ್ರಮಣಕಾರರು ಎಂದು ಚಿತ್ರಿತವಾಗಿರುವುದು ! 'ರಾಷ್ಟ್ರೀಯತೆ' ಎನ್ನುವ ಕಲ್ಪನೆಯೇ ಆಧುನಿಕವಾದುದು. ಮಾರ್ಕ್ಸ್‌ವಾದಿಗಳು 'ರಾಷ್ಟ್ರೀಯತೆ' ಎನ್ನುವುದು ''ಬಂಡವಾಳಶಾಹಿ ಮಾರುಕಟ್ಟೆಯ ಇನ್ನೊಂದು ಮುಖ'' ಎನ್ನುತ್ತಾರೆ. ಹಾಗಾಗಿ ರಾಷ್ಟ್ರೀಯವಾದಿ ಇತಿಹಾಸ ಎನ್ನುವ ಹೇಳಿಕೆ ಮತ್ತು ಅದನ್ನು ನಿರೂಪಿಸುವ ಕ್ರಮದ ನೆಲೆಗಳನ್ನು ಅತ್ಯಂತ ಎಚ್ಚರದಿಂದ ಪರಿಭಾವಿಸುವ ಅಗತ್ಯವಿದೆ.

ರಾಷ್ಟ್ರೀಯವಾದಿ ಇತಿಹಾಸಕ್ಕೆ ಬುನಾದಿಯಾಗಿ ಸಂವೇದಿಸುವಂಥದ್ದು ಸ್ಥಳೀಯ ಇತಿಹಾಸ. ಇದು 'ಆಕರನಿಷ್ಠ' ಸಂಶೋಧನೆಗಳಿಂದ ರೂಪುಗೊಂಡಿರುತ್ತದೆ ಮತ್ತು ನಿರೂಪಿತವಾಗಿರುತ್ತದೆ. ಆದರೆ ಇವೆರಡಕ್ಕೂ ಇರುವ 'ಮನೋಭಾವ' ಮತ್ತು 'ಅರ್ಥ ಪರಂಪರೆಗಳು' ತುಂಬಾ ಭಿನ್ನವೂ, ವಿರೋಧ ಆಶಯಗಳಿಂದ ಕೂಡಿದವೂ ಆಗಿರುತ್ತವೆ. ಅನ್ಯರಾಷ್ಟ್ರಗಳಿಗೆ ತನ್ನ ರೋಮಾಂಚಕ, ಪ್ರಾಚೀನ ಇತಿಹಾಸ ಒಪ್ಪಿಸುವ ರಾಷ್ಟ್ರದ 'ಪ್ರಭುತ್ವ'ವೊಂದು, ತನ್ನೊಳಗೇ 'ತನ್ನನ್ನು' ವಿರೋಧಿಸುತ್ತಿರುವ ಸ್ಥಳೀಯತೆಯನ್ನು ಮೆಟ್ಟಿ ಹಾಕಲು ಪ್ರಯತ್ನಿಸುತ್ತಿರುತ್ತದೆ. ಆದ್ದರಿಂದ ಸ್ಥಳೀಯ ಇತಿಹಾಸ, ಸ್ಥಳೀಯ ಆಕರ, ಸ್ಥಳೀಯ ನಾಯಕರನ್ನು ಹುಡುಕುವ, ಅನ್ವೇಷಿಸುವ, ಸಂಶೋಧಿಸುವ 'ಆಕರನಿಷ್ಠ' ಸಂಶೋಧನೆ ಈವರೆಗೆ ದಾಖಲಾಗದ ದೊಡ್ಡ ಸಮುದಾಯವಾದ 'ಶೂದ್ರವರ್ಗ' ತನ್ನ ಚರಿತ್ರೆಯನ್ನು ಪುನರ್‌ರೂಪಿಸಿಕೊಳ್ಳುವ ಪ್ರಯತ್ನವೂ ಆಗಿದೆ ಎನ್ನಬಹುದು. ರಾಷ್ಟ್ರಮಟ್ಟದ ಹೋರಾಟಗಳಿಗೆ ನೈತಿಕ ಬೆಂಬಲ, ದೈಹಿಕ ಬೆಂಬಲ, ಸಂಪನ್ಮೂಲ ಬೆಂಬಲ ನೀಡುವ ಇಂಥ ಇತಿಹಾಸ 'ವಿಸ್ಮೃತಿ'ಗೆ ಒಳಗಾಗಿದೆಯೆ ? ಅಥವಾ ಉದ್ದೇಶಪೂರ್ವಕವಾಗಿ 'ವಿಸ್ಮೃತಿ'ಗೆ ಒಳಗು ಮಾಡಲಾಗಿದೆಯೆ ? ಹಾಗಾಗಿಯೇ ಆಕರನಿಷ್ಠ ಸಂಶೋಧನೆ ಮತ್ತು ಸ್ಥಳೀಯ ಇತಿಹಾಸಗಳು 'ಪವಿತ್ರ', 'ಪಾವಿತ್ರ್ಯತೆ', 'ಶ್ರೇಷ್ಠತೆ', 'ಬಲಿಷ್ಠತೆ' ಎಂಬ ಶಬ್ದಗಳ ಹಿನ್ನೆಲೆಯಲ್ಲಿ ದಾಖಲಾಗುವ ಬದಲು ಮೂಲ ನೆಲೆ-ಸೆಲೆಗಳ ಅರಿವು, ಕುತೂಹಲ, ಅಗತ್ಯ, ಅನನ್ಯತೆಗಳ ಹುಡುಕಾಟ, ಬೇರಿಗಾಗಿ ಬಗೆದಾಟಗಳ ನೆಲೆಗಳಲ್ಲಿ ದಾಖಲಾಗುತ್ತದೆ. ಆದ್ದರಿಂದ ಸಂಶೋಧನೆಗಳನ್ನು ವರ್ಗೀಕರಿಸುವಾಗ ಕೇವಲ 'ತಾಂತ್ರಿಕ' ನೆಪವಾಗಿರಬೇಕಾದ ವಿಷಯನಿಷ್ಠ, ಆಕರನಿಷ್ಠ, ವಸ್ತುನಿಷ್ಠ ಎಂಬ ವರ್ಗೀಕರಣಗಳಿಗಿಂತಲೂ, ಸಂಶೋಧನೆ ಮತ್ತು ಅದನ್ನು ನಿರೂಪಿಸುವಾಗ ಬಳಸಿರುವ ಮನೋಧರ್ಮ ಮತ್ತು ಆಯ್ದುಕೊಂಡ ಮಾನದಂಡಗಳ ಪರಿಕಲ್ಪನೆಗಳನ್ನು ಒರೆಗೆ ಹಚ್ಚಿ, ಗುರುತಿಸಿ, ಒಪ್ಪಬೇಕಾದ ಕಾಲ ಸಂದರ್ಭ ಇದು ಎನ್ನಬಹುದು. ಈ ಮಾತುಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ಕುರಿತ ಮೂರು ಸಂಶೋಧನಾ ಕೃತಿಗಳನ್ನು ಮುಂದೆ ವಿಶ್ಲೇಷಿಸಲಾಗಿದೆ.

**ಕೃತಿ ವಿವರ**

**1. ನಿರಂತರ :** ೧೦ ಲೇಖನಗಳಿರುವ ಈ ಕೃತಿ ಲೇಖಕರ ಐತಿಹಾಸಿಕ ಹಾಗೂ ಸಾಹಿತ್ಯಿಕ ಆಸಕ್ತಿಯ ದಿಕ್ಸೂಚಿ ಎನ್ನಬಹುದು. ಬೇಂದ್ರೆಯವರ ಸಂಶೋಧನೆಯ ನೆಲೆ-ಸೆಲೆಗಳನ್ನು ಗುರುತಿಸುವಲ್ಲಿ ಲೇಖಕರು ತೋರಿರುವ ಆಸಕ್ತಿ ಕುತೂಹಲಕರವಾದಂತೆ – ಕಟ್ಟೆಚ್ಚರದಿಂದ ಕೂಡಿದ್ದೂ ಆಗಿದೆ. 'ಕವಿ'ಯಾಗಿ ಚಿರಪರಿಚಿತರಾದ ಬೇಂದ್ರೆಯವರ ಇನ್ನೊಂದು ವಿದ್ವತ್ ಮುಖವನ್ನು ತೆರೆದಿಡುವಲ್ಲಿ ಈ ಲೇಖನ ಸಫಲವಾಗಿದೆ. 'ರಾಮಾಯಣ ದರ್ಶನಂ' ಕೃತಿಯಲ್ಲಿನ, ರಾಕ್ಷಸ ಶ್ರೀಸಾಮಾನ್ಯರನ್ನು ಕುರಿತ ಲೇಖನ ಸಂಶೋಧಕರ ಬಿಡುಗಣ್ಣಿನ ಗ್ರಹಿಕೆಯ ದ್ಯೋತಕವಾಗಿದೆ. ಮಾನವೀಯತೆಯ ಮತ್ತು ಉದಾರ ನೆಲೆಯ ಈ ಬಗೆಗಣ್ಣು ರಾಜಶೇಖರಪ್ಪನವರ ಒಟ್ಟು ಗ್ರಹಿಕೆಯ ನೆಲೆಗಟ್ಟು ಕೂಡ ಆಗಿರುವುದು ವಿಶೇಷವೇ ಸರಿ ! ಕಾದಂಬರಿಕಾರ ತ.ರಾ.ಸು. ಸಾಮೀಪ್ಯದ ವಿವರಗಳನ್ನು ಅತ್ಯಂತ ಆಪ್ತ,

ಡಾ|| ಎಸ್. ಪ್ರಸಾದಸ್ವಾಮಿ

ಸಾವಿರಾರು ವರ್ಷಗಳ ಪ್ರಾಚೀನತೆ ಇರುವ ಈ ದೇಶದ 'ಇತಿಹಾಸ' ಈವರೆಗೆ ರೂಪಿತವಾಗಿರುವ 'ಕ್ರಮ' ಗಮನಿಸಬೇಕಾದ ಅಂಶವಾಗಿದೆ. ಆಯಾ ಕಾಲಘಟ್ಟಗಳಲ್ಲಿ 'ರಾಷ್ಟ್ರೀಯವಾದಿ', 'ರಾಜವಾದಿ', 'ಸ್ಥಳೀಯವಾದಿ', 'ವಂಶವಾದಿ', 'ಬಲಿಷ್ಠವಾದಿ' ಮನೋಧರ್ಮಗಳು ಈ ದೇಶ ಒಂದು ಭೌಗೋಳಿಕ ಒಕ್ಕೂಟವಾಗಲು, 'ಒಂದು' ಭಿತ್ತಿಯಾಗಲು 'ಸಂಘಟಿತ' ಪ್ರಯತ್ನ ನಡೆಸಿರುವುದನ್ನು ಗುರುತಿಸಬಹುದು. ಆದರೆ ಇಂತಹ ಪ್ರಯತ್ನಗಳ ಆಶಯಗಳು ಅಧಿಕಾರ-ಧರ್ಮ-ಶೋಷಣೆ ಇವುಗಳನ್ನು ಕೇಂದ್ರವಾಗಿರಿಸಿಕೊಂಡು ಮಾಡಿದಂಥವು ಎಂಬುದು ಸತ್ಯವೇ ಆಗಿದೆ.



## ಗೊಲ್ಗೊಥಾದ ಮೇಲಿನ ಕೊನೆಯವನು

ನೀನು ಶಿಲುಬೆಯನು ಬೆಟ್ಟಕ್ಕೆ ಹೊತ್ತು ನಡೆವಾಗ
ಯಾತನೆಯ ಮಾರ್ಗದಲ್ಲಿ
ನಿನ್ನ ಹುಬ್ಬಿನ ಮೇಲಿನ ಬೆವರು
ಜಿನುಗುವ ರಕ್ತದ ಜೊತೆ ಬೆರೆತು
ಕೆಂಪನೆಯ ಒದ್ದೆ ರಿಬ್ಬನ್ನು ಧರಿಸಿದಂತೆ.
ಕತ್ತಲೆಯ ಭೂತಗಳು
ಗೊಲ್ಗೊಥಾದ ಮೇಲೆ ಇಳಿದು ಬಂದಿವೆ.
ನಿನ್ನ ಬಂಧುಗಳು ಮುಳುಗಿದ್ದಾರೆ ಶೋಕದಲ್ಲಿ,
ನಂಬುಗೆಯವರೆಲ್ಲಾ ಕೊನೆಯ ಯಾಚನೆಯ ನೋಟಗಳೊಂದಿಗೆ
ಹೊರಟುಹೋಗಿದ್ದಾರೆ ಭಾರವಾದ ಹೆಜ್ಜೆಗಳನ್ನಿಟ್ಟು.
ಕಳ್ಳರು ಸದ್ದು ಮಾಡುವುದಿಲ್ಲ;
ಬಹುಶಃ ಅವರು ತಮ್ಮ ಕೊನೆಯ ಪ್ರಯಾಣವನ್ನು ಕೈಗೊಂಡಿದ್ದಾರೆ.
ಒಡೆಯಾ, ನಿನ್ನ ದೀಪ್ತ ನೇತ್ರಗಳಲ್ಲಿ ಉಕ್ಕುವುದು ಅನುಕಂಪ
ನೀನು ನಿಶ್ಚಲ ಈಗ ಈ ಶಿಲುಬೆಯ ಮೇಲೆ.
ನೀನು ನಿಜವಾಗಿಯೂ ನಂಬುವೆಯಾ ?
ಅವರಿಗೆ ತಾವು ಮಾಡುತ್ತಿದ್ದುದು ತಿಳಿದಿರಲಿಲ್ಲವೆಂದು.
ಜೆರುಸಲೆಮ್ಮಿನಲ್ಲಿ ಕೆಲವು ದೀಪಗಳು ಇನ್ನೂ ಮಿಣುಕುತ್ತಿವೆ.
ಪ್ರಭೂ, ಭಯ ನನ್ನನ್ನೂ ಆವರಿಸುತ್ತಿದೆ...
ಸರಿ, ನಾನಿನ್ನು ಬರಲೇ ?
ಹೀಗೆ ಹೇಳಿ ಗೊಲ್ಗೊಥಾದ ಮೇಲಿನ ಕೊನೆಯವನು
ದೇವರ ಮಗನನ್ನು ಅಸಹಾಯಕ ಸಂಕಟದಲ್ಲಿ ಬಿಟ್ಟು
ಕತ್ತಲೆಯೊಳಗೆ ಹೊರಟುಹೋದನು.

ಮೂಲ : ಕಿಸನ್ ಸೋಸಾ, ಕನ್ನಡಕ್ಕೆ : ಎಂ. ಎಸ್. ಶಿವಮೂರ್ತಿ
ಇ.ಡಬ್ಲ್ಯು.ಎಸ್. ೧೦೮, ೨ನೇ ಹಂತ
ಕೆ.ಎಚ್.ಬಿ., ಕುವೆಂಪುನಗರ, ಮೈಸೂರು - ೫೭೦ ೦೨೩

ತಲ್ಲೀನ, ಮಾನವಿಕ ಸಂದರ್ಭಗಳಲ್ಲಿ ವಿವರಿಸಿ ಆ ಮೂಲಕ ಸಾಹಿತ್ಯಿಕ- ಸಾಮುದಾಯಿಕ ಸಂಬಂಧಗಳನ್ನು ಗಾಢವಾಗಿ ತೆರೆದಿಟ್ಟಿರುವುದನ್ನು ಗಮನಿಸಬಹುದು. ಇಮ್ಮಡಿ ಮದಕರಿಯ ತಾಮ್ರಪಟ ಹಾಗೂ ಬೇಲಿಯಲ್ಲಿನ ವೀರಗಲ್ಲಿನ ಕುರಿತ ಲೇಖನಗಳು ಸಂಶೋಧಕರ ಆಸ್ಥೆ, ಕುತೂಹಲ, ಶ್ರದ್ಧೆ, ವಿದ್ವತ್ತುಗಳನ್ನು ಬಿಂಬಿಸಿವೆ. ಕಾಶಿ ಅಣ್ಣಪ್ಪ ಶೆಟ್ಟರನ್ನು ಕುರಿತ ಲೇಖನ ಹಾಗೂ ಮುರುಘಾಮಠದ ವಿವರಗಳು ಐತಿಹಾಸಿಕ, ಸಾಮಾಜಿಕ ಮಹತ್ವದವು. ಪಾಳೆಯಗಾರರ ಕಾಲದ ಉಣಿಸು ಹಾಗೂ ದಾವಣಗೆರೆ ಹೆಸರಿನ ವಿವರಗಳ ಲೇಖನ ಸಾಂಸ್ಕೃತಿಕ ಮಹತ್ವವುಳ್ಳವಾಗಿವೆ. ಮೇಲಿನ ಲೇಖನಗಳ ಭಾಷೆ ಆಪ್ತವೂ ಪಾರದರ್ಶಕವೂ ಕುತೂಹಲಭರಿತವೂ ಆಗಿದ್ದು ಸರಳ-ಸರಾಗ ಓದಿಗೆ ಪೂರಕವಾಗಿವೆ. ಐತಿಹಾಸಿಕ ನೆಲೆಗಳಷ್ಟೇ ಆಗಿಲ್ಲದೆ, ಅವುಗಳ ಸಾಂಸ್ಕೃತಿಕ-ಸಾಮಾಜಿಕ-ಸಾಮುದಾಯಿಕ ಆಯಾಮಗಳಿಗಾದರೂ ಈ ಲೇಖನಗಳು ಹೊಸ ಓದಿಗೆ ಪ್ರೇರೇಪಿಸುವಂತಿವೆ. ಚಿತ್ರದುರ್ಗದ ಇತಿಹಾಸದ ಮೇಲೆ ಬೆಳಕು ಚೆಲ್ಲಿ, ಅದನ್ನು ಜನಪ್ರಿಯಗೊಳಿಸಿದ ಹುಲ್ಲೂರು ಶ್ರೀನಿವಾಸ ಜೋಯಿಸರ ಬಗೆಗಿನ ಲೇಖನ ವಿದ್ವತ್ತು, ಪಾಂಡಿತ್ಯ, ಸಂಶೋಧನೆ, ಮಾನವೀಯ ಸಂಬಂಧಗಳ ದಾಖಲೆಗೆ ಮತ್ತೊಂದು ಉತ್ತಮ ನಿದರ್ಶನವಾಗಿದೆ.

**2. ದುರ್ಗಶೋಧನ :** ಮೂವತ್ತು ದೀರ್ಘ ಲೇಖನಗಳುಳ್ಳ ಈ ಕೃತಿ ಕರ್ನಾಟಕ ಪ್ರಾದೇಶಿಕ ಇತಿಹಾಸದ ಅಮೂಲ್ಯ ಆಕರವಾಗಿದೆ. ಮುಂದಿನ ಪೀಳಿಗೆಗೆ ಪಥ್ಯವಾಗಬಹುದಾದ, ಸಾಮರಸ್ಯದ ಬದುಕಿಗೆ ಬೇಕಾದ ಅರಿವು ನೀಡಬಹುದಾದ, ಪ್ರಾದೇಶಿಕ ಇತಿಹಾಸದ ಪುನರ್‌ರೂಪಿಕೆಗೆ ವೇದಿಕೆಯಾಗಬಲ್ಲ ಇಲ್ಲಿನ ಲೇಖನಗಳು, ಆಕರಗಳು, ವಿವರಗಳು ಮಾಹಿತಿಗಳಿಂದ ಇಡಿಕಿರಿದಿವೆ. ಈ ಕೃತಿಯ ಮೊದಲ ಲೇಖನ ಅತ್ಯಂತ ಮಹತ್ವದ್ದು. ಈವರೆಗೆ ನಂಬಿಕೊಂಡು ಬಂದಿದ್ದ, ಒಪ್ಪಿಕೊಂಡಿದ್ದ ಬಹುಮುಖ್ಯ ವಿಚಾರವೊಂದನ್ನು ಕದಲಿಸುವಂಥದ್ದು. ಕದಂಬರ ಮಯೂರವರ್ಮನ ಈ ಶಾಸನ ಕರ್ನಾಟಕದಲ್ಲಿ ದೊರೆತ ಸಂಸ್ಕೃತ ಭಾಷೆಯ ಅತ್ಯಂತ ಪ್ರಾಚೀನ ಶಾಸನವೆಂದು ನಿರೂಪಿಸುವ ಮೂಲಕ ಚಿತ್ರದುರ್ಗದ ಐತಿಹಾಸಿಕ ಮಹತ್ವವನ್ನು ಬಿಂಬಿಸುವಂಥದ್ದಾಗಿದೆ. ಅನೇಕ ಘನ ವಿದ್ವಾಂಸರ ಅಭಿಪ್ರಾಯಗಳನ್ನೇ ಬದಲಿಸಿದ ಲೇಖನವಿದು.

ಹಾಗೆಯೇ ಚಿತ್ರದುರ್ಗದ ಪ್ರಾಚೀನ ಹೆಸರಿನ ಮೊದಲ ಅಕ್ಷರ 'ಚಿ' ಆಗಿತ್ತು ಎಂದು ನಿರೂಪಿಸುವಲ್ಲಿ, ಹೊಳಲ್ಕೆರೆಯ 'ಬಯಲು ಗಣಪತಿ' ನಿರ್ಮಾಣದ ಶಾಸನದ ಬಗ್ಗೆ ಹೇಳುವಲ್ಲಿ, ನಾಯಕನ ಹಟ್ಟಿಯ 'ತಾಮ್ರಪಟ'ದ ವಿವರಗಳನ್ನು ನೀಡುವಲ್ಲಿ ಸಂಶೋಧಕರು ತೋರಿರುವ ಪಾಂಡಿತ್ಯ, ಶ್ರಮ ಅದ್ವಿತೀಯವಾದುದು. 'ತರಳಬಾಳು ಪಟ್ಟವಲ್ಲರಿ' ಕುರಿತ ನೈಜ ಸಂಗತಿಗಳು, ಕುಮಾರರಾಮ ಶಿಲ್ಪದ ಬಗೆಗಿನ ಲೇಖನ, ದಣ್ಣಾಯಕನ ಶಾಸನ ಕುರಿತ ಲೇಖನ, ಇವೆಲ್ಲವೂ ಈವರೆಗೆ ಕಾಲಗರ್ಭದೊಳಗೆ ಹುದುಗಿದಂಥವು. ಈ ಬಗೆಯ ಸಂಗತಿಗಳನ್ನು ದಂತಕತೆ, ಮೌಖಿಕ ಇತಿಹಾಸ, ಶಾಸನಗಳು, ನಾಣ್ಯಗಳು, ತಾಮ್ರಪಟಗಳು, ಶಿಲ್ಪಗಳು, ಲಾವಣಿಗಳು, ಕಾವ್ಯ, ತಾಳೆಗರಿ, ಉಲ್ಲೇಖಗಳು, ಐತಿಹ್ಯಗಳ ಮೂಲ ಆಕರಗಳೊಂದಿಗೆ ಸಂಶೋಧಕರು ಕಟ್ಟಿಕೊಡುವ ಪರಿ ಅಪೂರ್ವವಾದುದು. ಇಲ್ಲೆಲ್ಲಾ ಒಬ್ಬ ಸಂಶೋಧಕನಿಗೆ ಇರಲೇಬೇಕಾದ ತಾಳ್ಮೆ, ತುಲನೆ, ಪರೀಕ್ಷೆ, ಸಾವಧಾನ, ಸಮಚಿತ್ತ, ವ್ಯುತ್ಪತ್ತಿ, ಬಹುಮುಖಿ ಚಿಂತನೆಗಳು ತಟ್ಟನೆ ಕಾಣಿಸುತ್ತವೆ. ಸತ್ಯ ಶೋಧನೆಯ ಜೊತೆಗೆ ಇತಿಹಾಸ ಮತ್ತು ಮಾನವ ಸಂಬಂಧಗಳ ಪುನರ್ ಬೆಸೆಯುವಿಕೆ ಇಲ್ಲಿನ ಬರಹಗಳ ಹಿಂದಿನ ಮುಖ್ಯ ಭಿತ್ತಿಯಾಗಿದೆ.

ಬಹು ಹಿಂದಿನದನ್ನು ಹೇಳುವಲ್ಲಿ, ಅದಕ್ಕೆ ಬೇಕಾದ ಪೂರಕ ಮಾಹಿತಿ ಕಟ್ಟಿಕೊಡುವಲ್ಲಿ, ಸಿಕ್ಕ ಆಕರಗಳನ್ನು ವರ್ಗೀಕರಿಸಿ ವಿಶ್ಲೇಷಿಸುವಲ್ಲಿ, ಕೊನೆಗೆ ಈಗಿರುವ ತೀರ್ಮಾನದ ಬದಲು ಹೊಸ ಚಿಂತನೆ ಉಲ್ಲೇಖಿಸುವಲ್ಲಿ ರಾಜಶೇಖರಪ್ಪನವರ ನಿರ್ದುಷ್ಟತೆ, ಖಚಿತತೆ, ಪ್ರಾಮಾಣಿಕತೆ, ಸೌಜನ್ಯ ಮತ್ತು ಬಹುಶ್ರುತತೆಗಳು ಗೋಚರವಾಗುತ್ತವೆ.

**3. ಇತಿಹಾಸ ಕಥನ :** 'ಕಥನ'ಗಳು ಸಮುದಾಯಗಳ ಸಾಂಸ್ಕೃತಿಕ ಚರಿತ್ರೆಯನ್ನು ತಮ್ಮೊಳಗಿಟ್ಟುಕೊಂಡಿರುತ್ತವೆ. 'ಕತೆ' ಏಕದನಿಯಾಗಿದ್ದು, 'ಕಥನ' ಬಹುದನಿಯಾಗಿರುತ್ತದೆ. ಹಾಗಾಗಿ ಈವರೆಗೆ 'ರಾಜ'ರ ದಿಗ್ವಿಜಯಗಳ ಕತೆಗಳಾಗಿದ್ದ ಚರಿತ್ರೆ ಈಚೀಚೆ ಸಾಂಸ್ಕೃತಿಕ ಪಥ್ಯವಾಗಿ, ಆ ಮೂಲಕ ಕಥನವಾಗಿದೆ. ಆಧುನಿಕ ಚಿಂತನೆಗಳು ಹಾಗೂ ಬದಲಾದ ಚಿಂತನಾ ಕ್ರಮಗಳು ಈ ವಿನ್ಯಾಸಕ್ಕೆ ಭಿತ್ತಿಯಾಗಿವೆ. ಆದ್ದರಿಂದ ಚರಿತ್ರೆ 'ಅಳಿದು ಹೋದ ಶ್ರಮಜೀವಿಗಳ ಬದುಕಿನ ಕ್ರಮ ವಿನ್ಯಾಸವನ್ನು ದಾಖಲಿಸುತ್ತಲೇ, ಅದಕ್ಕೊಂದು ಸಾಂಸ್ಕೃತಿಕ ಆಯಾಮವನ್ನು ಸಿರ್ವಜಿಸುತ್ತದೆ.' ಆ ನೆಲೆಯಲ್ಲಿ ಈ ಕೃತಿಯನ್ನು ಗಮನಿಸಬಹುದು.

ಇಪ್ಪತ್ತೈದು ಲೇಖನಗಳುಳ್ಳ ಈ ಕೃತಿ ಅತ್ಯಂತ ಪ್ರೌಢವಾದುದಾಗಿದೆ. ಹಾಗಾಗಿಯೇ ಆಸಕ್ತ ಓದುಗರ ಪ್ರೀತಿಗೆ ಪಾತ್ರವಾದಂತೆ, ಸಾಹಿತ್ಯ ಅಕಾಡೆಮಿಯ ಬಹುಮಾನವನ್ನೂ ಪಡೆದಿದೆ.

ಇತಿಹಾಸದ ಘಟನೆಗಳನ್ನು ಆಧರಿಸಿ ರಚಿಸುವ ಸಾಹಿತ್ಯ ಕೃತಿಗಳು ಇತಿಹಾಸಕ್ಕೆ ಬದ್ಧವಾಗಿರಬೇಕೆಂಬ ಮಾತನ್ನು ಲೇಖಕರು ಬಲು ಗಟ್ಟಿಯಾಗಿ, ಖಚಿತವಾಗಿ, ನೇರವಾಗಿ ಹೇಳುತ್ತಾರೆ. ಬಹು ಚರ್ಚಿತ ತ.ರಾ.ಸು. ಕೃತಿಗಳನ್ನು, ಶಿವಪ್ರಕಾಶರ ನಾಟಕವನ್ನು ಇದಕ್ಕೆ ಉದಾಹರಣೆ ನೀಡಿ ಸೃಜನಶೀಲ ಲೇಖಕನೊಬ್ಬ ತನ್ನ ಕೃತಿಗೆ ಇತಿಹಾಸವನ್ನು ಭಿತ್ತಿಯಾಗಿಸಿಕೊಂಡಲ್ಲಿ ಇತಿಹಾಸದ ಸತ್ಯಕ್ಕೆ ಬದ್ಧನಾಗಿರಬೇಕು ಹಾಗೂ ಅಲ್ಲಿನ ಕಾಲಾನುಕ್ರಮದ ಮೌನಗಳನ್ನು ತನ್ನ ಸೃಜನಶೀಲತೆಯ ಅವಕಾಶಕ್ಕೆ ಬಳಸಿಕೊಳ್ಳಬೇಕು ಎಂದು ಹೇಳುವ ಮೂಲಕ ಇತಿಹಾಸಕಾರನೊಬ್ಬನಿಗೆ ಇರಬೇಕಾದ ಕಾಳಜಿಯನ್ನು ತೋರಿಸುತ್ತಾರೆ. ಇತಿಹಾಸವನ್ನೇ ಬದಲಿಸುತ್ತಿರುವ, ಹೊಸ ಹೊಸ ಇತಿಹಾಸಗಳನ್ನು ತಮಗೆ ಬೇಕಾದಂತೆ ಸೃಷ್ಟಿಸಿಕೊಳ್ಳುತ್ತಿರುವ ಇಂದಿನ ಪ್ರಭುತ್ವ ಮತ್ತು ಜನಪ್ರತಿನಿಧಿ(?)ಗಳಿಗೆ ಈ ಮಾತನ್ನು ಕೇಳಿಸಿಕೊಳ್ಳುವ ವ್ಯವಧಾನವಿದೆಯೆ? ಇತಿಹಾಸ, ದೇಶಗಳು ಕೆಲವರ ಸೊತ್ತಲ್ಲ. ದೇವರಂತೂ ಅಲ್ಲವೇ ಅಲ್ಲ. ಅಂದ ಮೇಲೆ ಸೃಜನಶೀಲ ಲೇಖಕ ಈ ಬಗ್ಗೆ ಗಾಢವಾಗಿ ಚಿಂತಿಸಲೇಬೇಕಿದೆ.

ಈ ಕೃತಿಯ ಮತ್ತೊಂದು ಮುಖ್ಯವಾದ ಲೇಖನ 'ಕನಕದಾಸರ ಜಾತಿ'ಗೆ ಸಂಬಂಧಿಸಿದ್ದು. ಎಷ್ಟೊಂದು ಆಕರಗಳ ಮೂಲಕ ಅದನ್ನು ತರ್ಕಿಸಿದ್ದಾರೆ! ಕನಕದಾಸ ಜಾತಿಯ ಮೂಲಕ ನಮಗೆ ಪ್ರಸ್ತುತನಲ್ಲ. ಆದರೆ ಅವನ ಜಾತಿಯ ಮೂಲ ಸುಳ್ಳಾಗಬಾರದಲ್ಲವೆ? ಈ ಬಗೆಯ ವಿಚಾರಗಳನ್ನು ಮಂಡಿಸುವಾಗ, ಮಂಡಿಸಿದಾಗ ಎದುರಿಸಿದ ಅಡ್ಡಿ-ಆತಂಕಗಳನ್ನು ಅವರು ದಾಖಲಿಸುತ್ತಾರೆ.

ಸಂಚಿ ಹೊನ್ನಮ್ಮನ ಕಾಲನಿರ್ಣಯ ಇನ್ನೊಂದು ಮುಖ್ಯ ಲೇಖನ. ಹಾಗೆಯೇ ಶಾಸನವೊಂದನ್ನು ಬರೆಸಿದ ಮೊದಲ ಮಹಿಳೆ 'ಬಿಜಾಬೆ' ಎನ್ನುವಲ್ಲಿ, ಉಪ್ಪಾರರು ಮತ್ತು ಉಪ್ಪಿನ ಉದ್ದಿಮೆಗಳನ್ನು ಹೇಳುವಲ್ಲಿ, ಕರ್ನಾಟಕದ ವೀರಶೈವ ಅರಸು ಮನೆತನಗಳ ಬಗ್ಗೆ ತಿಳಿಸುವಲ್ಲಿ ಲೇಖಕರು ಬಳಸಿರುವ ಮಾದರಿ ಆಕರ್ಷಕವಾಗಿದೆ.

ಚಿತ್ರದುರ್ಗದ ಇತಿಹಾಸ ಕುರಿತ ಪ್ರೌಢಪ್ರಬಂಧಕ್ಕೆ ತಮ್ಮ ಪಿಎಚ್.ಡಿ ಪದವಿ ಪಡೆದಿರುವ ಸಂಶೋಧಕರು (''ಪ್ರಾಚೀನ ಚಿತ್ರದುರ್ಗ'' – ಕರ್ನಾಟಕ ವಿ.ವಿ. – ೨೦೦೩) ಚಿತ್ರದುರ್ಗದ ಇತಿಹಾಸ ಕುರಿತ ಖಜಾನೆಯೇ ಆಗಿದ್ದಾರೆ. ಚಿತ್ರದುರ್ಗವನ್ನು ಆಳಿದ ಪಾಳೆಯಗಾರರು 'ಮದಕರಿ' ಅಲ್ಲ 'ಮೆದಕೇರಿ' ಎಂದು ಹೇಳುವಲ್ಲಿ, ಈವರೆಗಿರುವ ಎಷ್ಟೋ ದಂತಕತೆಗಳು (ಓಬವ್ವನ ಕಿಂಡಿ, ಇತ್ಯಾದಿ) ನಡೆದೇ ಇಲ್ಲ ಅಥವಾ ನಡೆದ ಬಗ್ಗೆ ದಾಖಲೆ, ಮಾಹಿತಿ ಇಲ್ಲ ಎಂದು ಹೇಳುವಲ್ಲಿ, ಚಿತ್ರದುರ್ಗದ ಪಾಳೆಗಾರರು ನಿರ್ಮಿಸಿದ ಕೆರೆ-ಕಟ್ಟೆ-ಕಾಲುವೆ ಇನ್ನಿತರ ಸಾಮಾಜಿಕ ಕಾರ್ಯಗಳಾಗಲಿ, ಗುಡಿ-ಗುಡಾರ-ಮಾಡ ಇವುಗಳನ್ನು ನಿರ್ಮಿಸಿದ ಬಗ್ಗೆಯಾಗಲಿ ಹೇಳುವಾಗ ಚಿತ್ರದುರ್ಗದ ಇತಿಹಾಸ ಖಚಿತವೂ, ಈವರೆಗಿಂತಲೂ ಭಿನ್ನವೂ ಆಗಿ ಬಿಂಬಿತವಾಗಿದೆ. ಹಾಗಾಗಿ ಈವರೆಗೆ ಲಿಖಿತ ಇತಿಹಾಸದಲ್ಲಿ ಚದುರಿದಂತೆ – ಶಿಥಿಲವಾಗಿ, ತೀರಾ ನಗಣ್ಯವೆಂಬಂತೆ ಕಂಡುಬಂದಿದ್ದ ಚಿತ್ರದುರ್ಗ ಮತ್ತು ಅದರ ಇತಿಹಾಸ ಈ ಕೃತಿಯ ಪ್ರಕಟಣೆ ನಂತರ ಕರ್ನಾಟಕದ ಅತ್ಯಂತ ಮಹತ್ವದ ಆಳ್ವಿಕೆ ಕಾಲವಾಗಿ ಹೊರಹೊಮ್ಮಿದೆ. ಸುಮಾರು ೨೩೭ ವರ್ಷಗಳ ದೀರ್ಘ ಆಳ್ವಿಕೆಯಲ್ಲಿ ಚಿತ್ರದುರ್ಗದ ಪಾಳೆಗಾರರ ಜನಪರ ಆಡಳಿತ, ರಾಜನೀತಿ, ಸಂಸ್ಕೃತಿ ಅತ್ಯಂತ ವಿವರವಾಗಿ ಈ ಕೃತಿಯಲ್ಲಿ ಮೂಡಿಬಂದಿವೆ.

ಕೇವಲ 'ಶಿಲ್ಪ'ವೆರಡರ ಜಾಡು ಹಿಡಿದು ಕಾವ್ಯ, ಶಾಸನ, ತಾಳೆಗರಿ ಮೊದಲಾದ ಆಕರಗಳಿಂದ ನಿರೂಪಿಸಿರುವ 'ನಯನಕ್ಷತ್ರಿಯರ' ಕುರಿತ ಲೇಖನ ಒಂದು ಸಾಂಸ್ಕೃತಿಕ ಅದ್ಭುತವೇ ಆಗಿದೆ. ಹಾಗಾಗಿ ಈ ನೆಲದ ಇತಿಹಾಸದಲ್ಲಿ ಈವರೆಗೆ ದಾಖಲಾಗದಿದ್ದ ಒಂದು ಬಹುದೊಡ್ಡ ಸಮುದಾಯ ಇಂಥ ಲೇಖನಗಳ ಮೂಲಕ ತಮ್ಮ ನೆಲೆ-ಸೆಲೆಗಳನ್ನು ಕಂಡುಕೊಳ್ಳಬಹುದು. ಹಾಗಾಗಿ ಈ ಮೂರೂ ಕೃತಿಗಳು ''ಶೂದ್ರ ನೆಲೆಯ ಹೊಸಚರಿತೆ''ಯೇ ಆಗಿವೆ. ನಾಯಕರು, ಬೇಡರು, ಗೊಲ್ಲರು, ಉಪ್ಪಾರರು, ಕ್ಷೌರಿಕರು ಮೊದಲಾದ ಇಂದಿನ 'ಜಾತಿ' ಸೂಚಕ ಪದಗಳೆಲ್ಲ ಅಂದು ವೃತ್ತಿ, ಆಳ್ವಿಕೆ, ಕಾಯಕ, ವ್ಯಾಪಾರ ಮೊದಲಾದ ಕ್ಷೇತ್ರಗಳ ದಿಗ್ಗಜವಾಗಿದ್ದವು ಎಂಬುದು ವಿಸ್ಮಯವಾದರೂ ಸತ್ಯ! 'ಗೊಡಬನಹಾಳು' ಈವರೆಗೆ ಒಂದು ಸಾಧಾರಣ ಊರು. ಆದರೆ 'ಇತಿಹಾಸ ಕಥನ'ದಂತ ಕೃತಿಗಳ ನಂತರ ಪಂಡರಹಳ್ಳಿ, ಗೊಡಬನಹಾಳು, ಜಗಲೂರು, ಬೂದಿಹಾಳು ಈ ಮೊದಲಾದ ಊರಿನ ಜನ ಎದೆಯುಬ್ಬಿಸಿ ನಡೆಯಬಹುದು. ಬೃಹತ್ ಸಮಾಜದಲ್ಲಿ ಅನಾಥ ಸಮುದಾಯವಾಗಿದ್ದ ಈ ಇಂಥ ಅನೇಕ ಊರು-ಕೇರಿ ಜನರ ಬೇರುಗಳನ್ನು ತೆರೆದಿಟ್ಟ ದಿಟ್ಟ ಪ್ರಯತ್ನವಾಗಿದೆ ಈ ಕೃತಿ.

ಅಂತೆಯೆ 'ಕರ್ನಾಟಕ-ಚೀನಾ'ದ ವ್ಯಾಪಾರ ಸಂಬಂಧಗಳು, ಚಿತ್ರದುರ್ಗದ ರಸಸಿದ್ಧರು, ಬೂದಿಹಾಳಿನ ಅರಸರು, ಕೆಳದಿ ಅರಸರ ಸಂಬಂಧಗಳು, ಅಂದಿನ ರಾಜಕೀಯ-ಸಾಮಾಜಿಕ ವ್ಯಾಪಾರದ ಚಿತ್ರಣಗಳು ಇತಿಹಾಸಚಕ್ರದಲ್ಲಿ ಮೇಲೆ ಬಂದ 'ದಿವ್ಯ' ನಿದರ್ಶನಗಳಾಗಿವೆ. ಮಯೂರನ 'ಶ್ರೀಪರ್ವತ'ದ ಉಲ್ಲೇಖ, ಶಾಸನಗಳ ಪ್ರವಾಸೋದ್ಯಮ ಸಾಧ್ಯತೆ ಮೊದಲಾದ ಲೇಖನಗಳು ಚಿಂತನೆಗೆ ಇಂಬು ನೀಡಿವೆ.

ಒಟ್ಟಾರೆ ಚಿತ್ರದುರ್ಗ ಕುರಿತ ಈ ಮೂರು ಕೃತಿಗಳು ಕರ್ನಾಟಕ ಇತಿಹಾಸಕ್ಕೆ ಸಾಂಸ್ಕೃತಿಕ-ಸಾಹಿತ್ಯಿಕ ಆಯಾಮಗಳ ಜೊತೆ ಸೇರಿಕೊಂಡ ಮಹತ್ವದ ಪ್ರಕಟಣೆಗಳಾಗಿವೆ. ಚಿತ್ರದುರ್ಗಕ್ಕೆ ಸಂಬಂಧಿಸಿದಂತೆ ಇನ್ನೂ ನೂರಾರು ಅಪ್ರಕಟಿತ ಸಂಶೋಧನ ಲೇಖನಗಳು ರಾಜಶೇಖರಪ್ಪನವರ ಬಳಿ ಇವೆ. ಇವೆಲ್ಲಾ ಪ್ರಕಟವಾದಲ್ಲಿ ಕರ್ನಾಟಕದ ಇತಿಹಾಸ ಮತ್ತಷ್ಟು ಶ್ರೀಮಂತವಾಗುವುದರಲ್ಲಿ 'ಚಿತ್ರದುರ್ಗ' ಇನ್ನಷ್ಟು ಐತಿಹಾಸಿಕ ಸಾಂಸ್ಕೃತಿಕ ಮಹತ್ವದ ಸ್ಥಳವಾಗುವುದರಲ್ಲಿ ಸಂದೇಹವಿಲ್ಲ.

ಸಾಮಾನ್ಯವಾಗಿ ಸಂಶೋಧನೆಯ ಬರಹಗಳು ಶುಷ್ಕವಾಗಿರುತ್ತವೆ, ನೀರಸವಾಗಿರುತ್ತವೆ, ಮತ್ತು ಗೂಢವಾಗಿರುತ್ತವೆ. ಆದರೆ ಸಾಹಿತ್ಯಿಕ ಮನಸೊಂದು ಕಟ್ಟಿರುವ ಇಲ್ಲಿನ ಇತಿಹಾಸದ ಗೂಡು ಎಷ್ಟೊಂದು ಆಕರ್ಷಕವಾಗಿದೆ! ನೇರವೂ, ಸರಳವೂ, ಪಾರದರ್ಶಕವೂ, ಖಚಿತವೂ, ಸುಲಲಿತವೂ ಆದ ಭಾಷೆ-ಭಾವನೆ-ಚಿಂತನೆಗಳ ಸಂಗಮವಿದೆ ಇಲ್ಲಿ. ಜಾನಪದೀಯ, ಸಮಾಜಶಾಸ್ತ್ರೀಯ, ಮಾನವಶಾಸ್ತ್ರೀಯ, ವೈಜ್ಞಾನಿಕ, ಜನಪರ, ನಿಷ್ಪಕ್ಷಪಾತ ಪರಿಕರಗಳಿಂದ ರೂಪಿತಗೊಂಡಿರುವ ಈ ಆಕರನಿಷ್ಠ ಸಂಶೋಧನೆ ಮುಂದಿನ ಅಧ್ಯಯನಗಳಿಗೆ ಮಾದರಿಯಾಗಲಿದೆ. ಈವರೆಗೆ ಇಸವಿ ವಿವರಗಳಿಂದ ಕಿಕ್ಕಿರಿದಿದ್ದ ಇತಿಹಾಸ ಇಲ್ಲಿ ಸಾಂಸ್ಕೃತಿಕ-ಸಾಹಿತ್ಯಿಕ ಆಯಾಮಗಳಿಂದ ಗಮನ ಸೆಳೆವಂತಿದೆ. ಬಹುಶಃ ಆಧುನಿಕ ಗದ್ಯ ಸಾಹಿತ್ಯದಲ್ಲಿ ಲಂಕೇಶರ ನಂತರ ಬಂದ ಉತ್ಕೃಷ್ಟ ಮಾದರಿ ಬರಹವನ್ನು ಇಲ್ಲಿನ ಲೇಖನಗಳಲ್ಲಿ ಕಾಣಬಹುದು. ಅದಕ್ಕೆ ನಿದರ್ಶನವಾಗಿ ''ಇತಿಹಾಸ ಆಧಾರಿತ ಸಾಹಿತ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ'', ''ಬೂದಿಹಾಳು ಪಾಳೆಯಗಾರರು'', ''ನಯನಕ್ಷತ್ರಿಯರ'' ಲೇಖನ ಗಮನಿಸಬಹುದು. ಒಂದೆರಡು ಲೇಖನಗಳ ಪುನರಾವರ್ತನೆ ಬಿಟ್ಟಲ್ಲಿ ಈ ಕೃತಿಗಳು ಕನ್ನಡದ ಪ್ರಬುದ್ಧ ಚಿಂತನೆಯ ಹೆಗ್ಗುರುತುಗಳಾಗಿವೆ.

ಡಾ|| ಎಸ್. ಪ್ರಸಾದಸ್ವಾಮಿ
ಮುಖ್ಯರು, ಕನ್ನಡ ವಿಭಾಗ, ಸರ್. ಎಂ. ವಿ. ಸರ್ಕಾರಿ ವಿಜ್ಞಾನ ಕಾಲೇಜು,
ಭದ್ರಾವತಿ - ೫೭೭ ೩೦೨

# ಆಕಾಶಗಂಗೆಯ ಸೊಬಗು



**ಈ** ತಿಂಗಳಲ್ಲಿ ಆಕಾಶಗಂಗೆಯದೇ ಮುಖ್ಯ ಆಕರ್ಷಣೆ. ಸಂಜೆಯಲ್ಲಿ ಆಕಾಶ ಶುಭ್ರವಾಗಿದ್ದಾಗ ಕತ್ತೆತ್ತಿ ನೋಡಿ. ಕೆಲವೆಡೆ ನಕ್ಷತ್ರಗಳು ವಿರಳವಾಗಿದ್ದರೆ ಕೆಲವೆಡೆ ಹೆಚ್ಚಾಗಿವೆ. ಇಲ್ಲಿ ಆಕಾಶಗಂಗೆ ಎಂಬ ನದಿಯ ಹರಿವನ್ನು ಗುರುತಿಸಲು ದಕ್ಷಿಣದಿಂದ ಆರಂಭಿಸೋಣ. ದಕ್ಷಿಣದ ಅಂಚಿನಲ್ಲಿ ಕಾಣುವ ಶಿಲುಬೆ ಆಕಾರದ ನಾಲ್ಕು ನಕ್ಷತ್ರಗಳಿಗೆ ದಕ್ಷಿಣದ ಶಿಲುಬೆ - Southern cross ಎಂದೂ ಹೆಸರಿದೆ. ಇದನ್ನು ಗುರುತಿಸುವುದು ಸುಲಭ. ನಕ್ಷೆಯನ್ನೂ ಬಳಸಬಹುದು. ಇದರ ಪಕ್ಕದ ಎರಡು ಪ್ರಕಾಶಮಾನ ನಕ್ಷತ್ರಗಳೇ ಆಲ್ಫಾ ಸೆಂಟಾರಿ ಮತ್ತು ಬೀಟಾ ಸೆಂಟಾರಿ. ಸೆಂಟಾರಸ್ ಎಂಬುದನ್ನು ಕಿನ್ನರ ಎಂದು ಹೆಸರಿಸಲಾಗಿದೆ. ಆಲ್ಫಾ ಎಂಬುದು ಆ ಪುಂಜದ ಅತಿ ಹೆಚ್ಚು ಪ್ರಕಾಶಮಾನವಾದ ನಕ್ಷತ್ರ. ಬೀಟಾ ಎಂಬುದು ಪ್ರಕಾಶದಲ್ಲಿ ಎರಡನೆಯ ಸ್ಥಾನ ಪಡೆಯುತ್ತದೆ. ಇದನ್ನು ಕಿನ್ನರ ಪ್ರಥಮ ಮತ್ತು ಕಿನ್ನರ ದ್ವಿತೀಯ ಎಂದೂ ಕರೆಯಬಹುದು. ಹೀಗೆ ಮುಂದು ವರಿದು ವೃಶ್ಚಿಕದ ಅಂಚಿಗೆ ಬನ್ನಿ. ದುರ್ಬೀನಿನಿಂದ ನೋಡಿದಿರಾದರೆ ಅಸಂಖ್ಯಾತ ತಾರೆಗಳು ಕಾಣುವುವು. ಈಗ ನಾವು ಆಕಾಶಗಂಗೆಯ ಜಾಡು ಹಿಡಿದಿದ್ದೇವೆ. ಮುಂದೆ ಧನು, ವೃಶ್ಚಿಕ-ಧನುಗಳ ಈ ಭಾಗದಲ್ಲಿ ನಕ್ಷತ್ರಗಳ ದಟ್ಟಣೆ ಅತಿ ಹೆಚ್ಚು. ದೂರದರ್ಶಕದಿಂದ ನೋಡಿದಿರಾದರೆ ಕೇವಲ ನಕ್ಷತ್ರಗಳೇ ಅಲ್ಲ, ನೆಬ್ಯುಲಗಳೂ, ನಕ್ಷತ್ರ ಗುಚ್ಛಗಳೂ ಕಾಣುವುವು.




ಹಿಂದೊಮ್ಮೆ ಚಾರ್ಲ್ಸ್ ಮೆಸ್ಸಿಯೆ ಎಂಬೊಬ್ಬ ಖಗೋಳ ವೀಕ್ಷಕ ಆಕಾಶದಲ್ಲಿ ನಕ್ಷತ್ರವಲ್ಲದ ಕಾಯಗಳ ಪಟ್ಟಿ ಮಾಡಿದ (ಆತನ ಉದ್ದೇಶ ಧೂಮಕೇತುಗಳನ್ನು ಹುಡುಕುವುದೇ ಆಗಿತ್ತು). ಇಂದು ನಾವು ಗುರುತಿಸುವ ನೆಬ್ಯುಲಗಳು, ಗ್ಯಾಲಕ್ಸಿಗಳು, ನಕ್ಷತ್ರ ಗುಚ್ಛಗಳು ಎಲ್ಲವೂ ಆ ಪಟ್ಟಿಯಲ್ಲಿವೆ (ಉದಾಹರಣೆಗೆ : ಎಂ೧ ಎಂಬುದು ಕ್ರಾಬ್ ನೆಬ್ಯುಲ; ಎಂ೩೧ ಎಂಬುದು ಆಂಡ್ರೊಮಿಡಾ ಗ್ಯಾಲಕ್ಸಿ – ಹೀಗೆ). ಈ ಪಟ್ಟಿಯಲ್ಲಿಯ ಅತಿ ಹೆಚ್ಚು ನಮೂದುಗಳು ವೃಶ್ಚಿಕ-ಧನು ಈ ಭಾಗದಲ್ಲಿವೆ. ಅಂದರೆ ಇಲ್ಲಿ ನಕ್ಷತ್ರಗಳು ಮಾತ್ರವಲ್ಲ; ನಕ್ಷತ್ರಗಳಲ್ಲದ ವಸ್ತುಗಳೂ ಹೆಚ್ಚಾಗಿವೆ ಎಂದಾಯಿತು. ನೆಬ್ಯುಲಗಳು ಮಾತ್ರವಲ್ಲ – ನಕ್ಷತ್ರಗಳ ನಡುವೆ ಹರಡಿರುವ ಧೂಳು, ಅನಿಲ ಎಲ್ಲವೂ ಹೆಚ್ಚೇ ಎನ್ನಬಹುದು. ಹೀಗಾಗಿ ಗ್ಯಾಲಕ್ಸಿಯ ಆಚೆ ಈ ದಿಕ್ಕಿನಲ್ಲಿರುವ ವಸ್ತುಗಳು ನಮಗೆ ಕಾಣದಂತಾಗಿವೆ – ಹೊಗೆಯಿಂದ ದೃಷ್ಟಿಯ ಮಿತಿ ಕಡಿಮೆಯಾದ ಹಾಗೆ!

ಈಗ ಆಕಾಶಗಂಗೆಯ ಜಾಡನ್ನು ಮುಂದುವರಿಸೋಣ. ಮುಂದಕ್ಕೆ ಈ "ನದಿ" ಉತ್ತರಕ್ಕೆ ತಿರುಗುತ್ತದೆ. ಅಕ್ವಿಲಾ (ಗರುಡ) ಮತ್ತು ಲೈರಾ (ವೀಣಾ) ಈ ಪುಂಜಗಳ ನಡುವೆ ಸಾಗುತ್ತದೆ. ಮುಂದಕ್ಕೆ ರಾಜಹಂಸ (ಸಿಗ್ನಸ್)ವನ್ನು ಬಳಸಿ ಉತ್ತರದ ಪುಂಜಗಳ ಮೂಲಕ ಹರಿಯುತ್ತದೆ.

ಹೀಗೆ ಡೊಂಕು ಡೊಂಕಾಗಿ ಸಾಗುವ ಈ ಚುಕ್ಕೆಗಳ ರಂಗೋಲಿ 'ನದಿ' ಎಂಬ ಹೆಸರು ಗಿಟ್ಟಿಸಿಕೊಂಡಿರುವುದು ಆಶ್ಚರ್ಯವೇನಲ್ಲ. ಎಲ್ಲ ಸಂಸ್ಕೃತಿಗಳಲ್ಲೂ ಇದು ನದಿಯೆಂಬ ಹೆಸರನ್ನೇ ಪಡೆದಿರುವುದು ಕಾಕತಾಳೀಯವಲ್ಲ.

ಈಗ ಸಮೀಪದ ಆಕಾಶಕಾಯಗಳತ್ತ ಗಮನಹರಿಸೋಣ. ಮೋಡ ಕವಿದ ಆಕಾಶದಲ್ಲಿ ಸ್ವಲ್ಪ ಬಿಡುವು ಸಿಕ್ಕಾಗ ಖಚಿತವಾಗಿ ಕಾಣುವುವು ಇವೇ ತಾನೇ. ಸಂಜೆಯ ಆಕಾಶದಲ್ಲಿ ಗುರುಗ್ರಹದ ಹೊರತಾಗಿ ಬೇರೆ ಯಾವುದೇ ಗ್ರಹವಿಲ್ಲ ಎನ್ನಬಹುದು. ಬುಧ ಮತ್ತು ಮಂಗಳ ಪಶ್ಚಿಮದ ಅಂಚಿನಲ್ಲಿ ಇರುತ್ತವೆಯಾದರೂ ಹುಡುಕಲು ಪ್ರಯಾಸ ಪಡಬೇಕು. ನಮ್ಮ ಮಾರ್ಗದರ್ಶಿ ಚಂದ್ರ ಪುಟುಪುಟು ಉರುಳುತ್ತಾ ಗ್ರಹಗಳ ಪರಿಚಯ ಮಾಡುತ್ತಾನಷ್ಟೇ. ಈ ತಿಂಗಳ ಮೊದಲರ್ಧದಲ್ಲಿ ಆತನಿಗೆ ಬೆಳಗಿನ ಶಿಫ್ಟ್. ದಿನೇ ದಿನೇ ಮುಕ್ಕಾಲು ಗಂಟೆ ತಡ ಮಾಡಿ ಬರುವ ಈ "ಗೈಡ್" ಏಳರಂದು ಮಧ್ಯರಾತ್ರಿಗೆ ಉದಯಿಸುತ್ತದೆ. ಆದ್ದರಿಂದ ಬೆಳಗಿನ ಆಕಾಶದಲ್ಲಿ ಕಾಣುತ್ತಾನೆ. ಹನ್ನೊಂದರಂದು ಶುಕ್ರಗ್ರಹಕ್ಕೆ ಎಂಟು ಡಿಗ್ರಿ ದೂರವಿರುತ್ತಾನೆ. ೧೩ರಂದು ಶನಿ ಗ್ರಹದಿಂದ ಐದು ಡಿಗ್ರಿ ದೂರ (ಸಮೀಪ ?) ಇರುವುದನ್ನು ಬಳಸಿ ಗ್ರಹವನ್ನು ಗುರುತಿಸಬಹುದು. ಅಂದರೆ ಶುಕ್ರ, ಶನಿ ಎರಡೂ ಬೆಳಗಿನ ಜಾವ ಕಾಣುವುದೆಂದಾಯಿತಲ್ಲವೇ ? ತಿಂಗಳ ಕೊನೆಯ ದಿನ ಶುಕ್ರ-ಶನಿ ಎರಡೂ ಪಕ್ಕಪಕ್ಕದಲ್ಲೇ ಕಾಣುವುವು.

೧೬ರ ಅಮಾವಾಸ್ಯೆ, ಅದರ ಹಿಂದಿನ ದಿನ, ಮುಂದಿನ ದಿನ – ಮಾರ್ಗದರ್ಶಿಗೆ ರಜಾ. ಕಾಣುವುದಿಲ್ಲ, ಆದರೆ ಆ ದಿನ ಮಂಗಳ-ಬುಧ ಚಂದ್ರನೊಡನೆ ಸೇರುತ್ತಾರೆ. ೧೮ರಿಂದ ಚಂದ್ರ ಸಂಜೆಯ ಆಕಾಶದಲ್ಲಿ ಹಾಜರ್ ಗುರು-ಚಂದ್ರ ಜೊತೆಯಾಗುವುದರಿಂದ. ೩೦ರ ಹುಣ್ಣಿಮೆಯವರೆಗೂ ಈ ಪಾಳಿ ನಡೆಯುತ್ತದೆ.

ಸಂಜೆಯಿಂದ ಬೆಳಗಿನ ಆಕಾಶಕ್ಕೆ ಜಾರುವ ಬುಧದ "ಯುತಿ" (conjunction) ೨೭ರಂದು. ಜೂನ್ ೮ರಂದು ಶುಕ್ರ ಹೀಗೆ ಹಾದುಹೋದ ವಿಶೇಷ ಸಂದರ್ಭವನ್ನು ನಾವೆಲ್ಲ ನೋಡಿದೆವಲ್ಲವೇ? ಆದರೆ ಬುಧ ಈಗ ಸೂರ್ಯನ ಮುಂದೆ ಹಾದು ಹೋಗುವುದಿಲ್ಲ. ಇದು ಸಂಕ್ರಮಣವಲ್ಲ – ಯುತಿ ಮಾತ್ರ.

### ಖಗೋಳ ದಿನಚರಿ

| | |
|---|---|
| ೭ | ಚಾಂದ್ರಮಾಸದ ಕೊನೆಯ ಪಾದ ಚಂದ್ರೋದಯ ನಡುರಾತ್ರಿಯಲ್ಲಿ. |
| ೯ | ಬುಧಗ್ರಹದ ಹಿನ್ನಡೆ ಆರಂಭ. |
| ೧೧ | ಚಂದ್ರ-ಭೂಮಿ ದೂರ ಗರಿಷ್ಠ.<br>ಚಂದ್ರ-ಶುಕ್ರ ನಡುವೆ ಕನಿಷ್ಠಕೋನ (ಎಂಟು ಡಿಗ್ರಿ). |
| ೧೨ | ಪರ್ಸಿಯ್ಯೆಡ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ. |
| ೧೩ | ಶನಿ-ಚಂದ್ರ ನಡುವೆ ಕನಿಷ್ಠ ಕೋನ (ಐದು ಡಿಗ್ರಿ). |
| ೧೬ | ಅಮಾವಾಸ್ಯೆ ಬೆಳಿಗ್ಗೆ ೬:೫೪ಕ್ಕೆ. ಚಂದ್ರ, ಬುಧ, ಮಂಗಳ – ಇವು ೪ ಡಿಗ್ರಿ ಕೋನದಲ್ಲಿ ಇರುತ್ತವೆ. ಆದರೆ ಕಾಣುವುದಿಲ್ಲ. |
| ೧೭ | ಶುಕ್ರಗ್ರಹದ ಕೋನೋನ್ನತಿ ಗರಿಷ್ಠ. |
| ೧೮ | ಗುರು-ಚಂದ್ರರ ನಡುವೆ ಕನಿಷ್ಠಕೋನ. |
| ೨೩ | ಚಾಂದ್ರಮಾಸದ ಮೊದಲ ಪಾದ. |
| ೨೭ | ಬುಧಗ್ರಹ ಸೂರ್ಯ-ಭೂಮಿಯ ನಡುವೆ ಹಾದುಹೋಗುವ ಯುತಿ. |
| ೩೦ | ಹುಣ್ಣಿಮೆ ಬೆಳಿಗ್ಗೆ ೭:೫೭ಕ್ಕೆ |
| ೩೧ | ಶನಿ ಮತ್ತು ಶುಕ್ರ ಎರಡು ಡಿಗ್ರಿ ಅಂತರದಲ್ಲಿ ಕಾಣುವುವು. |


ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಸ್ತ್ರೀ ಸ್ವಾತಂತ್ರ್ಯದಲ್ಲಿ ನೈತಿಕತೆಯ ಪ್ರಶ್ನೆಗಳು

ಡಾ॥ ಮಾಧವಿ ಭಂಡಾರಿ

ನೈತಿಕತೆಯ ಕುರಿತಾಗಿ ಏನನ್ನಾದರೂ ಹೇಳುವ ಮುನ್ನ ತಸ್ಲಿಮಾ ನಸರೀನರ ಲೇಖನದ ಒಂದು ಪರಿಚ್ಛೇದವನ್ನು ಉದ್ಧರಿಸಲೇಬೇಕೆಂದೆನಿಸುತ್ತದೆ – ''ಮುಂಜಾನೆಯಿಂದ ಮಧ್ಯಾಹ್ನದವರೆಗೆ, ಮಧ್ಯಾಹ್ನದಿಂದ ರಾತ್ರಿಯವರೆಗೆ, ಒಬ್ಬಳೇ ತಿರುಗಾಡುತ್ತಿರಬೇಕೆಂಬ ಹಂಬಲ ನನ್ನದು. ನದಿಯ ದಡದಲ್ಲಿ, ಊರ ಆಟದ ಬಯಲಲ್ಲಿ, ಸಂಜೆಯ ನಸು ಬೆಳಕಲ್ಲಿ, ಫುಟ್‌ಪಾತ್ ಮೇಲೆ, ಪಾರ್ಕಿನಲ್ಲಿ ಕೇವಲ ಒಬ್ಬಂಟಿಗಳಾಗಿ ನಡೆದಾಡುವ ಆಸೆ ನನ್ನದು. ಸೀತಾಕುಂಡ ಪರ್ವತವನ್ನೇರಬೇಕೆಂಬುದು ನನ್ನ ಮಹದಾಸೆ. ಬಿಹಾರದ ಸಾಲವನಕ್ಕೆ ಹೋಗಿ ಮಧ್ಯಾಹ್ನವನ್ನೆಲ್ಲ ಅಲ್ಲೆ ಕಳೆಯಬೇಕೆನಿಸುತ್ತದೆ. ಸೈಂಟ್ ಮಾರ್ಟನ್‌ನ ಹತ್ತಿರ ಹೋಗಿ, ಸಮುದ್ರದ ನೀರಿಗಿಳಿದು 'ಗಾಂಗ್‌ಚೀಲ್' (ಒಂದು ಜಾತಿಯ ಸಮುದ್ರ ಹಕ್ಕಿ)ನೊಂದಿಗೆ ಆಟವಾಡುವ ಮನಸ್ಸಾಗುತ್ತಿದೆ. ಅತೀವ ಬೇಸರ ತುಂಬಿದ ಕ್ಷಣಗಳಲ್ಲಿ ಹುಲ್ಲುಗಾವಲಿನ ಮೇಲೆ ಅಡ್ಡಾಗಿಬಿದ್ದು ಆಗಸವನ್ನು ಕಣ್ಣಲ್ಲಿ ತುಂಬಿಕೊಳ್ಳಬೇಕೆನಿಸುತ್ತಿದೆ. ಸಂಸತ್ತಿನ ಯಾವುದಾದರೊಂದು ಮೆಟ್ಟಿಲಿನ ಮೇಲೆ ಒಬ್ಬಳೇ ಕೆಲಹೊತ್ತು ಮೌನವಾಗಿ ಕುಳಿತಿರಬೇಕೆನ್ನಿಸುತ್ತದೆ. ಯಾವುದಾದರೊಂದು ಸಂತಸದ ಸಂಜೆಯಲ್ಲಿ ಯಾವುದಾದರೊಂದು ಮರಕ್ಕೆ ಒರಗಿನಿಂತು ಅಲ್ಲೇ ಆಲಸ್ಯ ತುಂಬಿದವರಂತೆ ಕಳೆಯಬೇಕೆನಿಸುತ್ತದೆ. ಕ್ರೆಸೆಂಟ್ ಲೇಕ್‌ನಲ್ಲಿ ಕಾಲ್ಬಿಟ್ಟು ಸುಮ್ಮನೆ ಕುಳಿತಿರಬೇಕೆನಿಸುತ್ತದೆ. ಶೀತಲಕ್ಷಾ ನದಿಯಲ್ಲೊಮ್ಮೆ ನೌಕಾ ವಿಹಾರ ಮಾಡಬೇಕೆನಿಸುತ್ತದೆ... ನನಗೆ ಚೆನ್ನಾಗಿ ಗೊತ್ತು. ಈ ಎಲ್ಲ ಆಸೆಗಳನ್ನು ನೆರವೇರಿಸ ಹೊರಟರೆ ಜನರು ನನ್ನ ಮೇಲೆ ಕಲ್ಲು ತೂರುತ್ತಾರೆ, ಕ್ಯಾಕರಿಸಿ ಉಗುಳುತ್ತಾರೆ, ಧಿಕ್ಕಾರ ಹಾಕುತ್ತಾರೆ. ನಾನು ಅವಮಾನಿತಳಾಗಬಹುದು, ಬಲಾತ್ಕಾರಕ್ಕೆ ಗುರಿಯಾಗಬಹುದು, ಹುಚ್ಚಿ ಎನ್ನಿಸಿಕೊಳ್ಳಬಹುದು, ನಡತೆಗೆಟ್ಟವಳೆನ್ನಬಹುದು. ಆದರೆ ಇವೆಲ್ಲವನ್ನು ಮಾಡುವ ಪುರುಷನಿಗೆ ಯಾವುದೇ ರೀತಿಯ ವ್ಯಂಗ್ಯಬಾಣದಿಂದ ಘಾಸಿಗೊಳ್ಳುವ ಸಾಧ್ಯತೆಯಿಲ್ಲ'' ('ಔರ್ ಮತ್ ರಖೋ ಅಂಧೇರೆ ಮೇಂ, ದೇಖನೆ ದೊ ಮುಝೆ' – ತಸ್ಲಿಮಾ ನಸರೀನ್ – ಪುಟ ೧೫೨ – ಔರತ : ಉತ್ತರ ಕಥಾ - ಸಂ : ರಾಜೇಂದ್ರ ಯಾದವ-ಅರ್ಚನಾ ವರ್ಮಾ : ರಾಜಕಮಲ ಪ್ರಕಾಶನ, ದಿಲ್ಲಿ -೨೦೦೨).

ಇತ್ತೀಚೆಗೆ ಪೇಜಾವರ ಸದಾಶಿವರಾವ್ ಸ್ಮರಣಾರ್ಥ ನಡೆದ ಕಾರ್ಯಕ್ರಮದಲ್ಲಿ ಕವನ ವಾಚನ ಮಾಡುವ ಸಂದರ್ಭದಲ್ಲಿ ಕವಿ ಜಯಂತ ಕಾಯ್ಕಿಣಿಯವರು – 'ನನ್ನೊಬ್ಬಳು ಫ್ರೆಂಡ್ ಮುಂಬೈಯ ಸೆಕ್ಸ್ ವರ್ಕರ್' ಎನ್ನುತ್ತ 'ಅವಳು ನನಗೆ ಹೇಗೆ ಫ್ರೆಂಡ್ ಅಂತ ಕೇಳಬೇಡಿ' ಎಂದು ಕಣ್ಣು ಮಿಟುಕಿಸುತ್ತ ನಕ್ಕರು.

ಅವರು ಹಾಗಂದುದಕ್ಕೆ ನನಗೇನೂ ಆಕ್ಷೇಪವಿಲ್ಲ. ಆದರೆ ಮಹಿಳೆಯೊಬ್ಬಳು ವೇದಿಕೆಯಲ್ಲಿ ಈ ರೀತಿ ಏನನ್ನಾದರೂ ಹೇಳಿದರೆ ಅದರ ತತ್‌ಕ್ಷಣದ ಪ್ರತಿಕ್ರಿಯೆ ಹಾಗೂ ಸುದೀರ್ಘ ಪ್ರತ್ಯಭಿಜ್ಞಾನ ಎರಡೂ ಹೇಗಿರಬಹುದೆಂಬುದನ್ನು ನೀವು ಊಹಿಸಬಹುದು. ನನ್ನನ್ನೆ ಉದಾಹರಣೆಯಾಗಿ ತೆಗೆದುಕೊಂಡರೆ – ...ಓಹ್... ನಾವು ಇವರನ್ನು ಬಹಳ ಸಾಚಾ ಎಂದು ತಿಳಿದಿದ್ದೆವು... ಚಾಲೂ ಇದ್ದಾರೆ... ಯಾವ ಹುತ್ತದಲ್ಲಿ ಯಾವ ಹಾವು ಇದೆ ಎಂದು ಹೇಳೋದು ಬಲು ಕಷ್ಟ... ಕೇಳುಗರ ಕುತೂಹಲಭರಿತ ಕಿವಿಯ ಜೊತೆ ಕಣ್ಣು ಬಾಯಿಗಳೆಲ್ಲ ಜಾಗೃತವಾದರೆ ವಿಷಯ ನನ್ನ ಕುಟುಂಬದವರೆಗೂ ಹೊರಳಿ ನನ್ನ ಜನ್ಮ ಜಾಲಾಡಿಸುವವರೆಗೂ ಹೋಗಿ ನಿಲ್ಲಬಹುದು.

ಅದೇನೇ ಇರಲಿ, ವೈಯಕ್ತಿಕ ನೆಲೆಯನ್ನು ಬಿಟ್ಟು ಸಾಹಿತ್ಯ ಕ್ಷೇತ್ರದ ಸರ್ವೇ ಮಾಡಿದಾಗಲೂ ಅಲ್ಲಿ ಕಂಡುಬರುವ ಸತ್ಯವಿಷ್ಟೆ: ಪುರುಷರು ಹೇಳುವ ಈ ರೀತಿಯ ಬಿಚ್ಚುಮಾತುಗಳು ಅವರ ಎಂಟೆದೆಯ ಪ್ರತೀಕವಾದರೆ ಮಹಿಳೆ ತನ್ನ ಪರಿಧಿಯನ್ನು ಈ ದಿಸೆಯಲ್ಲಿ ವಿಸ್ತರಿಸಿಕೊಂಡರೆ ಅದು ಲಗಾಮಿಲ್ಲದ ಕುದುರೆಯಾಗುವುದೆಂಬ ಮಾತುಗಳನ್ನು ಇಂದಿಗೂ ಕೇಳುತ್ತೇವೆ. ಇಲ್ಲಿ ಲಗಾಮು ಹಿಡಿಯುವವರು ತಂದೆ, ಅಣ್ಣ, ಗಂಡ ಮುಂತಾದವರು. ಪಾತಿವ್ರತ್ಯ, ಸತೀತ್ವಗಳೆಲ್ಲ ಸ್ತ್ರೀಯ ಆತ್ಮಗೌರವದ ವರ್ಚಸ್ಸುಗಳಾಗಿರದೆ ಎಲ್ಲೋ ಒಂದೆಡೆ ಪುರುಷನ ಅಹಂಕಾರದ ಪ್ರತೀಕಗಳಾಗಿವೆ. ಸಾಕ್ಷಿಯಿಲ್ಲದೆ ಸಮಾಧಿಯಾಗಿ ಹೋದ ರೂಪಾ ಕನ್ವರ್‌ಳ 'ಸತಿ-ಬದುಕು' ಪುರುಷ ಪ್ರಧಾನ ವ್ಯವಸ್ಥೆಯ ಬೀಭತ್ಸಕ್ಕೆ ಹಿಡಿದ ಕನ್ನಡಿ.

ಕಾರ್ಕಳ ತಾಲೂಕಿನಲ್ಲಿ ಅಪ್ರಾಪ್ತವಯಸ್ಕ ಬಾಲಕಿಯ ಮೇಲೆ ಅವಳ ತಂದೆಯೇ ಅತ್ಯಾಚಾರ ಮಾಡುತ್ತಿದ್ದ ವರದಿಯನ್ನು ಇತ್ತೀಚೆಗೆ ಯಾವುದೋ ದೈನಿಕದಲ್ಲಿ ಓದಿದ್ದೆ. ಬಾಲಕಿಯ ತಾಯಿ ಪ್ರತಿಭಟಿಸಿ ಪೊಲೀಸರಿಗೆ ದೂರು ನೀಡಿದ್ದಳು. ಆ ತಂದೆಗೆ ಶಿಕ್ಷೆಯಾಗುವುದೋ ಇಲ್ಲವೋ ಗೊತ್ತಿಲ್ಲ. ಅಥವಾ ಹೆಂಡತಿ ಯಾವಾಗಲೂ ರೋಗಿಷ್ಠೆಯಾಗಿ ಹಾಸಿಗೆ ಹಿಡಿದರೆ ಆ ಗಂಡಸಾದ್ರೂ, ಪಾಪ ಏನ್ ಮಾಡಬೇಕು ?... ಎನ್ನುವ ಉದಾರವಾದಿ ಮಾತುಗಳು ಕೇಳಿಬಂದರೂ ಈ ಸಾಮಾಜಿಕ ವ್ಯವಸ್ಥೆಯಲ್ಲಿ ಆಶ್ಚರ್ಯಪಡಬೇಕಾಗಿಲ್ಲ.

ಇದನ್ನೇ ಹೋಲುವ ಒಂದು ಪ್ರಸಂಗ ಬಾಂದಾ ಜಿಲ್ಲೆಯಲ್ಲಿ ನಡೆದಿತ್ತು. ಹನ್ನೊಂದು ವರ್ಷದ ಹುಡುಗಿಯ ಮೇಲೆ ಅವಳ ತಂದೆ ನಿರಂತರವಾಗಿ ಅತ್ಯಾಚಾರ ಮಾಡುತ್ತಿರುವುದನ್ನು ಪ್ರತಿಭಟಿಸಿ ಅವಳ ತಾಯಿ ವಿಷಯವನ್ನು ಪೊಲೀಸ್ ಠಾಣೆಗೆ ಒಯ್ದಾಗ ಊರ ಹಿರಿಯರಿಂದ ಬಂದ ವಿಶ್ಲೇಷಣೆ – 'ನಾಲ್ಕು ಗೋಡೆಗಳ ಮಧ್ಯದ ವಿಚಾರವನ್ನು ನಡುಬೀದಿಗೆ ಯಾಕೆ ತರ್ತೀರಿ ?' ಮಹಿಳಾ ಸಂಘಟನೆಗಳು ಕ್ರಿಯಾಶೀಲವಾದಾಗ ಊರಿನ ದಾದಾಗಳು ಅಂದದ್ದು – 'ದಿಲ್ಲಿಕೀ ರಂಡಿಯೋಂನೆ ಆಕಾರ್ ಹಮಾರೆ ಗಾಂವ್‌ಕೀ ಇಜ್ಜತ್ ಕೀ ನೀಲಾಮಿ ಕೀ...'

ವೈಯಕ್ತಿಕ ನೆಲೆಯನ್ನು ಬಿಟ್ಟು ಸಾಹಿತ್ಯ ಕ್ಷೇತ್ರದ ಸರ್ವೇ ಮಾಡಿದಾಗಲೂ ಅಲ್ಲಿ ಕಂಡುಬರುವ ಸತ್ಯವಿಷ್ಟೆ: ಪುರುಷರು ಹೇಳುವ ಈ ರೀತಿಯ ಬಿಚ್ಚುಮಾತುಗಳು ಅವರ ಎಂಟೆದೆಯ ಪ್ರತೀಕವಾದರೆ ಮಹಿಳೆ ತನ್ನ ಪರಿಧಿಯನ್ನು ಈ ದಿಸೆಯಲ್ಲಿ ವಿಸ್ತರಿಸಿಕೊಂಡರೆ ಅದು ಲಗಾಮಿಲ್ಲದ ಕುದುರೆಯಾಗುವುದೆಂಬ ಮಾತುಗಳನ್ನು ಇಂದಿಗೂ ಕೇಳುತ್ತೇವೆ. ಇಲ್ಲಿ ಲಗಾಮು ಹಿಡಿಯುವವರು ತಂದೆ, ಅಣ್ಣ, ಗಂಡ ಮುಂತಾದವರು. ಪಾತಿವ್ರತ್ಯ, ಸತೀತ್ವಗಳೆಲ್ಲ ಸ್ತ್ರೀಯ ಆತ್ಮಗೌರವದ ವರ್ಚಸ್ಸುಗಳಾಗಿರದೆ ಎಲ್ಲೋ ಒಂದೆಡೆ ಪುರುಷನ ಅಹಂಕಾರದ ಪ್ರತೀಕಗಳಾಗಿವೆ. ಸಾಕ್ಷಿಯಿಲ್ಲದೆ ಸಮಾಧಿಯಾಗಿ ಹೋದ ರೂಪಾ ಕನ್ವರ್‌ಳ 'ಸತಿ–ಬದುಕು' ಪುರುಷ ಪ್ರಧಾನ ವ್ಯವಸ್ಥೆಯ ಬೀಭತ್ಸಕ್ಕೆ ಹಿಡಿದ ಕನ್ನಡಿ.

ಸಮಾಜದಲ್ಲಿ ಪ್ರಚಲಿತವಾಗಿರುವ ಬೈಗುಳನ್ನು ನೋಡಿದರೆ, ಅವೆಲ್ಲವೂ ಪುರುಷರಿಗೆ ಬೈಯುವಂಥವುಗಳಾಗಿದ್ದರೂ ಸ್ತ್ರೀವಾಚಿ ಶಬ್ದರೂಪಗಳನ್ನೇ ಅಲ್ಲಿ ಕಾಣುತ್ತೇವೆ. ಉದಾ : ಬೋಳಿಮಗ, ಸೂಳೆಮಗ, ಬಡ್ಡಿಮಗ, ರಂಡೆಮಗ, ತಾಯ್ಗಂಡ, ಮಿಂಡ, ಹಾದರಕ್ಕೆ ಹುಟ್ಟಿದೋನು... ಇತ್ಯಾದಿ.

ಮರಾಠಿಯ 'ಸ್ತ್ರೀ ರಾಮಾಯಣ'ವೆಂಬ ಜನಪದೀಯ ಕಾವ್ಯದಲ್ಲಿ ರಾಮನ ಬಗ್ಗೆ ಒಂದು ಮಾತು ಬರುತ್ತದಂತೆ – 'ರಾಮ ಹಲಕ್ಯಾ ಕಾನಾಂಚಾ, ಹಲಕ್ಯಾ ಮನಾಚಾ' (ರಾಮನು ಹಿತ್ತಾಳೆ ಕಿವಿಯವನು ಹಾಗೂ ದುರ್ಬಲ ಮನಸ್ಸಿನವನು). ಸೀತಾ ಪರಿತ್ಯಾಗದ ಕುರಿತಾಗಿ ಇದು ಜನಪದೀಯರ ಪ್ರತಿಭಟನೆಯಾಗಿದೆ.

ಬಹಳ ಸಲೀಸಾಗಿ ಒಂದು ಮಾತು ಕೇಳಿಬರುವುದುಂಟು. – ಅವಳ ಹತ್ತಿರ ನಮಗೇನು ಮಾತು ? ಅವಳು ಎಲ್ಲವನ್ನೂ ಬಿಟ್ಟವಳು. ಇಲ್ಲಿ, ಎಲ್ಲವನ್ನೂ ಬಿಡುವುದೆಂದರೆ ಸರ್ವಸಂಗ ಪರಿತ್ಯಾಗದ ಗರಿಮೆಯಲ್ಲ; ಎಲ್ಲವನ್ನೂ ಬಿಡುವುದೆಂದರೆ ನಡತೆಗೆಟ್ಟವಳೆಂಬ ಅಪವಾದಕ್ಕೆ ಗುರಿಯಾಗುವುದು –

ಇದು ನೈತಿಕತೆಗೆ ಸಂಬಂಧಿಸಿದ್ದು. ಹಾಗಾದರೆ ನೈತಿಕತೆಯೆಂದರೇನು ?

ಸಮಾಜಶಾಸ್ತ್ರೀಯ ವ್ಯಾಖ್ಯೆಯಲ್ಲಿ – ''ನೀತಿ ಅಥವಾ ನೈತಿಕತೆ ಎಂಬುದು ವಾಸ್ತವಿಕವಾಗಿ ನಡತೆಯ ನಿಯಮಗಳಿಗೆ ಸಂಬಂಧಿಸಿದ್ದಾಗಿದ್ದು ಅಪೇಕ್ಷಣೀಯವಾದ ನಡತೆಯ ಕ್ರಮಗಳನ್ನು ವಿಧಿಸುವುದು ಮತ್ತು ಅನಪೇಕ್ಷಣೀಯವಾದ ಕ್ರಮಗಳನ್ನು ನಿಷೇಧಿಸುವುದು. ನೈತಿಕ ಮೌಲ್ಯಗಳಂತೂ ನಮ್ಮ ನಡತೆಯ ಯುಕ್ತಾಯುಕ್ತತೆಯನ್ನು ತೂಗಿನೋಡುವ ಮಾನಕಗಳಿದ್ದಂತೆ. ಎಲ್ಲಾ ಮಾನವ ಕ್ರಿಯೆಗಳ, ಉದ್ಯಮಗಳ, ವ್ಯಾಪಾರ-ವ್ಯವಹಾರಗಳ, ಸಾಹಸ ಸಾಧನೆಗಳ ಹಿಂದೆಯೂ ನೈತಿಕ ಮೌಲ್ಯಗಳ ಕ್ರಿಯಾತ್ಮಕ ಪಾತ್ರವಿರುವುದನ್ನು ಗುರುತಿಸಬಹುದು. ನಮ್ಮ ನಿತ್ಯ ವ್ಯವಹಾರದಲ್ಲಿ ಬಳಕೆಯಲ್ಲಿರುವ ನ್ಯಾಯ, ಸತ್ಯ, ಋಜುತ್ವ, ಪ್ರಾಮಾಣಿಕತೆ, ನಿಸ್ಪೃಹತೆ, ತ್ಯಾಗಪರತೆ, ಧರ್ಮನಿಷ್ಠತೆ, ಪಕ್ಷಪಾತರಹಿತತೆ, ಸ್ವಾತಂತ್ರ್ಯ, ಕರುಣೆ ಮುಂತಾದ ಕಲ್ಪನೆಗಳು ನೈತಿಕ ಸ್ವರೂಪದಲ್ಲಿದ್ದು ನೈತಿಕ ಮೌಲ್ಯಗಳನ್ನು ಪ್ರತಿಬಿಂಬಿಸುತ್ತವೆ. ನಮ್ಮ ನಡತೆಯನ್ನು ನಿರ್ದೇಶಿಸುವ ಹಾಗೂ ನಿಯಂತ್ರಿಸುವ ಅಪಾರಶಕ್ತಿ ಇವುಗಳಿಗಿವೆ.'' (*ಸಮಾಜಶಾಸ್ತ್ರದ ಕಿರು ವಿಶ್ವಕೋಶ – ಚ. ನ. ಶಂಕರರಾವ್ – ಪುಟ ೫೨೨ ಜೈಭಾರತ ಪ್ರಕಾಶನ, ಮಂಗಳೂರು - ೨೦೦೧*)

ಈ ಮೇಲಿನ ನೀತಿ, ನಿಯಮ, ನಡವಳಿಕೆಗಳ ಕುರಿತು ಮಾತನಾಡುವುದಾದರೆ ಇವೆಲ್ಲವೂ ಸ್ತ್ರೀ-ಪುರುಷರಿಗೆ ಸಮಾನವಾಗಿರಬೇಕು. ಕಾನೂನಿನ ರೀತ್ಯಾ ಸ್ತ್ರೀ ಪುರುಷರು ಸಮಾನರೆಂದಾದರೆ ಹುಟ್ಟಿನಿಂದ ಸಾಯುವವರೆಗೆ ಬಾಳಬೇಕಾದ ಸಮಾಜದಲ್ಲಿ ತರತಮ ಯಾಕೆ ? ವ್ಯಕ್ತಿಸತ್ವವನ್ನೇ ಸಮಷ್ಟಿ ಸತ್ವವೆಂದು ನಂಬುವುದಾದರೆ ಮಹಿಳಾವಾದಿಗಳ ತಾತ್ವಿಕತೆ – "Personal is political" ಎಂಬುದನ್ನು ನಂಬಲೇಬೇಕಾಗುತ್ತದೆ.

ಇಲ್ಲಿ ಎದುರಾಗುವ ಪ್ರಶ್ನೆ – ಸ್ತ್ರೀ ಸ್ವಾತಂತ್ರ್ಯವು ಸ್ವಚ್ಛಂದತೆಯೆಡೆಗೆ ಹೊರಳುತ್ತಿದೆಯೆ ? ಹೊರಳಿದರೆ ತಪ್ಪೇನು ? ಧರ್ಮದಲ್ಲಿ ಯಾವುದು ಅಶ್ಲೀಲವಾಗುವುದಿಲ್ಲವೋ, ಅದು ಪುರುಷರಿಂದ ರಚಿತವಾದ ಸಾಹಿತ್ಯದಲ್ಲಿ ಬಂದರೆ ಓದಿಸಿಕೊಂಡು ಹೋಗುವಂತಾಗುತ್ತದೆ. ಅದೇ ಮಹಿಳೆಯರ ಬರವಣಿಗೆಯಲ್ಲಿ ಬಂದರೆ 'ಅಬ್ಬಬ್ಬಾ... ಇಷ್ಟಕ್ಕೆ ಇಳಿದುಬಿಟ್ಟರಾ ?' – ಎನ್ನುವಂತಾಗುವುದು ಯಾಕೆ ? ಹಾಗಿದ್ದರೆ ಶ್ಲೀಲ-ಅಶ್ಲೀಲವೆಂಬುದು ಪುರುಷವಾದಿ ದೃಷ್ಟಿಕೋನ ಎಂದಾಯಿತಲ್ಲವೆ ?

''ಕಮಲಾಕುಚ ಚೂಚುಕ ಕುಂಕುಮ ಲೇಪನ...'' ದಲ್ಲಿ ಅಶ್ಲೀಲತೆಯಲ್ಲದ್ದು, 'ಸಂಸ್ಕಾರ'ದ ಚಂದ್ರಿ – ನಾರಣಪ್ಪರ ಸಮಾಗಮದಲ್ಲಿ ಅಶ್ಲೀಲವೆನಿಸದ್ದು, 'ಅವಸ್ಥೆ'ಯ ಕೃಷ್ಣೇಗೌಡರ ಪ್ರಸಂಗದಲ್ಲಿ ಸಾಹಿತ್ಯಕ್ಕೆ ಸಹಜವಾಗಿ ಒಗ್ಗಿಕೊಳ್ಳುವಂತಹದು, 'ಸೌಗಂಧಿಯ ಸ್ವಗತ'ಕ್ಕೆ ಬರುವಾಗ ಇರುಸು-ಮುರುಸಾಗುವುದೇಕೆ ? ತಾಯಿಯಾಗಲಿರುವ ಮಹಿಳೆಗೆ ಮಹಿಳಾ/ಪುರುಷ ಡಾಕ್ಟರರು ಬಿಡಿಸಿಹೇಳುವ ಕಿವಿಮಾತುಗಳು ನಮಗೆಂದೂ ಅಶ್ಲೀಲವೆನಿಸುವುದಿಲ್ಲ. ಹಾಗಿದ್ದರೆ ಅಶ್ಲೀಲತೆಯ ವ್ಯಾಖ್ಯೆಯೇನು ? ಕಾಮಸಂಬಂಧಗಳ ಬಗ್ಗೆ, ಅಕ್ರಮ ಸಂಬಂಧಗಳ ಬಗ್ಗೆ ಮಹಿಳೆಯರು ಬರೆದರೆ ಅವು ನೈತಿಕತೆಯ ಗೆರೆ ದಾಟಿದ ಸ್ವಚ್ಛಂದ ಬರಹಗಳಾಗಿ ಕಾಣುವುದಾದರೆ ಸನಾತನತೆ ಬೇರೂರಿಬಿಟ್ಟಿದೆ ಎಂದಾಯಿತಲ್ಲವೆ ?

ಸಮಾಜದಲ್ಲಿ ಪುರುಷರಿಗೆ ಏನನ್ನಾದರೂ ಮಾಡುವ ಹಕ್ಕಿದೆ; ಹಾಗಾಗಿ ಅವರಿಗೆ ಏನನ್ನಾದರೂ ಹೇಳುವ/ಬರೆಯುವ ಹಕ್ಕಿದೆ ಎಂದಂತಾಯಿತು. ಉದಾ : ''ಹೆಣ್ಣಿನ ಉಪಯೋಗ ಕೇವಲ ಎರಡು. ಆಕೆ ಭೋಗಿಸಲು ಮತ್ತು ಹೆರಲು ಮಾತ್ರವೇ ಇರುವ ವಸ್ತು. ಹೆರದ ಹೆಣ್ಣು ಹೆಣ್ಣಲ್ಲ....'' (*ನಂದಾದೀಪ ಅಂಕಣ ಬರಹ-ಬನ್ನಂಜೆ ಗೋವಿಂದಾಚಾರ್ಯ 'ಉದಯವಾಣಿ' ೧೫.೩.೦೪*) ಹೆಂಗಸರಿಗೆ ಮಾನಮರ್ಯಾದೆಯ ಭಯ ಹುಟ್ಟಿಸಿ ಏನನ್ನೇ ಹೇಳುವುದಕ್ಕೂ ಹತ್ತುಬಾರಿ ಯೋಚಿಸಿಯೂ ಹೇಳಲು ಮುಜುಗರಪಟ್ಟುಕೊಳ್ಳುವ ಸ್ಥಿತಿ. ಹಾಗಾಗಿ ಅವಳ ಪಾಲಿಗುಳಿದಿರುವುದು ಸಮಾಜಸಾಪೇಕ್ಷ ಬರಹ. ಇನ್ನು ಚಿಂತನೆಯಲ್ಲಿ ಹೊಸತನವಿಲ್ಲವೆಂದಾದರೆ ವಿಮರ್ಶಕರು ಸುತ್ತಿಬಳಸಿ ಹೇಳಿಯೇಬಿಡುತ್ತಾರೆ. ಇವರಿಗೆ ಅಡುಗೆಮನೆಯ ಸೀಮಿತ ಜಗತ್ತಿನಲ್ಲಿ ಕಾರು, ಬಂಗ್ಲೆ, ರೆಡಿಮೇಡ್ ಮಾವನ ಮಗನನ್ನು ಬಿಟ್ಟರೆ ಇನ್ನೇನನ್ನೂ ಹೊಸೆಯುವುದಕ್ಕಾಗುವುದಿಲ್ಲ, ಎಂದು.

ಮಹಿಳೆಯರಾಗಲಿ, ಮಹನೀಯರಾಗಲಿ ಗುರಿಮುಟ್ಟುವ ಮಾರ್ಗವನ್ನು ನಡೆದೇ ಕ್ರಮಿಸಬೇಕೇ ಹೊರತು 'ಭಾರತೀಪುರ'ದ ಜಗನ್ನಾಥನ ಹಾಗೆ ಜಿಗಿದುಕೊಂಡಲ್ಲವಲ್ಲ! ಸಾಧನೆಯ ಹಾದಿಯಲ್ಲಿ ಸ್ತ್ರೀ ಪುರುಷರಿಬ್ಬರದು ಭಿನ್ನವಾದ ಹೆಜ್ಜೆಗುರುತು ಎಂಬುದನ್ನು ಮರೆಯುವಂತಿಲ್ಲ. ಹಾಗಂತ ಅವರಿಬ್ಬರು ಪೂರ್ವ-ಪಶ್ಚಿಮರಾಗಿ ಅದರ ದುರ್ಲಾಭವನ್ನು ಬಂಡವಾಳಶಾಹಿ ವ್ಯವಸ್ಥೆ ಕಬಳಿಸುವಂತಾಗಬಾರದು. ಮಾನವೀಯ ಸಂಬಂಧಗಳ ಸಾರ್ಥಕತೆಯಿರುವುದು ಬೆಚ್ಚಗಿನ ಮನೆಯಲ್ಲಿ ಮಾತ್ರ.

ಮಹಿಳಾ ಸಾಹಿತ್ಯದಲ್ಲಿ ವಿದೇಶಿ ಪ್ರಭಾವ ಅನಿವಾರ್ಯವೆ ? ಎಂಬ ಪ್ರಶ್ನೆಗೆ, ಯಾಕೆ ಅನಿವಾರ್ಯವಲ್ಲ? ಎಂಬ ತಾರ್ಕಿಕತೆ ನನ್ನದು.

ಈ ಮಾತುಗಳನ್ನು ಹೇಳುವಾಗಲೂ ನನಗೆ ಅದರ ಇನ್ನೊಂದು ಅಪಾಯಕಾರಿ ಮಗ್ಗುಲಾದ 'ದೇಹದ ಭೋಗವಾದ ಹಾಗೂ ಸೌಂದರ್ಯದ ಔದ್ಯೋಗೀಕರಣ'ದ ಅಪಾಯದ ಅರಿವಿದೆ. ಭಾರತೀಯ ಸುಂದರಿಯರಿಗಿಂತ ಸಾವಿರ ಪಾಲು ಸುಂದರಿಯರು ವಿಶ್ವದಲ್ಲಿ/ಭುವನದಲ್ಲಿ ಇದ್ದಾರೆಂಬ ಕಟುಸತ್ಯದ ಅರಿವೂ ನನಗಿದೆ. ಆದರೆ ಅಭಿವೃದ್ಧಿಶೀಲ ರಾಷ್ಟ್ರದ ಲಕ್ಷಾಂತರ ಮುಗ್ಧೆಯರಿಗೆ ಶಾಂಪು, ಸೋಪು, ಪಾಂಡ್ಸ್, ಫೇರ್ ಆ್ಯಂಡ್ ಲವ್ಲಿಯ ಬಣ್ಣದ ಕನಸುಗಳನ್ನು ಮಾರಲು ಬಹುರಾಷ್ಟ್ರೀಯ ಕಂಪನಿಗಳಿಗೆ ಮೋಹಕ ನಗೆಯವರು ಇಂಡಿಯಾದಲ್ಲೇ ಸಿಕ್ಕಿಬಿಟ್ಟರೆ ಕೋಟಿಗಟ್ಟಲೆ ಹಣವನ್ನು ಇಲ್ಲಿಯೇ ಬಾಚಬಹುದಲ್ಲ! ಅದಕ್ಕಾಗಿಯೇ ತಂಡಾ ಮತಲಬ ಎಂದಾಗ ಒಕ್ಕೊರಲಿನಿಂದ ಹೇಳಬೇಕು, 'ಕೋಕಾಕೋಲ !'

'ಮುಟ್ಠಿಭರ ಆಸಮಾನ್' ಎಂಬ ಧಾರಾವಾಹಿಯೊಂದು ಸ್ತ್ರೀವಾದಿ ನೆಲೆಯಲ್ಲಿ ನನ್ನನ್ನು ಬಹಳ ಕಾಡಿತ್ತು. ಕೇವಲ ಧಾರಾವಾಹಿಯಾಗಿದ್ದರೆ ಇಲ್ಲಿ ಪ್ರಸ್ತಾಪಿಸುತ್ತಿರಲಿಲ್ಲ. ಈ ಧಾರಾವಾಹಿ ಕಾದಂಬರಿಯೊಂದರ ಆಧಾರಿತ.

## ನಲ್ಲೆಗೆ

ಮತ್ತೆ ಮಳೆ ಹುಯ್ಯುತಿದೆ; ಎಲ್ಲ ನೆನಪಾಗುತಿದೆ
ನೀನು ಅಲ್ಲಿರಲಿಲ್ಲ, ನಿನ್ನ ಗಂಧವಿತ್ತು.

ಚಂದ್ರನಿಗೆ ಬೇಗೆಯನು ಸೂರ್ಯನಿಗೆ ತಂಪನ್ನು
ನನ್ನೊಳಗೆ ನಿನ್ನನ್ನು ತಂದಂಥ ಗಳಿಗೆಯಿತ್ತು.

ಸುಳಿವ ಗಾಳಿಯಲಿಷ್ಟು ನೆಮ್ಮದಿಯ ಸೆಳೆಯಿಲ್ಲ
ನೀನಕ್ಕ ನಗುವಿನಲಿ ಇನಿತು ವಿಷವಿಲ್ಲ.

ಒಮ್ಮೆ ನೋಡಿದರೆ ಸಾಕು, ನಿನ್ನ ಸೇರಿದರೆ ಸಾಕು
ದೂರದಾಸೆಗಳಿಲ್ಲ ಬಂದುಬಿಡು ಗೆಳತಿ.

ಒಲುಮೆ ಗಿಲುಮೆಯ ಮಾತು ಅಲ್ಲಿರಲಿ ಈಗ
ನೀ ಹೆಣ್ಣು – ನಾ ಗಂಡು ಅಷ್ಟೆ ಸಾಕು.

ಕವಿಯ ಪಲ್ಲವಿ ಬೇಡ, ಜನದ ಜೋಗುಳ ಬೇಡ
ಒಂದೆ ಬೊಗಸೆಗೆ ಸಾಕು ನಿನ್ನ ಪ್ರೀತಿ.

ಡಾ. ಎಸ್. ಪ್ರಸಾದಸ್ವಾಮಿ
ಮುಖ್ಯಸ್ಥರು, ಕನ್ನಡ ವಿಭಾಗ, ಸರ್.ಎಂ.ವಿ. ಸರ್ಕಾರಿ
ವಿಜ್ಞಾನ ಕಾಲೇಜು, ಭದ್ರಾವತಿ - ೫೭೭ ೩೦೨

# ಹೀಗೊಂದು ಮರದ ವೃತ್ತಾಂತ



ನನ್ನಜ್ಜಿ ಅಪ್ಪ ಚಿಕ್ಕವರಿದ್ದಾಗ ಇದ ಚಳ್ಳಾರಿ ಮರದಾಗ ಗಿಡಮಂಗ್ಯಾನ ಆಟ ಆಡ್ತಿದ್ರಂತ, ಈಗ ಊರಾಗಿಂದ ಮಂಗ್ಯಾನ ಮಾಯ ಆಗ್ಯಾವು, ಈ ಕಿರಿಕೆಟ್ಟು, ಟಿ.ವಿ. ಹಾವಳ್ಯಾಗ ನಮ್ಮ ಹಳ್ಳಿ ಎಲ್ಲಿ ನೋಡಾಕ ಸಿಗ್ತಾವ್ ?

ನಮ್ಮಜ್ಜ ಮಾತ್ನ ನಂಬೋದಾದ್ರ ಸರಿಸುಮಾರು ಆರು ತಲೆಮಾರುಗಳನ್ನು ಕಂಡ, ಅಂಕುಡೊಂಕಾದ, ಗಂಟು ಟೊಂಗೆಯುಳ್ಳ, ದಪ್ಪ ತೊಗಟೆಯ ಈ ಚಳ್ಳಾರಿ ಮರ ಊರವರಿಗೂ ಕೂಡ ಯೋಗ್ಯವಲ್ಲ. ಆದ್ರೂ ಊರ ಮಧ್ಯದೊಳಗ ಇನ್ನು ಜೀವಂತ ಇರಾಕ ಕಾರಣ ಉಪ್ಪಿನ ಕಾಯಿಗಾಗಿ ಬಳಸುವ ಆದರ ಕಾಯಿ.

ಬ್ಯಾಸಿಗಿ ಆರಂಭ ಆಗೋದ್ರಾಗ ತನ್ನ ಎಲೆಗಳನ್ನೆಲ್ಲಾ ಉದ್ರಿಸ್ಕೊಂಡು ಅಸ್ಥಿಪಂಜರವಾಗುವ ಮರದಲ್ಲಿ ಕ್ರಮೇಣ ಚವಳಿ ಹೂವಿನಂತಹ ಚಿಕ್ಕ ಹೂಗೊಂಚಲು ಕಾಣಿಸಿಕೊಳ್ಳುತ್ತವೆ. ಕ್ರಮೇಣ ದ್ರಾಕ್ಷಿಹಣ್ಣಿನಂತೆ ಕಡುಗಪ್ಪಿನ ಕಾಯಿ ಚಿಗುರೆಲೆ ಕಾಣಿಸಿಕೊಳ್ಳುತ್ತದೆ. ಈ ಹೊತ್ತಿಗಾಗಲೇ ಹೆಣ್ಣು ಮಕ್ಕಳ ಬಾಯಿಂದ ಬಾಯಿಗೆ ಈ ಮರ ಕಾಯಿಬಿಟ್ಟ ಸುದ್ದಿ ಊರಿಗೆಲ್ಲ ತಿಳಿದಿರುತ್ತದೆ.

ಗಾಳಿಪಟ, ಹರಿದ ಪುಸ್ತಕಗಳ ದುರಸ್ತಿಗೆ ಬೇಕಾದ ಅಂಟಿಗೆ ಗೋಲಿಗಳಂತೆ ಆಡಲು ಚಳ್ಳಾರಿ ಕಾಯಿಗಳನ್ನು ಹರಿದುಕೊಳ್ಳಲು ಮಕ್ಕಳು ಆಗಾಗ ಗಿಡಗಳಿಗೆ ಮುತ್ತಿಗೆ ಹಾಕುವುದುಂಟು. ಆದ್ರ ಓಣಿಯಲ್ಲಿನ ಹೆಣ್ಮಕ್ಕಳು ಯಾರು ನೇಮಿಸದ ಗಾರ್ಡುಗಳಿದ್ದಂತೆ ಇವುಗಳನ್ನ ರಕ್ಷಣೆ ಮಾಡ್ತಾರೆ.

ಕಾಯಿಗಳು ಒಂದು ನಿರ್ದಿಷ್ಟ ಹಂತಕ್ಕೆ ಬಲಿತ ಮೇಲೆ ಊರಿನ ಜನ ತಮ್ಮನೆಯೊಳಗಿನ ಗಡಿಗಿ ಗಾತ್ರಕ್ಕನುಗುಣವಾಗಿ ಇವುಗಳನ್ನು ಹರಿದು ಉಪ್ಪಿನಕಾಯಿ ಹಾಕ್ತಾರೆ. ಹೀಗೆ ಹಾಕಿದ ಉಪ್ಪಿನ ಕಾಯಿಯನ್ನು ಮೂರ್‍ನಾಲ್ಕು ದಿನ ಬಿಸಿಲಲ್ಲಿ ಇಟ್ರೆ ಬಳಕೆಗೆ ರೆಡಿ. ''ಹುಳಿಯೂ ಅಲ್ಲದ - ಸಿಹಿಯೂ ಇಲ್ಲದ'' ವಿಶಿಷ್ಟ ರುಚಿಯ ಈ ಉಪ್ಪಿನಕಾಯಿ ಜೊತೆಗೆ ಇದ್ರ ಎರಡು ರೊಟ್ಟಿ ಜಾಸ್ತಿ ತಿನ್ತಿರಿ ಎನ್ನುವ ಹುಬ್ಬಳ್ಳಿ ಮಲ್ಲವ್ವನ ಮಾತು ನಿಜ ಐತಿ. ಅಂದ ಹಾಗೇ ಗದಗ-ಹುಬ್ಬಳ್ಳಿ-ದಾವಣಗೆರೆಯಲ್ಲಿರುವ ಸಂಬಂಧಿಕರು ಆಗಾಗ ಫೋನಾಯಿಸಿ ಈ ಕಾಯಿಗಳನ್ನ ತರಿಸಿಕೊಂಡಿದ್ದಿದೆ.

ಇನ್ನ ಎಲೆಮರೆಯ ಕಾಯಿಗಳೂ ಜೇನಿನಷ್ಟೇ ಸಿಹಿಯಾದ ಹಣ್ಣುಗಳಾಗುತ್ತವೆ. ಹಕ್ಕಿಗಳಲ್ದೆ, ಮಕ್ಕಳೂ ಇವುಗಳನ್ನ ತಿನ್ನಲು ಮುಗಿಬೀಳ್ತಾರೆ. ಇದೇ ಕಾರಣಕ್ಕೆ ಇರಬೇಕಲ್ವೆ ಈ ಸಮಾಜದಲ್ಲಿ ಉತ್ತಮ ಕೆಲಸ ಮಾಡಿಯೂ ಮಾಡಿಲ್ಲದವರಂತೆ ಇರುವವರನ್ನ ಎಲೆಮರೆಯ ಕಾಯಿ ಎನ್ನುವುದು ?

ದನಾ ಹೊಡ್ಯಾಕ ಒಂದು ನೀಟಾದ ಕೋಲು ದೊರೆಯದ ಈ ಕುರೂಪಿ ಮರ ಶತಮಾನಗಳಿಂದ ಸಾವಿರಾರು ಜನರ ಬಾಯಿಯಲ್ಲಿರುವುದನ್ನು ಕಂಡ್ರ, ಪ್ರತಿಯೊಬ್ಬ ಮನುಷ್ಯ ತನ್ನ ದೌರ್ಬಲ್ಯಗಳನ್ನು ಮರೆತು ಕೆಲಸ ಮಾಡಿದ್ರ ಸತ್ತು ಬದುಕಿದವರ ಸಾಲಿಗೆ ಸೇರಬಹುದು. ಏನು ಹೇಳ್ತೀರಿ ?

ರವಿ. ಸೋ. ದೇವರಡ್ಡಿ
ಹೊನ್ನಹಮ್ಮಿಗಿ - ೫೮೨ ೧೧೮, ಗದಗ ಜಿಲ್ಲೆ

---

ದುಡಿಯುವ ದಂಪತಿಗಳು. ಒಂದು ಚಿಕ್ಕ ಮಗು. ಕೆಲಸದವಳು ಕೈಕೊಟ್ಟರೆ ಯಾರಾದರೊಬ್ಬರು ರಜೆ ಮಾಡಲೇಬೇಕಾದ ಅನಿವಾರ್ಯತೆ. ಆಗೆಲ್ಲ ತಾಯಿಯೇ ರಜೆ ಮಾಡುತ್ತಾಳೆ. ಒಮ್ಮೆ ರಜೆ ಮಾಡಲಾಗದ ತನ್ನ ಅಸಹಾಯಕತೆಯನ್ನು ತೋಡಿಕೊಂಡು ನೀನು ರಜೆ ಮಾಡೆಂದು ಗಂಡನೆಂಬ ಯಜಮಾನನಲ್ಲಿ ಅವಳು ಪರಿಪರಿಯಾಗಿ ಕೇಳಿಕೊಂಡಾಗ ಅವನ ಪ್ರತಿಕ್ರಿಯೆಯಿಷ್ಟೆ, – 'ದಿಸ್ ಈಸ್ ನಾಟ್ ಮೈ ಪ್ರಾಬ್ಲಮ್' – ಹಾಗಿದ್ದರೆ ಇದು ಹೆಣ್ಣೊಬ್ಬಳ ಸಮಸ್ಯೆಯೆ ? ಹಿಂದಿ ಕವಿ ಮುಖೇಶ ಗೌತಮರ ಕವಿತೆಯ ಭಾವಾರ್ಥ ಹೀಗಿದೆ – ''ವಕೀಲರ ಮಧ್ಯಸ್ಥಿಕೆಯಲ್ಲಿ ಅಲ್ಲ ವೆಚ್ಚದಲ್ಲೊಂದು ಮದುವೆ. ಕೊನೆಗೆ ವಿಚ್ಛೇದನಕ್ಕೂ ಬೇಕಾಯ್ತು ಅವರದ್ದೇ ವಕಾಲತ್ತು. ಅದಕ್ಕವರು ಪಡೆದದ್ದು ದುಬಾರಿ ಬೆಲೆ. ಕೇಳಿದ್ದಕ್ಕೆ ವಕೀಲರ ಅಂಬೋಣ – ತೆರಬೇಕು ಹೆಚ್ಚು ಬೆಲೆ ಈ ದೇಶದಲ್ಲಿ ಸ್ವಾತಂತ್ರ್ಯಕ್ಕೆ !''

ಒಂದೆಡೆ ಭೂಮಿಯಲ್ಲಿ ಆಳವಾಗಿ ಬೇರುಬಿಡಲು ತವಕಿಸುವ ಗರ್ಭಾಶಯ, ಇನ್ನೊಂದೆಡೆ ಸ್ವತಂತ್ರ ಅಸ್ತಿತ್ವಕ್ಕಾಗಿ ಹಪಹಪಿಸುವ ಜಾಗೃತ ಮನಸ್ಸು. ದೇಹ-ಮನಸ್ಸುಗಳೆಂಬ ದ್ವೈತದಲ್ಲಿ ಎರಡನ್ನೂ ಬೇರೆ ಬೇರೆಯಾಗಿ ತೃಪ್ತಿಪಡಿಸಲು ಹೊರಟಾಗ ಅವಳಿಗಾಗುವ ಚಡಪಡಿಕೆಗಳನ್ನು ವಿದೇಶಿ ಪ್ರಭಾವವೆನ್ನುತ್ತೀರಾ ?

ಒಂಬತ್ತು ತಿಂಗಳು ತನ್ನ ಗರ್ಭದಲ್ಲಿ ಭ್ರೂಣವನ್ನು ಧರಿಸುವ ನೈಸರ್ಗಿಕ ಸಾಮರ್ಥ್ಯವಿರುವ ಹೆಣ್ಣಿಗೆ ಅದೊಂದು ಜೈವಿಕ ಪ್ರಕ್ರಿಯೆ. ಹೆಣ್ಣು-ಗಂಡಿಗೆ ಇರುವ ಭಿನ್ನತೆಯ ದ್ಯೋತಕ. 'ನಾನು ಅದನ್ನು ಮಾಡಬಲ್ಲೆ, ಇದನ್ನು ಮಾಡಬಲ್ಲೆ' ಎಂದು ಎಷ್ಟೇ ಮೀಸೆ ತಿರುವಿದರೂ ನಾನೂ ಹಡೆದು ತೋರಿಸಬಲ್ಲೆ ಇದೇನು ಮಹಾ... ಎಂದು ಗಂಡಸಿಂದ ಹೇಳಲಿಕ್ಕಾಗದ್ದು !

ಹಿಂದೊಮ್ಮೆ ಮಾತೃತ್ವವು ದೇವತ್ವದ ಸ್ಥಾನದಲ್ಲಿತ್ತು. ವೈಜ್ಞಾನಿಕ ಆವಿಷ್ಕಾರಗಳು ಇಂದಿನ ಹೆಣ್ಣುಗಳು ಹೆರಿಗೆ ಯಂತ್ರಗಳಲ್ಲವೆನ್ನುವುದಕ್ಕೆ ಬಹಳಷ್ಟು ಸಹಕರಿಸಿವೆ. ಪಶ್ಚಿಮದ ಸ್ತ್ರೀವಾದಿಗಳು ಗರ್ಭಪಾತವನ್ನು ಸ್ತ್ರೀ ಸ್ವಾತಂತ್ರ್ಯದ ಮೈಲಿಗಲ್ಲೆಂದು ಸಾರಿದರಾದರೂ ಭಾರತದಲ್ಲಿ ಅದರಿಂದ ಲಾಭ ಪಡೆಯುತ್ತಿರುವವರು ಯಾರು ? ಇಲ್ಲಿದು ಬೇಡಾದ ಹೆಣ್ಣು ಭ್ರೂಣವನ್ನು ಹುಟ್ಟುವ ಮುನ್ನವೆ ಹೊಸಕುವ ಸ್ವಾತಂತ್ರ್ಯವಾಗಿಬಿಟ್ಟಿದೆ. ಹಡೆಯುವುದು ತನಗಲ್ಲ, ತನ್ನ ಹಿತಕ್ಕಾಗಿಯಲ್ಲ, ಗಂಡಸಿಗೆ ಪಿತೃತ್ವದ ಭಾಗ್ಯ ಕರುಣಿಸಲೆಂದು, ಎಂಬ ಕಟುಸತ್ಯ ಅವಳೆದುರು ಧುತ್ತೆಂದು ನಿಂತಾಗ ಶಿಶುವಿನ ಜನನ ಅವಳ ಪಾಲಿಗೆ ಹೆಣ್ತನದ ಪರಮಾವಧಿಯಾಗಿರದೆ ಸಾಮಾಜಿಕ ಜವಾಬ್ದಾರಿಯಾಗಿಬಿಡುತ್ತದೆ.

ಹೆಣ್ಣು ವೈಯಕ್ತಿಕವಾಗಿ ಎಂತಹದೇ ಸಾಧನೆ ಮಾಡಿದರೂ ಒಬ್ಬ ಗೃಹಿಣಿಯಾಗಿ ಅವಳು ಯಶಸ್ಸು ಹೊಂದದೆ ಇದ್ದರೆ ಅವಳ ವೈಯಕ್ತಿಕ ಸಾಧನೆಗೆ ಸಮಾಜ ಕೊಡುವ ಮಾನ್ಯತೆ ಅಷ್ಟಕ್ಕಷ್ಟೆ. ಸ್ತ್ರೀ-ಪುರುಷ ಸಂಬಂಧವನ್ನು ನೀವೆಷ್ಟೇ ಅದ್ವೈತದ ಶಿಖರಕ್ಕೇರಿಸಿದರೂ ಸಾಧನೆಯ ಹಾದಿಯಲ್ಲಿ ಇಬ್ಬರದೂ ಬೇರೆ-ಬೇರೆ ವ್ಯಕ್ತಿತ್ವ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಹೊರಗಡೆ ದುಡಿಯುವುದು, ವೇದಿಕೆಯೇರಿ ಸಮರ್ಥಿಸಿಕೊಳ್ಳುವುದು ಸ್ತ್ರೀ ಸ್ವಾತಂತ್ರ್ಯದ ಪ್ರತೀಕವಲ್ಲ; ಸ್ವಾತಂತ್ರ್ಯವೆಂಬುದು ಆಂತರಿಕವಾಗಿ ಅನುಭವವೇದ್ಯವಾಗುವಂತಹದು. ಉತ್ತಮ ಕೃತಿ ರಚನೆಯಾಗಬೇಕಾದರೆ, ಅನುಭವಗಳು ಅಷ್ಟೇ ಮಹತ್ತರವಾಗಿರಬೇಕೆಂಬುದನ್ನು ಎಲ್ಲರೂ ಒಪ್ಪುತ್ತಾರೆ.

*(ಉಡುಪಿಯಲ್ಲಿ ನಡೆದ 'ಸಂಸ್ಕೃತಿ-ಸ್ತ್ರೀವಾದ- ಸಾಹಿತ್ಯ' ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ)*

ಡಾ॥ ಮಾಧವಿ ಭಂಡಾರಿ
'ಮಂದಾರ', ಪದ್ಮನಾಭನಗರ, ಉಡುಪಿ




# ಕೆ. ಬಿ. ಸಿದ್ದಯ್ಯನವರ ಅನಾತ್ಮದ ಹಾದಿಯಲ್ಲಿ ಒಂದಷ್ಟು ದೂರ



ಎಸ್. ನಟರಾಜ ಬೂದಾಳು

*ನೆಲಸಿರಿ ಪ್ರಕಾಶನ*
*C/o ಡಾ|| ಬಸವರಾಜು*
*ಗಾಂಧಿನಗರ, ತುಮಕೂರು*
*ಬೆಲೆ : 20 ರೂ.*

**ಶ್ರ**ಮಣ ಸಂಸ್ಕೃತಿಯ ಮಹಾಧಾರೆಯೊಂದು ಭಾರತೀಯ ಭಾಷೆಗಳಲ್ಲಿ ಸದಾ ಜೀವಂತವಾಗಿದೆ. ಅನೇಕ ಸ್ಥಿತ್ಯಂತರಗಳ, ರೂಪಾಂತರಗಳ ನಿರಂತರ ಚಲನಶೀಲತೆಯೇ ಗುಣವಾಗಿರುವ ಈ ವಾಹಿನಿಗೆ ಕನ್ನಡ ನೆಲದ ಕೊಡುಗೆ ಧಾರಾಳವಾದುದು. ಮಾರ್ಗ - ದೇಸಿ ಇತ್ಯಾದಿ ಅವಳಿ ವೈರುಧ್ಯಗಳಿಗೆ ಇಲ್ಲಿ ಏನೂ ಕೆಲಸವಿಲ್ಲ. ಈ ಹರಿವಿನ ಅಸ್ತಿತ್ವವಿರುವುದು ಅದು ಪ್ರವಹಿಸುವ ಕ್ರಮದಲ್ಲಿಯೇ ಹೊರತು ಏನನ್ನು ಕೊಂಡೊಯ್ಯುತ್ತಿದೆ ಎನ್ನುವುದರಲ್ಲಲ್ಲ. ಅಲ್ಲಮನ ಒಂದು ವಚನ ಯಾವ ಅರ್ಥ ಅಥವಾ ಯಾವ್ಯಾವ ಅರ್ಥಗಳನ್ನು ಸೂಚಿಸುತ್ತಿದೆ ಎನ್ನುವುದಕ್ಕಿಂತ ಹೇಗೆ ಸೂಚಿಸುತ್ತಿದೆ ಎಂಬುದೇ ಮುಖ್ಯವೆಂಬುದು ಇಲ್ಲಿಯ ಗ್ರಹಿಕೆ. ಅರ್ಥ ಸಾಧ್ಯತೆಗಳನ್ನು ನಿರ್ದಿಷ್ಟತೆಯ ಕಡೆಗೆ ದಬ್ಬುವುದು ನಮ್ಮ ಪರಂಪರೆಯಿಂದ ನಮಗೆ ದಕ್ಕಿರುವ ಒಂದು ರೋಗ. ಇದರ ಅರ್ಥ ಇದು ಅಥವಾ ಇಷ್ಟೊಂದು ಭಿನ್ನ ಭಿನ್ನ ಅರ್ಥಗಳಿದ್ದಾವೆ ಎಂದು ಕಟ್ಟಿಹಾಕುವ ಕ್ರಮ ನಮಗೆ ರೂಢಿಯಾಗಿದೆ. 'ಬುದ್ಧಗುರು ಅಂತಿಮವಾಗಿ ಯಾರಿಗೂ, ಏನನ್ನೂ, ಉಪದೇಶಿಸಲಿಲ್ಲ' – ಎಂಬ ಅರಿವೊಂದಿದೆ. ಅಲ್ಲಮ, ಕುವೆಂಪುರವರದ್ದೂ ಅದೇ ದಾರಿ. ಒಬ್ಬರು ಅಂಗೈಯೊಳಗಿನ ಜ್ಯೋತಿಯ ಹಚ್ಚಿಕೊಂಡರೆ ಇನ್ನೊಬ್ಬರು ಅನಿಕೇತನ ಪ್ರಣತಿಯ ಹಚ್ಚಿಕೊಂಡರು. ಈ ವಿವರಣೆ ಈ ನೆಲದ ಶ್ರಮಣ ಪರಂಪರೆಯೊಡನೆ ಸಂವಾದಿಸಲು ಬೇಕಾದ ಚಲನಶೀಲತೆಯನ್ನು ಒದಗಿಸಿಕೊಡುತ್ತದೆ. ಈ ಮಾರ್ಗದ ಕಾವ್ಯಾನುಸಂಧಾನಕ್ಕೆ ಬೇಕಾದ ಸಿದ್ಧತೆಯೆಂದರೆ ಅದನ್ನು ತಡೆದು ಅರ್ಥೈಸಿಕೊಳ್ಳುವ ಹತಾರಗಳನ್ನು ಒದಗಿಸಿಕೊಳ್ಳುವುದಲ್ಲ; ಬದಲಿಗೆ ಆ ಯಾನದೊಂದಿಗೆ ಸಾಮರಸ್ಯದ ಮಿಳಿತ ಸಾಧಿಸಿಕೊಂಡು ಚಲನಶೀಲತೆಯನ್ನು ಗಳಿಸಿಕೊಳ್ಳುವುದು. ಹಾಗೆಂದ ಮಾತ್ರಕ್ಕೆ ಬೌದ್ಧಿಕ ಸಿದ್ಧತೆಯ ಅಗತ್ಯವೇ ಇಲ್ಲವೆಂದಲ್ಲ, ಆದರೆ ಅದೇ ಒಂದು ತೊಡಕಾಗದಂತೆ ಅದನ್ನು ಚಲನಶೀಲಗೊಳಿಸಿಕೊಳ್ಳಲು ಲೋಕ ಜೀವನದ ಬಗೆಗಿನ ಕರುಣೆ - ಮೈತ್ರಿಯ ಇಂಧನವನ್ನೊದಗಿಸಿಕೊಳ್ಳುವುದು ಅನಿವಾರ್ಯ. ಅದಿಲ್ಲದಿದ್ದರೆ ಚಲನೆ ಸಾಧ್ಯವಾಗದು. ಜೊತೆಗೆ ಇಲ್ಲಿ ಅಂತರ್ಗತವಾಗಿರುವ ತಾತ್ವಿಕ ಅರಾಜಕತೆಗೆ ಇದೊಂದು ಪರಿಹಾರವೂ ಹೌದು.

'ನಾನು ನುಡಿಯಲು ತೆರೆದಿರುವ ಈ ನಾಲಗೆ ನನಗೊಂದು ಮಹಾ ಮಾರ್ಗ. ಈ ತೊದಲು ನುಡಿಯ ಕಾವ್ಯವೆಂಬ ಯಾನಕ್ಕೆ ಹೀಗೆ ಬನ್ನಿ...' ಎಂದು ಈ ಕವಿ ತನ್ನ ನಾಲಗೆಯನ್ನು ಹಾಸಿ ಆಹ್ವಾನಿಸಿದ್ದಾರೆ. ಅಜ್ಞಾನ, ಹಸಿವು, ಅಪಮಾನ ಕವಿಯ ನೋವಿನ ಆಕರಗಳು. ಸಂಕಟದ ಬಿಡುಗಡೆಗಾಗಿ ಹಲವು ದಿಕ್ಕಿಗೆ ಚಾಚಿದ ಕೈ ರಿಕ್ತವೇ. ಅಪರಿಮಿತವಾದ ಹಸಿವು ಮಿತವಾದ ಅನ್ನ; ಮುಟ್ಟಿಯೂ ಮುಟ್ಟದ, ಹಸಿವು ಹಿಂಗಿಸದ ಅಕ್ಷರ, ಅಂಗದ ಅರಿವು ಇರುವವರೆಗೆ ಇದ್ದೇ ಇರುವ ಹುಟ್ಟಿನೊಡನೆಯೇ ಬಂದ ಅಪಮಾನ ಇವುಗಳಿಂದ ಬಿಡುಗಡೆಯಾಗಿ ಕವಿ ಆದಿ ಆಧಾರವಿಲ್ಲದಂದು ಉದಿಸಿ ತನ್ನ ರಕ್ತವನ್ನು ಹೆಪ್ಪು ಹಾಕಿ ಸಮುದ್ರವನ್ನು ನೆಲವಾಗಿಸಿದ ಬಕಾಲನ ಕೇಳಿದ; ಸಚರಾಚರಗಳು ರಚನೆಗೆ ಬಾರದಂದೇ ಉದಯಿಸಿದ ಅಲ್ಲಮನ ಕೇಳಿದ; ಮಹಾಯಾನಿ ಬುದ್ಧಗುರುವನ್ನು ಬೇಡಿದ. ಅವರು ಸಂಕಟಕ್ಕೆ ಕಾರಣವಾಗುವ ಅಂಗಪ್ರಜ್ಞೆಯ ತೊರೆದುಬಿಡು, ತೊರೆದೆನೆಂಬುದ ತೊರೆದುಬಿಡು, ಅಂಗೈಯ ಹಣತೆಯ ಹಚ್ಚಿಕೋ, ನಿನ್ನ ಬೆಳಕಲ್ಲಿ ಕಂಡದ್ದು ನಿನ್ನ ನುಡಿಯಾಗಲಿ, ನಿನ್ನ ತೊದಲು ಮಾತ ನುಡಿದ ನಾಲಗೆ ನಿನಗೆ ಮಾರ್ಗವಾಗಲಿ. ನಾಲಗೆಯ ಮಹಾಮಾರ್ಗದಲ್ಲಿ ಈ ಕಾವ್ಯಯಾನ ನಡೆಯಲಿ...' ಎಂದರು. ಅಂತೆಯೇ ಈ ಕವಿಗೆ ಮಾತೆಂಬುದು ಜ್ಯೋತಿರ್ಲಿಂಗವಾದ ಮಾರ್ಗ.

*ನಾಲಗೆಯನೆ ಹಾಸುವೆ*
*ಬಾರೋ ಬಂಧು ಬಳಗವೆ*
*ಬರಗಾಲಿನ ಉರಿನಾಲಿಗೆ*
*ಮೇಲೆ ಬರಿಗಾಲಲ್ಲಿ ನಡೆದು*
*ಹೇಗೆ ಬಂದೆ ತಂದೆಯೇ ?*
*ತಾಯಿ ಎಲ್ಲಿ ಬಂಧುವೇ ?*
*ಬಂದು ನನ್ನ ಮುಟ್ಟಿ ಹೋಗು*
*ಬಂಧುವೆ*

ಎದುರಿನ ವಸ್ತು ಪ್ರಪಂಚ ಮತ್ತು ಅದನ್ನು ಗ್ರಹಿಸುತ್ತಿರುವ ತಾನು ಈ ಅವಳಿ ವೈರುಧ್ಯಗಳಲ್ಲಿ ಯಾವುದಾದರೊಂದರ ಸ್ವರೂಪದ ಅರಿವು ಸ್ವಯವಾದರೆ ಈ ವೈರುಧ್ಯ ನಿರಸನಗೊಳ್ಳುವುದೆಂಬುದು ಬುದ್ಧ ಅಲ್ಲಮರು ತಿಳಿಸಿಕೊಟ್ಟ ಅರಿವು. ಈ ಅರಿವು ಸ್ವಯವಾಗಬೇಕು. ಕೇವಲ ತತ್ವ ಪರಿಚಾರಿಕೆಯಾಗಬಾರದು. ವಸ್ತು ಪ್ರಪಂಚದ ಸ್ವರೂಪವನ್ನು, ಬೌದ್ಧ ಮಧ್ಯಮ ಮಾರ್ಗದ ಶೂನ್ಯತೆಯು ಸಂಬಂಧಗಳ ನೇಯ್ಗೆಯೆಂದೂ, ಈ ನೇಯ್ಗೆಯು ಯಾವುದೇ ಸ್ವಸ್ವಭಾವವುಳ್ಳ ವಸ್ತುಗಳಿಂದ ರಚಿತವಾದದ್ದಲ್ಲವೆಂದೂ, ಸ್ವಸ್ವಭಾವವಿಲ್ಲದುದರಿಂದ ಸ್ವತಂತ್ರ ವಸ್ತುವೆಂಬುದು ಇಲ್ಲವೆಂದೂ ವಿವರಿಸುತ್ತದೆ. ಈ ಅರಿವು ತನ್ನನ್ನೂ ನಿರ್ವಚಿಸಿ ಕೊಳ್ಳಲು ಸಾಧಕನಿಗೆ ನೆರವಾಗುತ್ತದೆ ಮತ್ತು ಅಂಗಪ್ರಜ್ಞೆಯ ನಿರಸನವೂ ಒಂದೇ ಬಾರಿಗೆ ಸಾಧ್ಯವಾಗುತ್ತದೆ. ಈ ದಾರಿಯಲ್ಲಿ ಅನೇಕಾಂತವಾದದ ಮೂಲಕ ಜೈನ ತಾತ್ವಿಕತೆಯೂ ಬಹಳ ದೂರ ಸಾಗಿದೆ. ಈ ಸ್ವನಿರಸನ ಅನಾತ್ಮದ ದಾರಿ. ಈ

೬೨ನೇ ಪುಟಕ್ಕೆ

ಶ್ರಮಣ ಸಂಸ್ಕೃತಿಯ ಮಹಾಧಾರೆಯೊಂದು ಭಾರತೀಯ ಭಾಷೆಗಳಲ್ಲಿ ಸದಾ ಜೀವಂತವಾಗಿದೆ. ಅನೇಕ ಸ್ಥಿತ್ಯಂತರಗಳ, ರೂಪಾಂತರಗಳ ನಿರಂತರ ಚಲನಶೀಲತೆಯೇ ಗುಣವಾಗಿರುವ ಈ ವಾಹಿನಿಗೆ ಕನ್ನಡ ನೆಲದ ಕೊಡುಗೆ ಧಾರಾಳವಾದುದು. ಮಾರ್ಗ - ದೇಸಿ ಇತ್ಯಾದಿ ಅವಳಿ ವೈರುಧ್ಯಗಳಿಗೆ ಇಲ್ಲಿ ಏನೂ ಕೆಲಸವಿಲ್ಲ. ಈ ಹರಿವಿನ ಅಸ್ತಿತ್ವವಿರುವುದು ಅದು ಪ್ರವಹಿಸುವ ಕ್ರಮದಲ್ಲಿಯೇ ಹೊರತು ಏನನ್ನು ಕೊಂಡೊಯ್ಯುತ್ತಿದೆ ಎನ್ನುವುದರಲ್ಲಲ್ಲ. ಅಲ್ಲಮನ ಒಂದು ವಚನ ಯಾವ ಅರ್ಥ ಅಥವಾ ಯಾವ್ಯಾವ ಅರ್ಥಗಳನ್ನು ಸೂಚಿಸುತ್ತಿದೆ ಎನ್ನುವುದಕ್ಕಿಂತ ಹೇಗೆ ಸೂಚಿಸುತ್ತಿದೆ ಎಂಬುದೇ ಮುಖ್ಯವೆಂಬುದು ಇಲ್ಲಿಯ ಗ್ರಹಿಕೆ.



# ಸ್ನೇಹಕ್ಕೆ ಸ್ನೇಹ ಪ್ರೀತಿಗೆ ಪ್ರೀತಿ

ಜಯದೇವಪ್ಪ ಜೈನಕೇರಿ

**ಸಾ**ಮಾನ್ಯವಾಗಿ ಟೀಕೆ ಮಾಡದ ಅಥವಾ ಟೀಕೆಗೆ ಒಳಗಾಗದ ಮನುಷ್ಯರೇ ಇಲ್ಲ ಎನ್ನಬಹುದು. ಆತ್ಮೀಯ ಸ್ನೇಹಿತರೂ, ಬಂಧುಗಳೂ ಎದುರು ಸಿಕ್ಕಾಗ ಹುಸಿನಗೆಯಿಂದ, ಮಾತಾಡುತ್ತಲೇ ತಮ್ಮೆದುರು ಇಲ್ಲದವರ ಕುರಿತು ಸಲ್ಲದ ಟೀಕೆಗಳನ್ನು ಮಾಡುತ್ತಾರೆ. ಇಂತಹ ಸಂದರ್ಭದಲ್ಲಿ ಇಬ್ಬರೂ ವಿಚಿತ್ರ ರೀತಿಯ ಸಂತೋಷವನ್ನು ಅನುಭವಿಸುತ್ತಾರೆ. ಬೇರೊಬ್ಬರ ಮನ ನೋಯಿಸಲೆಂದೇ ಮಾಡುವ ಟೀಕೆಗಳು ವಾತಾವರಣವನ್ನು ಕೆಡಿಸುತ್ತವೆ. ಟೀಕೆಗಳು ಆರೋಗ್ಯಕರವಾಗಿದ್ದರೆ ಉದಾರಮನಸ್ಸಿನಿಂದ ಸ್ವೀಕರಿಸಿ, ನಮ್ಮಲ್ಲಿರುವ ತಪ್ಪುಗಳನ್ನು ಅರಿತು, ನ್ಯೂನತೆಗಳನ್ನು ಸರಿಪಡಿಸಿಕೊಳ್ಳಬಹುದು. ಅನಾರೋಗ್ಯದ ಟೀಕೆಗಳಿಗೆ ಕಿವಿಕೊಡಬಾರದು. ಮನಸ್ಸಿಗೆ ಕಿರಿಕಿರಿ ಉಂಟುಮಾಡುವ ಟೀಕಾಕಾರರನ್ನು ಆದಷ್ಟು ದೂರ ಇಡಬೇಕು. ಮತ್ತೊಬ್ಬರ ಏಳ್ಗೆಯನ್ನು ಕಂಡು ಕರುಬುವವರು ಎಲ್ಲ ಕಾಲಗಳಲ್ಲಿಯೂ, ಎಲ್ಲ ದೇಶಗಳಲ್ಲಿಯೂ ಇದ್ದಾರೆ. ಅದು ಅವರ ಸಹಜಗುಣವೆಂದು ತಿಳಿದು, ನಮ್ಮ ಕಾರ್ಯದಲ್ಲಿ ನಾವು ಮುಂದುವರಿಯಬೇಕು. ಮತ್ತೊಬ್ಬರಲ್ಲಿಯ ಪ್ರತಿಭೆಯನ್ನು, ಕಲೆಯನ್ನು ಗುರುತಿಸುವ, ಮೆಚ್ಚಿ ಪ್ರತಿಕ್ರಿಯಿಸುವ, ಮನೋಭಾವವನ್ನು ಬೆಳೆಸಿಕೊಳ್ಳಬೇಕು. ತಮ್ಮ ಪಾಡಿಗೆ ತಾವಿರುವವರನ್ನು ಕುರಿತು ಟೀಕೆ ಮಾಡುವವರು ಮಾನಸಿಕ ರೋಗಿಗಳಾಗಿರುವ ಸಾಧ್ಯತೆಗಳಿರುತ್ತವೆ. ಇಂಥವರನ್ನು ಕಂಡೇ ದಾಸರು ''ಆಚಾರವಿಲ್ಲದ ನಾಲಿಗೆ, ನಿನ್ನ ನೀಚ ಬುದ್ಧಿಯ ಬಿಡು ನಾಲಿಗೆ'' ಎಂದಿದ್ದಾರೆ. ತಮ್ಮಲ್ಲಿ ಇರುವ ನ್ಯೂನತೆಗಳತ್ತ ಗಮನಹರಿಸದೆ, ಇನ್ನೊಬ್ಬರಲ್ಲಿರುವ ನ್ಯೂನತೆಗಳ ಕುರಿತು ಸದಾ ಟೀಕಿಸಿ ಸಂತೋಷಪಡುವವರು ನಮ್ಮ ಸುತ್ತ ಇದ್ದಾರೆ. ತಾವೂ ಬೆಳೆಯದೆ ಇತರರನ್ನೂ ಬೆಳೆಯಗೊಡದ ಇಂತಹವರು ಸದಾ ಕುಹಕದ ಮಾತುಗಳನ್ನಾಡುತ್ತಾ ವಿಚಿತ್ರ ತೃಪ್ತಿ ಪಡೆಯುತ್ತಾರೆ. ದಿಡ್ಡೀ ಬಾಗಿಲಿಲ್ಲದ ಊರಲ್ಲಿ, ಕಿಟಕಿ ಬಾಗಿಲಿಲ್ಲದ ಮನೆ ಕಟ್ಟಿ, ಸದ್ಭಾವನೆಗಳನ್ನು ಬಿತ್ತಿ, ಬದುಕನ್ನು ಬೆಳೆದು ಪ್ರೀತಿಯಿಂದ ಬಾಳಬೇಕೆಂಬ ಆಶೆ ಪ್ರತಿಯೊಬ್ಬ ಮನುಷ್ಯನಲ್ಲೂ ಇರುತ್ತದೆ. ಈ ಗುರಿ ಸಾಧಿಸಲು ದ್ವೇಷ ಅಸೂಯೆಗಳಿಂದ ಹೊರಬಂದು, ಬದುಕನ್ನು ಬಂಧನಗಳಿಂದ ಮುಕ್ತಗೊಳಿಸಿ ಜಗತ್ತನ್ನು, ಸಹಜೀವಿಗಳನ್ನು ಬೆರಗುಗಣ್ಣಿನಿಂದ ವೀಕ್ಷಿಸುತ್ತಾ ಬೆಳಕಿಗಾಗಿ ಕಾತರದಿಂದ ನಿರೀಕ್ಷಿಸುವ ಮನಸ್ಸು ಬೇಕಾಗುತ್ತದೆ. ಈ ಬಾಳಿನ ಬೆರಗು ನಿತ್ಯ ನೂತನ ಎಂಬ ಎಚ್ಚರವಿರಬೇಕು. ಬದುಕಿನ ಎಲ್ಲ ಪ್ರಶ್ನೆಗಳಿಗೂ ಉತ್ತರ ಕಂಡುಕೊಳ್ಳಲು ಎಂತಹ ಶ್ರೇಷ್ಠ ಋಷಿಮುನಿಗಳಿಗೂ, ಸಂತರಿಗೂ ಸಾಧ್ಯವಾಗಿಲ್ಲ. ಇಂತಹ ಪ್ರಸಂಗಗಳಲ್ಲಿ ಮೌನವೇ ಶ್ರೇಷ್ಠ ಉತ್ತರ ಎನ್ನುತ್ತಾರೆ ಶ್ರೀರಮಣ ಮಹರ್ಷಿಗಳು. ಮೌನದಲ್ಲಿಯೇ ಈ ಲೋಕದ ಕಷ್ಟಗಳಿಗೆ ಉತ್ತರವಿದೆ. ಎಲ್ಲ ಜನರ, ಎಲ್ಲ ಕಷ್ಟಗಳನ್ನೂ ಬಗೆಹರಿಸಲು ದೇವರಿಂದಲೂ ಸಾಧ್ಯವಿಲ್ಲ. ಎಲ್ಲ ಸಮಸ್ಯೆಗಳೂ ಅರಿವಿನ ಬೆಳಕಿನಲ್ಲಿ ತಮ್ಮಿಂದ ತಾವೇ ಪರಿಹಾರ ಕಂಡುಕೊಳ್ಳುತ್ತವೆ.

ಸಜ್ಜನರೊಡನೆ ಸಲ್ಲಾಪ ಹೆಜ್ಜೇನು ಸವಿದಂತೆ ಎಂಬ ಅನುಭವದ ಮಾತಿದೆ. ಹಾಗೆಯೇ ದುರ್ಜನರ ಸಂಗ ಹೆಜ್ಜೇನು ಕಡಿದಂತೆ ಎನ್ನಬಹುದು. ಸಜ್ಜನರ ಸಹವಾಸದಿಂದ ಕೀಳು ಜನರೂ ಸಜ್ಜನರಾಗುತ್ತಾರೆ, ಎಂಬುದು ನೀತಿ ವಾಕ್ಯ. ಆದರೆ ಪ್ರಸ್ತುತ ಕಾಲಘಟ್ಟದಲ್ಲಿ ಇದಕ್ಕೆ ವಿರುದ್ಧವಾಗಿ, ಕೆಟ್ಟ ಮನುಷ್ಯರನ್ನು ತಿದ್ದಲು ಹೋಗುವ ಸಜ್ಜನರೂ ಕೀಳು ಮನುಷ್ಯರಾಗುವ ಸಾಧ್ಯತೆಗಳೇ ಹೆಚ್ಚಾಗಿ ಕಂಡುಬರುತ್ತಿರುವುದು ಒಂದು ವಿಪರ್ಯಾಸ ಎನ್ನಬಹುದು. ಜೀವನದಲ್ಲಿ ಚೌಕಾಶಿ ಮಾಡುವುದಕ್ಕಿಂತ, ತನ್ನ ಪಾಲಿಗೆ ಬಂದದ್ದನ್ನು ಒಪ್ಪಿಕೊಳ್ಳುವುದರಲ್ಲಿ ಸಾರ್ಥಕತೆ ಇದೆ. ಪ್ರಾಮಾಣಿಕತೆಯಿಂದ ತನಗೆ ಸತ್ಯ ಎನಿಸಿದ್ದನ್ನು, ಇಷ್ಟವಾಗಿದ್ದನ್ನು, ಒಪ್ಪಿಕೊಂಡು ಬಾಳಬೇಕು. ಗುಣಾವಗುಣಗಳ ತಾಳೆಹಾಕಿ ನೋಡಿ ಒಳ್ಳೆಯದನ್ನು ಮಾತ್ರ ಉಳಿಸಿಕೊಳ್ಳಬೇಕು. ಬದುಕು ಭೋರ್ಗರೆವ ಸಮುದ್ರವಾಗುವುದಕ್ಕಿಂತ, ಮೆಲ್ಲಗೆ ಹರಿಯುವ ತೊರೆಯಂತೆ, ತಾನು ಹೋದ ಕಡೆಗಳಲ್ಲೆಲ್ಲಾ ವಿವಾದಗಳ ಸುಳಿಗೆ ಸಿಕ್ಕದೆ, ವೈಚಾರಿಕವಾಗಿ ಚಿಂತಿಸಿ, ತನ್ನ ಪ್ರಾಮಾಣಿಕ ನಿಲುವನ್ನು ತೋರುವ ದಿಟ್ಟತನವನ್ನು ತನ್ನದಾಗಿಸಿಕೊಳ್ಳಬೇಕು.

ಮನುಷ್ಯನ ವ್ಯಕ್ತಿತ್ವ ಮತ್ತು ಸೌಂದರ್ಯ ಪರಸ್ಪರ ಪೂರಕ ಎಂಬ ಮಾತಿದೆ. ಪ್ರತಿಕ್ಷಣವೂ ಹೊಸ ರೂಪ ಪಡೆಯುವ ಕಲೆಯೇ ಸೌಂದರ್ಯ ಎಂದು ಹೇಳಲಾಗುತ್ತದೆ. ಆದರೆ ವ್ಯಕ್ತಿಯ ಸೌಂದರ್ಯ ಅಭಿವ್ಯಕ್ತಗೊಳ್ಳುವುದು, ಆತನಲ್ಲಿರುವ ಕಲೆ ಮತ್ತು ವ್ಯಕ್ತಿತ್ವದಿಂದಲೇ ಎನ್ನಬಹುದು. ಒಬ್ಬನಿಗೆ ಅತ್ಯಂತ ಸುಂದರವಾಗಿ ಕಾಣುವ ರೂಪ, ಮತ್ತೊಬ್ಬರಿಗೆ ಸಾಮಾನ್ಯವೆಂದು ತೋರಬಹುದು. ಸೌಂದರ್ಯ ನೋಡುವವರ ಕಣ್ಣುಗಳಲ್ಲಿರುತ್ತದೆ. ಪ್ರತಿಯೊಂದರಲ್ಲಿ ಸೌಂದರ್ಯವನ್ನು ಕಾಣುವ ಸುಂದರ ಮನಸ್ಸು ಇರಬೇಕಾಗುತ್ತದೆ. ಸೌಂದರ್ಯ ಯಾವುದೇ ವ್ಯಾಖ್ಯೆಗೆ ಸಿಗುವುದಿಲ್ಲ. ಸೌಂದರ್ಯವು ಮನುಷ್ಯನ ವ್ಯಕ್ತಿತ್ವದ ಕನ್ನಡಿ ಎಂಬ ಮಾತಿದೆ. ಸಹೃದಯದ ವ್ಯಕ್ತಿಯ ಮನಸ್ಸಿನ ಅಂತರ್ಯದಲ್ಲಿ ಸೌಂದರ್ಯ ನೆಲೆಸಿರುತ್ತದೆ. ತಮ್ಮ ಮನಸ್ಸಿನ ಆಳಕ್ಕೆ ಇಳಿದು, ತಮ್ಮಲ್ಲಿರುವ ಕೊರತೆಗಳನ್ನು, ವೈರುಧ್ಯಗಳನ್ನು ಸರಿಪಡಿಸಿಕೊಳ್ಳುವ ವ್ಯಕ್ತಿಗಳು ಸುಂದರ ವ್ಯಕ್ತಿತ್ವವನ್ನು ಪಡೆಯುತ್ತಾರೆ. ಇತರರನ್ನು ಟೀಕೆ ಮಾಡುವುದು, ನಿಂದಿಸುವುದು ವ್ಯಕ್ತಿಗೆ ತಾತ್ಕಾಲಿಕ ಸಂತೋಷವನ್ನು ನೀಡಬಹುದು. ಆದರೆ ಇದರಿಂದ ಅವರು ತಮ್ಮ ಕೀಳುಮಟ್ಟದ ಭಾವನೆಯನ್ನು ವ್ಯಕ್ತಪಡಿಸುವುದರ ಜೊತೆಗೆ ತಮ್ಮ ಮನಸ್ಸಿನ ಕುರೂಪವನ್ನು ಹೊರಹಾಕುತ್ತಾರೆ. ಮನಸ್ಸಿನಲ್ಲಿ ವಿಕಾರಕ್ಕೆ ಎಡೆಕೊಡುವುದರಿಂದ ಒತ್ತಡಗಳಿಗೆ ಒಳಗಾಗುತ್ತಾರೆ. ನಮ್ಮ ಯೋಚನೆಗಳು, ಭಾವನೆಗಳು ಸಕಾರಾತ್ಮಕವಾಗಿದ್ದರೆ ನಮ್ಮ ವ್ಯಕ್ತಿತ್ವಕ್ಕೆ ಮೆರಗು ಬರುತ್ತದೆ. ಇದರಿಂದ ವ್ಯಕ್ತಿಯ ಸೌಂದರ್ಯಕ್ಕೆ ವಿಶೇಷ ಕಾಂತಿ ಬರುತ್ತದೆ. ವ್ಯಕ್ತಿಗೆ ಮೆರಗು ಬರಲು ರೂಪ, ಆಕಾರ, ಆರೋಗ್ಯದ ಜೊತೆಗೆ ನಿರ್ಮಲ ಮನಸ್ಸು, ವ್ಯವಹಾರ ಕುಶಲತೆಯೂ ಇರಬೇಕಾಗುತ್ತದೆ. ಪ್ರಕೃತಿದತ್ತವಾದ ರೂಪ, ಬಣ್ಣ, ಆಕಾರದ ಜೊತೆಗೆ ಆಕರ್ಷಕವಾಗಿ ಕಾಣಲು ಸ್ವಪ್ರಯತ್ನದಿಂದ ಸುಂದರ ವ್ಯಕ್ತಿತ್ವವನ್ನು, ಪ್ರಸನ್ನಚಿತ್ತವನ್ನು ತಮ್ಮದಾಗಿಸಿಕೊಳ್ಳಬೇಕು. ಶಾರೀರಿಕ ಸೌಂದರ್ಯಕ್ಕಿಂತ, ಆಂತರಿಕ ಸೌಂದರ್ಯ, ಒಳ್ಳೆಯ ಗುಣ ಸ್ವಭಾವಗಳು, ವ್ಯಕ್ತಿಗೆ ಸುಂದರ ವ್ಯಕ್ತಿತ್ವವನ್ನು ತಂದುಕೊಡುತ್ತದೆ. ಸೌಂದರ್ಯವನ್ನು ಅಳೆಯುವ ನಿರ್ದಿಷ್ಟ ಮಾನದಂಡ ಎಂಬುವುದಿಲ್ಲ. ಸಹಜ ಅಲಂಕಾರವು ಸ್ತ್ರೀಯರ ರೂಪಕ್ಕೆ ಮೆರಗು ನೀಡುತ್ತದೆ. ಕೃತಕ ಶೃಂಗಾರವು ಆಕರ್ಷಿಸಬಹುದು. ಆದರೆ ಅದು ತಾತ್ಕಾಲಿಕ ಮಾತ್ರ. ಎಲ್ಲರೂ, ಎಲ್ಲಾ ಕಾಲಕ್ಕೂ ಎಲ್ಲರಿಗೂ ಸುಂದರವಾಗಿಯೇ ಕಾಣುವುದು ಅಸಂಭವ, ಆದರೆ ಇತರರನ್ನು ಆಕರ್ಷಿಸುವ ಗುಣಗಳು ಪ್ರತಿಯೊಬ್ಬರಲ್ಲೂ ಇರುತ್ತವೆ. ಪ್ರೀತಿ, ವಿಶ್ವಾಸ, ಸದ್ಭಾವನೆ, ಸದ್ವಿಚಾರಗಳು, ಧನಾತ್ಮಕ ಯೋಚನೆಗಳು ಮನುಷ್ಯನ ವ್ಯಕ್ತಿತ್ವಕ್ಕೆ ಸೌಂದರ್ಯವನ್ನೂ ಮುಖಕ್ಕೆ ಕಾಂತಿಯನ್ನೂ ತರುತ್ತವೆ. ಸ್ನೇಹಕ್ಕೆ ಸ್ನೇಹ ಪ್ರೀತಿಗೆ ಪ್ರೀತಿ ಎಂಬ ಮಾತು ಸತ್ಯವೆನಿಸುತ್ತದೆ.

ಜೀವನದಲ್ಲಿ ಯಶಸ್ಸು ತಮ್ಮದಾಗಬೇಕೆಂದು ಪ್ರತಿಯೊಬ್ಬರೂ ಬಯಸುತ್ತಾರೆ. ಆದರೆ ಯಶಸ್ಸು ಪಡೆಯಲು ಪರಿಶ್ರಮ ಅಗತ್ಯ ಎಂಬ ಸಂಗತಿಯನ್ನು ಒಪ್ಪಲು ಯಾರೂ ಸಿದ್ಧರಿಲ್ಲ. ಯೇನಕೇನ ಪ್ರಕಾರೇಣ ಗೆಲುವು ನಮ್ಮದಾಗಬೇಕೆನ್ನುತ್ತಾರೆ. ಸಾಧನೆ, ಸಿದ್ಧತೆಗಳಿಲ್ಲದಿದ್ದರೆ ಯಶಸ್ಸು ನಮ್ಮ ಕೈಗೆ ಎಟಕುವುದಿಲ್ಲ. ನಿಶ್ಚಿತ ಗುರಿ, ಪರಿಶ್ರಮ, ಗೆಲುವಿಗೆ ದಾರಿ. ಅನೇಕರು ಅದೃಷ್ಟವಿದ್ದರೆ ಯಶಸ್ಸು ತಾನೇ ಬರುತ್ತದೆ ಎಂಬ ಭ್ರಮೆಯಲ್ಲಿರುತ್ತಾರೆ. ಇದು ತಪ್ಪು ಕಲ್ಪನೆ. ಪ್ರಾಮಾಣಿಕ ಪ್ರಯತ್ನ, ಕಾರ್ಯಸಾಧನೆಯಿಂದ ಮಾತ್ರ ಯಶಸ್ಸು ಪಡೆಯಬಹುದು. ನಮ್ಮ ಮಾತು ಮತ್ತು ಕೃತಿಯಿಂದ ನಮ್ಮ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಬಹುಪಾಲು ಜನ ತಮ್ಮ ಮಾತಿನಿಂದಲೇ ತಮ್ಮ ವ್ಯಕ್ತಿತ್ವಕ್ಕೆ ಹಾನಿಯುಂಟುಮಾಡಿಕೊಳ್ಳುತ್ತಾರೆ. ಸಣ್ಣ ಮಾತು, ಕ್ಷುಲ್ಲಕ ಕೆಲಸಗಳು, ಹೇಳುವುದೊಂದು, ಮಾಡುವುದೊಂದು ವ್ಯಕ್ತಿಯ ವ್ಯಕ್ತಿತ್ವವನ್ನು ನಾಶ ಮಾಡುತ್ತವೆ. ಮೃದು ಮಾತು, ಉನ್ನತ ಚಿಂತನೆಗಳು, ಆಪತ್ತಿನಲ್ಲಿ ನೆರವು, ಸಹೃದಯತೆ ಮನುಷ್ಯನಿಗೆ ಶೋಭೆ ತರುತ್ತವೆ, ವ್ಯಕ್ತಿತ್ವಕ್ಕೆ ಮೆರಗು ನೀಡುತ್ತವೆ. ಮನುಷ್ಯ ಜೀವನದಲ್ಲಿ ನೆಮ್ಮದಿ, ಸಂತೋಷದಿಂದ ಇರಲು ಪ್ರತಿಯೊಬ್ಬರೂ ಬಯಸುತ್ತಾರೆ. ಇದಕ್ಕಾಗಿ ನಾವು ಹೆಚ್ಚು ಕಷ್ಟಪಡಬೇಕಾಗಿಲ್ಲ. ನಮ್ಮಷ್ಟಕ್ಕೆ ನಾವಿರಬೇಕು. ಜೊತೆಗೆ ಬೇರೆಯವರು ಅವರ ಇಷ್ಟದಂತೆ ಅವರಿರಲು ಬಿಡಬೇಕು. ಎಷ್ಟೋ ಬಾರಿ ಈ ಸೂತ್ರ ಬಹುಪಾಲು ಜನರಿಗೆ ಒಪ್ಪಿಗೆಯಾಗುವುದಿಲ್ಲ. ಬೇರೆಯವರ ತಪ್ಪು, ದೋಷಗಳನ್ನು ಎತ್ತಿ ತೋರಿಸಿದರೇ ಕೆಲವರಿಗೆ ವಿಚಿತ್ರ ಸಮಾಧಾನ ದೊರೆಯುತ್ತದೆ. ಇದರಿಂದಲೇ ಎಲ್ಲಾ ರಗಳೆ, ಜಗಳ, ಮನಸ್ತಾಪ ಎಂಬ ತಿಳುವಳಿಕೆ ಇದ್ದರೂ, ನಾವು ಇದನ್ನೇ ಪುನಃ ಪುನಃ ಮಾಡಲು

ಬಯಸುತ್ತೇವೆ. ಇದಕ್ಕೆ ಕಾರಣವೇನು ? ತಮ್ಮ ಪಾಡಿಗೆ ತಾವು ಇರದೆ ಬೇರೆಯವರನ್ನು ಕೆಣಕುವುದರಿಂದ ಅನಗತ್ಯ ಕಿರಿಕಿರಿ ವೈಷಮ್ಯಗಳು ಹುಟ್ಟುತ್ತವೆ. ನಮ್ಮ ಪಾಡಿಗೆ ನಾವು ಬಾಳುತ್ತಾ ಇತರರನ್ನು ಅವರಿಷ್ಟದಂತೆ ಬಾಳಲು ಬಿಟ್ಟರೆ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ದೊರೆಯುತ್ತದೆ.

ಬುದ್ಧಿವಂತರು ವಿಚಾರಮಾಡಿ ಮಾತನಾಡುತ್ತಾ ಸ್ನೇಹಿತರನ್ನು ಸಂಪಾದಿಸುತ್ತಾರೆ. ಮೂರ್ಖರು ವಿಚಾರ ಮಾಡದೇ ಮಾತನಾಡಿ ಶತ್ರುಗಳನ್ನು ಸಂಪಾದಿಸುತ್ತಾರೆ ಎಂಬ ಮಾತಿದೆ. ಕೆಲವರು ತಾವು ಹೇಳಿದ್ದೇ ಸರಿ, ತಾವು ಮಾಡಿದ್ದೇ ಸರಿ, ತಾವು ಮಾತ್ರ ಸರಿಯಾದ, ಸತ್ಯದ ಮಾರ್ಗದಲ್ಲಿದ್ದೇವೆ ಎಂಬ ಭ್ರಮೆಯಲ್ಲಿರುತ್ತಾರೆ. ಅತಿಯಾದ ಆತ್ಮವಿಶ್ವಾಸದಿಂದ ಇತರರ ಮಾತಿಗೂ ಬೆಲೆ ಕೊಡದೆ, ತಮ್ಮ ಅಭಿಪ್ರಾಯವೇ ಸರಿ ಎಂದು ಭಾವಿಸುತ್ತಾರೆ. ಬೇರೆಯವರ ಮಾತಿಗೆ ಕಿವಿಗೊಡುವುದು ತಮ್ಮ ಮರ್ಯಾದೆಗೆ ಕುಂದು, ಅವಮಾನ ಎಂದೇ ತಿಳಿದಿರುತ್ತಾರೆ. ಇಂತಹವರ ಜೊತೆ ವ್ಯವಹರಿಸುವುದು ತುಂಬ ಕಷ್ಟದ ಕೆಲಸ. ಈ ರೀತಿಯ ಮನೋಭಾವದಿಂದ ಅನೇಕ ಬಾರಿ ತಮ್ಮನ್ನು ತಾವೇ ಕಷ್ಟಕ್ಕೆ ಸಿಲುಕಿಸಿಕೊಳ್ಳುತ್ತಾರೆ. ತಮ್ಮ ಮಾತಿಗೆ ಬಲವಾಗಿ ಅಂಟಿಕೊಂಡು, ಸಣ್ಣ ಸಂಗತಿಗಳನ್ನು ಪ್ರತಿಷ್ಠೆಯ ವಿಷಯವನ್ನಾಗಿಸಿಕೊಳ್ಳುವವರು ತಾವೂ ಬೆಳೆಯುವುದಿಲ್ಲ, ಇತರರನ್ನೂ ಬೆಳೆಯಲು ಬಿಡುವುದಿಲ್ಲ. ಆತ್ಮೀಯ ಸ್ನೇಹಿತರ ಮಾತನ್ನು ಕೇಳದವರು, ಅವರ ವಾದವನ್ನು ತಾಳ್ಮೆಯಿಂದ ಆಲಿಸದವರು, ತಮ್ಮನ್ನು ತಾವೇ ವಂಚಿಸಿಕೊಳ್ಳುತ್ತಾರೆ. ಹೊಸ ವಿಚಾರಗಳಿಗೆ ಕಿವಿಗೊಡದವರು ಪರಿಪಕ್ವರಾಗುವುದಿಲ್ಲ. ಅಲ್ಲದೇ ಅಂಥವರ ವ್ಯಕ್ತಿತ್ವವೂ ವಿಕಸನವಾಗುವುದಿಲ್ಲ. ಒಳ್ಳೆಯ ವಿಚಾರಗಳು ಎಲ್ಲಾ ದಿಕ್ಕಿನಿಂದಲೂ ಬರಲಿ. ಅದಕ್ಕಾಗಿ ನಮ್ಮ ಕಿವಿಗಳು ಸದಾ ತೆರೆದಿರುವಂತಾಗಲಿ.

**ಜಯದೇವಪ್ಪ ಜೈನಕೇರಿ,**
೮೭, 'ಶಾಂತಲಾ', ಕುವೆಂಪು ರಸ್ತೆ, ಶಿವಮೊಗ್ಗ – ೫೭೭ ೨೦೧

---

*೬೦ನೇ ಪುಟದಿಂದ*

ನಿರಸನದ ಯಾನಕ್ಕೆ ಹಿಂದಕ್ಕೆ - ಮುಂದಕ್ಕೆ ಎಂಬುದಿರುವುದಿಲ್ಲ. ಇದು ಎಲ್ಲ ಸಂರಚನೆಗಳಾಚೆಗೆ ಹೋಗುವುದಕ್ಕೆ ಉದ್ದೇಶಿಸಿದ ಪಯಣ. 'ಸಂಕಟವಿದೆ, ಸಂಕಟ ಪಡುವವನಿಲ್ಲ; ದಾರಿಯಿದೆ ದಾರಿಹೋಕನಿಲ್ಲ, ನಿರ್ವಾಣವಿದೆ ಅಲ್ಲಿಗೆ ಪ್ರವೇಶಿಸುವವನಿಲ್ಲ ಎಂದಂತೆ.' ಇದೆಲ್ಲ ಬೌದ್ಧಿಕ ವಿವರಣೆಯ ಜಗ್ಗಾಟ, ನಾಯಿಗಳು ಒಣಬಟ್ಟೆಗೆ ಜಗ್ಗಾಡಿದಂತೆ. ಅನಾತ್ಮವೆಂಬ ಅಪರಿಕಲ್ಪನೆಯ ವಿವರಣೆಗೆ ಇದೊಂದು ದುರ್ಬಲ ಪ್ರಯತ್ನ.

ಹೀಗೆ 'ಹಠ' ಹಿಡಿದು ಪಡೆದ ಅರಿವು ತೋರಿಸಿ ಕೊಟ್ಟ ಮಾರ್ಗವೆಂದರೆ ಅಂಗಪ್ರಜ್ಞೆಯ ನಿರಸನ. ಈ ಅರಿವು ವರ್ತಮಾನದ ಲೋಕ ಸಂಕಟಕ್ಕೆ ಕಾವ್ಯದ ಮೂಲಕ ಹೇಗೆ ಪ್ರತಿಕ್ರಿಯಿಸಬಲ್ಲದು ?

ಸಂಬಂಧದ ಮೂಲಕವೇ ಅಸ್ತಿತ್ವಕ್ಕೆ ಬಂದ ಈ ಲೋಕವನ್ನು ಕವಿ 'ಬಂಧುವೇ' ಎಂದು ಕರೆದು ತನ್ನನ್ನೂ, ತನ್ನ ಅಂತರಂಗವನ್ನೂ ಒಮ್ಮೆ ಸ್ಪರ್ಶಿಸಿ ಹೋಗಲು ಆಹ್ವಾನಿಸುತ್ತಿದ್ದಾರೆ.

> **ಚಲಿಸುತ್ತಾ ನುಡಿಯುತ್ತಿರುವ ಕಲಾ ಪರಂಪರೆಗಳೆಲ್ಲ ಆತ್ಯಂತಿಕವಾಗಿ ಡೆಮಾಕ್ರಿಟಿಕ್ ಗುಣವುಳ್ಳವು. ಹಾಗಾಗಿ ಈ ಮಾರ್ಗದ ಎಲ್ಲಾ ಕಲಾಭಿವ್ಯಕ್ತಿಗಳಿಗೂ ಇಂದು ಕಾಡುತ್ತಿರುವ ಬಿಕ್ಕಟ್ಟು ಈ ಕವಿಗೂ ಇದೆ.**

ಬನ್ನಿ ಬಂಧುಗಳೇ ಬನ್ನಿ
ಮುಟ್ಟಿನೋಡಿ, ಮುಟ್ಟುಗೆಟ್ಟುನೋಡಿ
ಹುಟ್ಟಿನೋಡಿ ನನ್ನಂತೆ ಹುಟ್ಟಿನೋಡಿ
ಬಂದು ಹೋಗಿ ನೀವು ಬಂದು ಹೋಗಿ.

ಲೋಕವನ್ನು ಅರಿತುಕೊಳ್ಳಲು, ತನ್ನನ್ನು ಅರಿತುಕೊಳ್ಳಲು ಮತ್ತು ಲೋಕವನ್ನು ಮುಟ್ಟಿ ಬಾಳಲು ಬೇಕಾಗಿರುವ ಕರುಣೆ ಮೈತ್ರಿಯೇ ಕಾವ್ಯವನ್ನು ಅರಿಯಲೂ ಬೇಕಾಗಿರುವುದು. ಈ ಅರಿವಿನ ಬೆಳಕಿಲ್ಲದೇ ಕಾವ್ಯವೆಂಬ ನಾಲಿಗೆಯ ಮೇಲೆ ನಡೆಯಲಾಗದು, ನುಡಿಯಲಾಗದು.

ಈ ಖಂಡಕಾವ್ಯದ ಯಾನದಲ್ಲಿ ಅಲ್ಲಲ್ಲಿ ಕರುಣೆ ಸ್ನೇಹದ ಕರಗಳ ಸ್ಪರ್ಶವಾಗುವ ಅನುಭವವಾದೀತು. ಬುದ್ಧ ಗುರು - ಅಂಬೇಡ್ಕರ್, ನಾಗಲಿಂಗಯೋಗಿ - ಶರೀಫ, ಅಲ್ಲಮ - ಗಾಂಧಿ, ಬಸವಣ್ಣ - ಲೋಹಿಯಾ ಜೋಡಿ ಜೋಡಿಯಾಗಿ ಸಾಗುತ್ತಿರಬಹುದು, ಅವರ ಕರಸ್ಪರ್ಶದ ಅರಿವಾಗಬಹುದು. ನಡುನಡುವೆ ಕೇಬಿ ಎಲ್ಲಿ? ಎಂಬ ಆತಂಕವೂ ಮೂಡಬಹುದು.

ಅರಿಯುವ ಪರಿಯೊಳಗೆ
ಅರಿವು ಗುರುವಾಗಿತ್ತು
ಅರಿವೆಂಬ ಗುರುವನ್ನೇ
ಧ್ಯಾನಿಸಿ, ಧ್ಯಾನಿಸಿ, ಧ್ಯಾನಿಸುತ್ತಾ
ಶಿಷ್ಯನೇ ಗುರುವಾಗಿ ನಡೆದದಾರಿ....
ನಡೆಯುವವನು ಬಳಲುವನಲ್ಲದೆ
ದಾರಿ ಬಳಲುವುದೇ...

ಸೂರ್ಯ ಪ್ರಭೆಯೇ ಕೇಳು
ಈ ಭೂಮಿ ನಿನ್ನ ಗುಲಾಮನು
ಬೆಳಕಿಗೆ ನಿನ್ನನೆ ಆಶ್ರಯಿಸಿರುವ
ಭೂಮಿಯ ಬೆಳಗಬಹುದಲ್ಲದೆ
ನನ್ನ ಒಳಗನು ನನಗೆ ಕಾಣಿಸಲಾರೆ

ಇಲ್ಲೆಲ್ಲ ಅಂತಹ ಆತಂಕವು ಎದುರಾಗುತ್ತದೆ. ಚಲಿಸುತ್ತಾ ನುಡಿಯುತ್ತಿರುವ ಕಲಾ ಪರಂಪರೆಗಳೆಲ್ಲ ಆತ್ಯಂತಿಕವಾಗಿ ಡೆಮಾಕ್ರಿಟಿಕ್ ಗುಣವುಳ್ಳವು. ಹಾಗಾಗಿ ಈ ಮಾರ್ಗದ ಎಲ್ಲಾ ಕಲಾಭಿವ್ಯಕ್ತಿಗಳಿಗೂ ಇಂದು ಕಾಡುತ್ತಿರುವ ಬಿಕ್ಕಟ್ಟು ಈ ಕವಿಗೂ ಇದೆ.

ಹಿಂದೂಧರ್ಮದಲ್ಲಿನ ಬಾಳು ಒಂದು ನಿರಂತರ ರೋಗಿಷ್ಠ ಸ್ಥಿತಿ. ಅನುಭವಿಸೀ ಅನುಭವಿಸೀ ಅದೇ ವ್ಯಸನವಾಗಿರುವ ವ್ಯವಸ್ಥೆ. ಈಗಂತೂ ವ್ರಣವಾಗಿ ಕೀತು ನಾರುತ್ತಿದೆ. ಜಾಗತೀಕರಣ ಖಾಸಗೀಕರಣ ಇನ್ನೂ ಎಂತೆಂಥದೋ ಶಬ್ದಗಳನ್ನು ದುಷ್ಟ ದರೋಡೆಕೋರ ವ್ಯವಸ್ಥೆಗಳಿಗೆ ಪರ್ಯಾಯ ಪದಗಳನ್ನಾಗಿ ಬಳಸಿಕೊಂಡು, ಅಧಿಕಾರ ಕೇಂದ್ರಗಳೆಲ್ಲ ಸರ್ವಾಧಿಕಾರಕ್ಕೆ ತಮ್ಮನ್ನು ಒಪ್ಪಿಸಿಕೊಳ್ಳುತ್ತಿವೆ. ಈಗ ಏನಾಗುತ್ತಿದೆ ಎಂದು ತಿಳಿಸಲು ಹೊಸ ಪರಿಭಾಷೆ, ಪರಿಕಲ್ಪನೆಗಳನ್ನು ಸೃಷ್ಟಿಸಿಕೊಂಡು ನಂತರ ಮಾತನಾಡಬೇಕಾಗಿದೆ. ಭಾಷೆಯಾಚೆಗಿನ ಮೌನವನ್ನು ಕೊಂದು ಬಿಂದು - ಶೂನ್ಯಗಳ ಏಕಭಾಷೆಯ ವೈಶ್ವಿಕ ಕಡಿವಾಣ ಸಿದ್ಧಪಡಿಸಿ ವೈಟ್‌ಹೌಸಿನ ದುಷ್ಟ ಕೈಗೆ ನೀಡಲಾಗುತ್ತಿದೆ. ಹಾಗಾಗಿ ಈ ಕವಿ ತನ್ನದೇ ಆದ ಸ್ವಂತದ್ದೊಂದು ಸ್ಥಳಕ್ಕಾಗಿ ಪರದಾಡುತ್ತಿದ್ದಾರೆ.

ಚಟ್ಟ ಬಿದಿರು ಆತ್ಮ ಇದಿರು
ಭಾರತಾಂಬೆ ಹೆಣವ ಹೊತ್ತು
ಚಟ್ಟ ಬಂತು ಚಟ್ಟ
ಅಮೇರಿಕಾದ ವೈಟ್‌ಹೌಸ್
ಅಟ್ಟ ಇಳಿದು
ಕೊಂದು ತಿಂದು ರಕ್ತ ಕುಡಿದು

ಚಟ್ಟ ಬಂತು ಚಟ್ಟ
ಚಟ್ಟ ಬಂತು ಪಟ್ಟಕೆ
ನಡೆಯೋ ಸಿದ್ಧರ ಬೆಟ್ಟಕೆ.

ನೆಲದ ಸಂಸ್ಕೃತಿಯ ಜೀವ ಕೇಂದ್ರಗಳಾಗಿ ಸಿದ್ಧರ ಬೆಟ್ಟದಂತಹ ಸ್ವತಂತ್ರ ಸ್ಥಳಗಳನ್ನು ಹುಡುಕಿಕೊಳ್ಳದೇ ಹೋದರೆ, ಅಂತಹ ಸ್ವತಂತ್ರ ಸ್ಥಳಗಳನ್ನು ಪುನಶ್ಚೇತನಗೊಳಿಸಿಕೊಳ್ಳದೇ ಹೋದರೆ ಸರ್ವನಾಶವಾಗುವ ಆತಂಕವನ್ನು ನಾವಿಂದು ಎದುರಿಸುತ್ತಿದ್ದೇವೆ. ಈ ಕಾವ್ಯ ಅದನ್ನು ನಮ್ಮ ಅರಿವಿಗೆ ತಂದುಕೊಡುತ್ತದೆ.

**ಎಸ್. ನಟರಾಜ ಬೂದಾಳು**
'ಗೌರಿ', ಸಪ್ತಗಿರಿ ಬಡಾವಣೆ, ನಳಂದ ಶಾಲೆ ಹಿಂಭಾಗ, ತುಮಕೂರು



# ಪ್ರಸ್ತುತವಿದೆ
# ಹಿಂದೆಂದಿಗಿಂತಲೂ
# ಉತ್ತಮವಾದ ಹೊಸ
# ಸಂತೂರ್

ಇದೀಗ ಹೊಸ ಸಂತೂರ್ ಬಳಸಲು ಇನ್ನಷ್ಟು ಕಾರಣಗಳು

**ನ್ಯಾಚುರಲ್ ಸ್ಕಿನ್ ಸಾಫ್ಟನರ್ಸ್**
ನೀಡುವುದು ಕೋಮಲ
ಹಾಗೂ ನುಣುಪಾದ ತ್ವಚೆ

ಮೈಮರೆಸುವ **ಹೊಸ ಪರಿಮಳ**
ನೀಡುವುದು, ಆಹ್ಲಾದಕರ
ಸ್ನಾನದ ಅನುಭವ

**ಚಂದನ ಮತ್ತು ಅರಿಸಿನದ**
**ಅಡ್ವಾನ್ಸ್ಡ್ ಎಕ್ಸ್‌ಟ್ರಾಕ್ಟ್ಸ್**
ನೀಡುವುದು
ತಾರುಣ್ಯ ಭರಿತ ತ್ವಚೆ




ಹೊಸ **ಸಂತೂರ್**

ನಿಮಗೆಂದೇ ವಿಶೇಷವಾಗಿ

HOSATHU Kannada Monthly / August 2004 Rs. 10
RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna